|| ಶ್ರೀಃ ||

# ವೈದಿಕವಾಙ್ಮಯ—
# —ಪರಿಚಯ



ಲೇಖಕರು

ವಿದ್ವಾನ್. ರಾಮಚಂದ್ರಭಟ್ಟರು ಹಾಸಣಗಿ

ಸಂಸ್ಕೃತ ಪಂಡಿತರು.

ಬಿ. ಎಂ. ಎಂ. ಹೈಸ್ಕೂಲ್, ಚಳ್ಳಕೆರೆ.



ಬೆಲೆ

ಉತ್ತಮ ಪ್ರತಿ ೨—೮—೦ ಸಾಧಾರಣ ಪ್ರತಿ ೨—೦—೦

ಪ್ರಥಮ ಆವೃತ್ತಿ
1955 ಜೂಲೈ



ಶಾ॥ ಶ॥ ೧೮೭೭ ಮನ್ಮಥಸಂವತ್ಸರ

ಶ್ರಾವಣಶುದ್ಧಪಂಚಮೀ.



ಮುದ್ರಕರು
ಶ್ರೀ ಸತ್ಯನಾರಾಯಣ ಮುದ್ರಣಾಲಯ
ಚಳ್ಳಕೆರೆ.

|| ಶ್ರೀ ಲಕ್ಷ್ಮೀನರಸಿಂಹ ಪ್ರಸನ್ನಃ ||



ಶ್ರೀ ಸೋದಾಸ್ವರ್ಣವಲ್ಲೀಮಠದ ಪೀಠಾಧಿಷ್ಠಿತರಾದ
ಶ್ರೀ ಶ್ರೀ ಸರ್ವಜ್ಞೇಂದ್ರ ಸರಸ್ವತೀಮಹಾಸ್ವಾಮಿಗಳು.

# ಅರ್ಪಣೆ

ವೈದಿಕಧರ್ಮದಲ್ಲಿದ್ದ
ತಮ್ಮ ಅಚಲವಾದ ಶ್ರದ್ಧೆಯಿಂದಲೂ
ನಿರಾಡಂಬರವಾದ ತಪೋನುಷ್ಠಾನಗಳ
ರೀತಿಯಿಂದಲೂ ನನಗೆ ಸನಾತನವೈದಿಕಧರ್ಮ
ಭಾರತದ ಪ್ರಾಚೀನ ಧರ್ಮಶಾಸ್ತ್ರಗಳಲ್ಲಿ
ಶ್ರದ್ಧೆ, ಆಸಕ್ತಿಗಳನ್ನು ಹುಟ್ಟಿಸಿದ
ಶ್ರೀ ಸೋದಾಸ್ವರ್ಣವಲ್ಲೀ ಮಠದ
ಪೀಠಾಧಿಷ್ಠಿತರಾದ
ಶ್ರೀ ಶ್ರೀ ಸರ್ವಜ್ಞೇಂದ್ರ ಸರಸ್ವತೀ ಮಹಾಸ್ವಾಮಿ
ಗಳವರ ದಿವ್ಯಪಾದಾರವಿಂದಗಳಲ್ಲಿ ಇದನ್ನು
ಭಕ್ತಿಯಿಂದ ಅರ್ಪಿಸಿದ್ದೇನೆ.

ರಾ. ಭ. ಹಾಸಣಗಿ

॥ ಶ್ರೀ ಲಕ್ಷ್ಮೀನೃಸಿಂಹ ಪ್ರಸನ್ನಃ ॥

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಶ್ರೀಮತ್ ಸೋದಾ ಸ್ವರ್ಣವಲ್ಲೀ ಮಹಾಸಂಸ್ಥಾನಾಧೀಶ್ವರ ಶ್ರೀಮತ್ ಗಂಗಾಧರೇಂದ್ರ ಸರಸ್ವತೀ ಶ್ರೀಸ್ವಾಮಿಕರಕಮಲಸಂಜಾತ ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ ಶ್ರೀಸ್ವಾಮಿಗಳವರ

## ಸಂದೇಶವು

ಹಾಸಣಗಿ ರಾಮಚಂದ್ರಭಟ್ಟರು ಬರೆದ ವೈದಿಕವಾಙ್ಮಯಪರಿಚಯ ಎಂಬ ಈ ಪುಸ್ತಕದ ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿಸಿ ಕೇಳಿದ್ದಾಯ್ತು. ಇದರಲ್ಲಿನ ವಿಷಯವಿಭಾಗದೊಳಗಿನ ಪ್ರತಿಯೊಂದು ರೀತಿಯು ನಮ್ಮ ದಾರ್ಶನಿಕ ಕ್ರಮವನ್ನು ಮೀರದಂತೆ ಮುಂದೆ ಸಾಗುತ್ತಾ ಆಧುನಿಕ ವಿಮರ್ಶಕರ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಿದೆ.

ವೇದದ ಶಾಖಾಂತರಗಳು, ಉಪನಿಷತ್ತುಗಳು, ಸ್ವರಗಳು, ವೈದಿಕ ಯಜ್ಞಗಳು, ವೇದಾಧಿಕಾರಿಗಳು, ವೈದಿಕರಾಜ್ಯಶಾಸನಕ್ರಮಗಳು, ವೇದಾಭ್ಯಾಸಕ್ರಮ, ವೇದದ ಕಾಲವಿಚಾರ, ವೇದಾಂಗಗಳ ವಿವರಣೆ, ಸಾಯಣಾಚಾರ್ಯರು ಇವೆಲ್ಲ ಪ್ರಕರಣಗಳು ಪಂಡಿತಪಾಮರರಿಗೂ ಸುಲಲಿತವಾದ ರೀತಿಯಿಂದ ತಿಳಿಯುವಂತೆ ಬರೆಯಲ್ಪಟ್ಟವೆ.

ನಮ್ಮ ಪೂರ್ವೀಕರು ಬಹುಶ್ರಮದಿಂದ ಕಾದುಕೊಂಡುಬಂದ ನಮ್ಮ ವೈದಿಕಗ್ರಂಥಗಳನ್ನು ಪರರಾಷ್ಟ್ರದವರು ತಮ್ಮ ಹಲವು ಭಾಷೆಗಳಿಂದ ಭಾಷಾಂತರಿಸಿ ಅದರಲ್ಲಿರುವ ಮಹತ್ವವನ್ನು ಕಂಡುಹಿಡಿದು ಅದರಿಂದ ಆಧ್ಯಾತ್ಮಿಕ, ವೈಜ್ಞಾನಿಕ ಸುಖಶಾಂತಿಗಳನ್ನು ಹೊಂದುತ್ತಿರುವರು.

ಇದನ್ನು ನಾವು ಕಣ್ತುಂಬ ನೋಡಿದರೂ ನಮ್ಮದೇ ಆದ ವೈದಿಕ ವಿಜ್ಞಾನದಲ್ಲಿ ಮಹತ್ವವೇನಿಸೆ ಎನ್ನುವುದನ್ನು ತಿಳದುಕೊಳ್ಳಲು ನಮ್ಮ ಜನತೆಯ ಮನೋವೃತ್ತಿಯು ಹರಿಯದಿರುವ ಇಂಥ ಸಮಯದಲ್ಲಿ ಈ ಪುಸ್ತಕವನ್ನು ಬರೆದಿರುವ ರಾಮಚಂದ್ರಭಟ್ಟರು ಹಾಸಣಗಿ ಇವರು ತಮ್ಮ ಬಾಲ್ಯದಲ್ಲಿ ಬಹಳ ಶ್ರಮದಿಂದ ಸಂಸ್ಕೃತ ಸಾಹಿತ್ಯ ನ್ಯಾಯ ಶಾಸ್ತ್ರಗಳನ್ನಭ್ಯಸಿಸಿ ಇದರಿಂದುಂಟಾದ ಜ್ಞಾನದಿಂದ ಬರೆದ ವೈದಿಕವಾಙ್ಮಯಪರಿಚಯ ಪುಸ್ತಕವನ್ನು ಓದುಗರೆಲ್ಲರೂ ಆದರದಿಂದ ಓದಿ ಇದರ ಮಹತ್ವವನ್ನು ತಿಳಿದುಕೊಳ್ಳುವುದರಿಂದ ಇವರ ಶ್ರಮವು ಸಫಲವಾಗಲೆಂದೂ ಇನ್ನು ಮುಂದೆಯೂ ಈರೀತಿಯ ಇವರ ಪರಿಶ್ರಮವು ಶ್ರೀದೇವರ ಕೃಪೆಯಿಂದ ಯಶಸ್ವಿಯಾಗಲೆಂದು ಆಶಿಸಲಾಗಿದೆ.

(ಸಹಿ) ಸರ್ವಜ್ಞೇಂದ್ರಸರಸ್ವತೀಸ್ವಾಮೀ

ಮಾರ್ಗಶಿರವದ್ಯ ೩೦ ಚಂದ್ರವಾರ        ಶ್ರೀ ಸ್ವರ್ಣವಲ್ಲೀಮಹಾಸಂಸ್ಥಾನಂ.

ವಿಜಯ ಸಂ|| ೧೮೭೫

# ವಿಜ್ಞಪ್ತಿ

ಇಷ್ಟು ತಡವಾಗಿಯಾದರೂ ಈ ಪುಸ್ತಕವು ಪ್ರಕಟವಾಗಲು ಕಾರಣರು ಮೈಸೂರು ಘನಸರ್ಕಾರದವರು. ಇವರು ಶ್ರೀ ದೇವರಾಜಬಹದ್ದೂರ್ ರವರ ಸಾಹಿತ್ಯಪಾರಿತೋಷಿಕವನ್ನು ಕೊಟ್ಟು ಒಂದು ವರ್ಷದಲ್ಲಿ ಪ್ರಕಟಿಸಬೇಕೆಂದು ನಿರ್ಬಂಧಿಸದಿದ್ದರೆ ಈಗಲೂ ಇದು ಖಂಡಿತವಾಗಿ ಬೆಳಕಿಗೆ ಬರುತ್ತಿರಲಿಲ್ಲ. ಆದಕ್ಕಾಗಿ ಈ ಬಹುಮಾನವನ್ನು ಕೊಟ್ಟು ಆದರಿಸಿದ ಪಾರಿತೋಷಿಕವಿತರಣಸಮಿತಿಯವರಿಗೂ ಅದರ ಅಧ್ಯಕ್ಷರಿಗೂ ವಂದಿಸುತ್ತೇನೆ.

ಇದರ ಜೊತೆಗೆ ಈ ಪುಸ್ತಕವನ್ನು ತಮ್ಮ ದಿವ್ಯಪಾದಾರವಿಂದಗಳಲ್ಲಿ ಅರ್ಪಿಸಲು ಶಿಷ್ಯವಾತ್ಸಲ್ಯದಿಂದ ಒಪ್ಪಿಕೊಂಡು ಪುಸ್ತಕದ ಹಸ್ತಪ್ರತಿಯನ್ನು ಓದಿಸಿಕೇಳಿ ತಮ್ಮ ಹಾರ್ದಿಕವಾದ ಆಶೀರ್ವಾದದ ಕವಚವನ್ನು ಇದಕ್ಕೆ ಹೊದಿಸಿ ಅನುಗ್ರಹಿಸಿದ್ದಕ್ಕಾಗಿಯೂ, ಇದನ್ನು ಪ್ರಕಟಿಸಲು ಯಥೋಚಿತವಾಗಿ ದ್ರವ್ಯಸಹಾಯ ಮಾಡಿದ್ದಕ್ಕಾಗಿಯೂ ಶ್ರೀ ಸೋದಾಸರ್ನವಲ್ಲೀಮಠದ ಮಹಾಸ್ವಾಮಿಗಳಾದ ಶ್ರೀ ಶ್ರೀ ಸರ್ವಜ್ಞೇಂದ್ರಸರಸ್ವತೀ ಯತಿವರೇಣ್ಯರ ಪಾದಪಂಕಜಯುಗಲದಲ್ಲಿ ಭಕ್ತಿಯಿಂದ ಶಿರಬಾಗಿ ಅಭಿವಾದಿಸುವೆನು.

ಚಳ್ಳಕೆರೆಯ ನಗರಸಭೆಯವರು ಪುಸ್ತಕದ ಪ್ರಕಟನೆಗೆಂದು ಉದಾರ ದ್ರವ್ಯಸಹಾಯ ಮಾಡಿದ್ದಕ್ಕಾಗಿ ನಗರಪಿತೃಗಳಿಗೆ ಕೃತಜ್ಞನಾಗಿರುವೆನು.

ಈ ಪುಸ್ತಕವನ್ನು ಬರೆಯಲು ಪ್ರತ್ಯಕ್ಷ ಅಪ್ರತ್ಯಕ್ಷವಾಗಿ ನನಗೆ ಸಹಾಯಕವಾದ ಗ್ರಂಥಗಳಿಗೂ ಪ್ರಬಂಧಗಳಿಗೂ ನಾನು ಋಣಿಯಾಗಿರುವೆನು. ನಾನು ಇದನ್ನು ಬರೆಯುತ್ತಿದ್ದಾಗಲೇ ಆಗಾಗ್ಗೆ ನೋಡಿ ಪ್ರೋತ್ಸಾಹಿಸುತ್ತಿದ್ದು ಕೊನೆಗೆ ಹಸ್ತಪ್ರತಿಯನ್ನು ತಿದ್ದಿಕೊಟ್ಟ ನನ್ನ ಸಹೋದ್ಯೋಗಿ ಮಿತ್ರನಾದ ಹೆಚ್. ವಿ. ಕೃಷ್ಣರಾಯರನ್ನು ಎಂದೆಂದಿಗೂ ಮರೆಯಲಾರೆ. ಇವರಂತೆಯೇ

ನನಗೆ ಬೇರೆ ರೀತಿಗಳಿಂದ ಸಹಾಯಕರಾದ ಗೆಳೆಯರೆಲ್ಲರಿಗೂ ನಾನು ಕೃತಜ್ಞ ನಾಗಿರುವೆನು. ಇದರ ಮುಖಚಿತ್ರವನ್ನು ಬರೆದುಕೊಟ್ಟು ಪುಸ್ತಕದ ಹೊರ ವೈಯನ್ನು ಅಂದಗೊಳಿಸಿದ ಚಿ|| ವಿಟ್ಠಲರಾಯನಿಗೂ, ವಿರಳ ಸುಂದರ ಅಕ್ಷರ ಗಳಿಂದ ಕೊನೆಯ ಹಸ್ತಪ್ರತಿಯನ್ನು ಬರೆದುಕೊಟ್ಟ ಚಿ|| ಸೌ|| ಅಮೃತಮ್ಮನಿಗೂ ದೇವರು ವಿದ್ಯಾಬುದ್ಧಿ ಆಯುರಾರೋಗ್ಯಗಳನ್ನು ಕೊಟ್ಟು ಕಾಪಾಡಲೆಂದು ಹಾರೈಸುತ್ತೇನೆ.

ಕೊನೆಯದಾಗಿ ಈ ಪುಸ್ತಕವನ್ನು ಅಚ್ಚುಮಾಡಿಕೊಟ್ಟಿದ್ದಕ್ಕಾಗಿ ಚಳ್ಳಕೆರೆಯ ಶ್ರೀ ಸತ್ಯನಾರಾಯಣ ಮುದ್ರಣಾಲಯದ ಮಾಲೀಕರನ್ನು ಇಲ್ಲಿ ನೆನೆಯುವುದು ಕರ್ತವ್ಯವಾಗಿದೆ.

ಪುಸ್ತಕದ ಪ್ರಕಟಣೆಯಲ್ಲಿ ಎಷ್ಟೇ ಪ್ರಯತ್ನವಾಡಿದರೂ ಲೋಪ ದೋಷಗಳಿಲ್ಲದಂತೆ ಮಾಡಿಸಲು ಸಾಧ್ಯವಾಗದದ್ದಕ್ಕಾಗಿ ವಾಚಕರಲ್ಲಿ ಕ್ಷಮೆ ಕೇಳುತ್ತೇನೆ. ಮುಂದೆ ತಿರುಗಿ ಇದನ್ನು ಅಚ್ಚುಹಾಕುವ ಅವಕಾಶವು ದೊರೆ ತರೆ ಇಂತಹ ತಪ್ಪುಗಳು ಆಗದಂತೆಯೂ, ಇದರೊಳಗಿನ ಸಂಹಿತೆ, ಬ್ರಾಹ್ಮಣ ಆರಣ್ಯಕ ಭಾಗಗಳ ಪರಿಚಯವನ್ನು ಇನ್ನಷ್ಟು ವಿಸ್ತಾರವಾಗಿಯೂ ವಾಚ ಕರಿಗೆ ಕೊಡುವೆನೆಂದು ವಿಶ್ವಾಸದಿಂದ ಭರವಸೆ ಕೊಡಬಯಸುತ್ತೇನೆ.

ಬಂದ ಬಹುಮಾನವನ್ನೂ ಬರೆದ ಗ್ರಂಥವನ್ನೂ ಜೀರ್ಣಿಸಿಕೊಳ್ಳುವು ದಕ್ಕಾಗಿ ಹೆತ್ತ ತಾಯಿಯು ಮಗುವನ್ನು ಕೈಬಿಡದಂತೆ ವಿಶ್ವಪ್ರಯತ್ನಮಾಡಿ ಇದನ್ನು ಪ್ರಕಟಿಸಿದ್ದೇನೆ. ಕನ್ನಡದ ಅನೇಕ ಪ್ರಕಾಶಕರು ಒಂದೂವರೆರೂಪಾ ಯಿಯ ಕಾದಂಬರಿಗಳ ಕಾಲವಾದ ಇಂದು ಇಂತಹ ಪುಸ್ತಕವನ್ನು ಪ್ರಕಟಿಸಲು ತಾವು ಅಸಮರ್ಥರೆಂದು ಹೇಳಿಕೊಳ್ಳುತ್ತಿರುವ ಸಮಯದಲ್ಲಿ ಉತ್ಸಾಹದಿಂದ ನಂಬಿಕೆಯಿಂದ ಇದನ್ನು ಕನ್ನಡ ವಾಚಕರ ಮಡಿಲಿನಲ್ಲಿ ಇಟ್ಟಿರುವೆನು. ನಮ್ಮ ಕನ್ನಡ ಬಂಧುಗಳು ವಿಷಯ ಗೌರವವನ್ನು ತಿಳಿದು ಇದನ್ನು ಸ್ವಾಗತಿಸುವರು. ಅದರಿಂದ ನಮ್ಮ ಪ್ರಕಾಶಕರಲ್ಲಿ ಮೂಡಿರುವ ಅನುಮಾನವು ನಿರಾಧಾರವಾ ದುದೆಂದು ತೋರಿಸಿಕೊಡುವರೆಂದು ದೃಢವಾಗಿ ನಂಬಿದ್ದೇನೆ.

ಮನ್ಮಥ ಸಂ|| ಶ್ರಾವಣ. ಶು|| ಪಂಚಮೀ.    ಸಜ್ಜನ ಬಂಧು:
ಚಳ್ಳಕೆರೆ    ರಾ. ಭ. ಪಾಸಣಗಿ

# ವಿಷಯಾನುಕ್ರಮಣಿಕೆ

☞ (ಆವರಣದ ಸಂಖ್ಯೆಗಳು ಪುಟಗಳನ್ನು ಸೂಚಿಸುತ್ತವೆ.)

# ಶುದ್ಧಪತ್ರ

| ಅಶುದ್ಧ | ಪುಟ | ಪಂಗ್ತಿ | ಶುದ್ಧ |
|---|---|---|---|
| ಸರ್ಗ | ವಿಜ್ಞಪ್ತಿಯಲ್ಲಿ | ೧೨ | ಸ್ವರ್ಗ |
| ತಿಳಿಯುತ್ತೈನೆ | ೮ | ೧೫ | ತಿಳಿಯುತ್ತೇನೆ |
| ವ್ರತಿಯೊಂದು | ೧೩ | ೧೧ | ಪ್ರತಿಯೊಂದು |
| ಹೆಸರಗಳಿದ್ದವು | ೧೯ | ೧೩ | ಹೆಸರುಗಳಿದ್ದವು |
| ಅರಣ್ಯಕ | ೨೧ | ೬ | ಆರಣ್ಯಕ |
| ರೂಪಲ್ಲಿಯೂ | ೨೬ | ೧೫ | ರೂಪದಲ್ಲಿಯೂ |
| ಉಹಿಸುತ್ತಾರೆ | ೩೩ | ೧೦ | ಊಹಿಸುತ್ತಾರೆ |
| ಅಧ್ವರ್ಯುಂ | ೩೪ | ೨೦ | ಆಧ್ವರ್ಯುಂ |
| ವ್ಯವಹಾರಿಕವಾಗಿ | ೩೭ | ೨ | ವ್ಯಾವಹಾರಿಕವಾಗಿ |
| ಗಾನವನ್ನೂ | ೩೮ | ೪ | ಗಾನವನ್ನು |
| ಅಭಿಚಾರಿಕ | ೪೦ | ೨೩ | ಆಭಿಚಾರಿಕ |
| ಬ್ರಾಹ್ಮಣಾದೀನಾಃ | ೪೪ | ೬ | ಬ್ರಾಹ್ಮಣಾಧೀನಾಃ |
| ಒಟ್ಟುಂಟು | ೪೭ | ೬ | ಒಟ್ಟು ಎಂಟು |
| ದೆವತಾಧ್ಯಾಯ | ೫೨ | ೩ | ದೇವತಾಧ್ಯಾಯ |
| ದಿಶವ | ೫೬ | ೧೧ | ದಿವಸ |
| ಮುಕಿರಿಷ್ಯತೇ | ೫೬ | ೧೮ | ಮುಕ್ತಿರಿಷ್ಯತೇ |
| ಕಾತರನಾವವನ | ೫೬ | ೨೨ | ಕಾತರನಾದವನ |
| ಲೋಕಲ್ಲಿನ | ೫೬ | ೨೪ | ಲೋಕದಲ್ಲಿನ |
| ವೇವಗಳಲ್ಲಿ | ೭೬ | ೧೦ | ವೇದಗಳಲ್ಲಿ |
| ದೇದತೆಗಳು | ೭೬ | ೧೧ | ದೇವತೆಗಳು |
| ವಾಡದದರು | ೯೪ | ೨೧ | ವಾದದವರು |
| ಕಾದಲ್ಲಿ | ೧೬೬ | ೧೭ | ಕಾಲದಲ್ಲಿ |
| ವೇದಥ | ೧೭೯ | ೨೫ | ವೇದದ |
| ಗಂಥ | ೧೮೦ | ೭ | ಗ್ರಂಥ |

## ....ಸಹಾಯ ಗ್ರಂಥಗಳು....

೧. ಋಕ್ಸಂಹಿತೆ.

೨. ವೇದಾಂಗಗಳು.

೩. ಬೌಧಾಯನ ಗೃಹ್ಯ ಸಂಗ್ರಹ

೪. ಸಾಹಿತ್ಯದರ್ಪಣ ಪೀಠಿಕಾ

೫. ಸರ್ವದರ್ಶನ ಸಂಗ್ರಹ

೬. ಅಷ್ಟೋತ್ತರ ಶತೋಪನಿಷದಃ

೭. ವಿಜಯನಗರ ಸಾಮ್ರಾಜ್ಯ ಸ್ಮಾರಕ ಸಂಚಿಕೆ

೮. ಸಂಸ್ಕೃತ ಸಾಹಿತ್ಯಕೀ ಇತಿಹಾಸ

೯. ಕಲ್ಯಾಣ (ಹಿಂದೀ) ಮಾಸಪತ್ರಿಕೆ.

# ಪ್ರಸ್ತಾವನೆ.

ವೈದಿಕ ವಾಙ್ಮಯದ ಪರಿಚಯ ಮಾಡಿ ಕೊಡುವಂತಹ ಕಷ್ಟಸಾಧ್ಯವಾದ ಕೆಲಸವನ್ನು ಮಾಡುವುದಕ್ಕೆ ನಾನು ಸಂಪೂರ್ಣ ಅನಧಿಕಾರಿಯೆಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ಇಂತಹ ಗುರುತರವಾದ ಕೆಲಸವನ್ನು ಕೇವಲ ಸಂಸ್ಕೃತವನ್ನು ತಿಳಿದವರಿಂದಾಗಲೀ, ಹಾಗೆಯೇ ಕೇವಲ ಆಂಗ್ಲಭಾಷಾ ಪಂಡಿತರಿಂದಾಗಲೀ ನಿರೀಕ್ಷಿಸುವಂತಿಲ್ಲ. ಇದನ್ನು ಆಂಗ್ಲ ಸಂಸ್ಕೃತ ಉಭಯ ಭಾಷಾ ವಿಶಾರದರಾಗಿದ್ದು ಭಾರತೀಯ ಸಂಸ್ಕೃತಿ, ವೇದ, ತತ್ವಶಾಸ್ತ್ರಾದಿ ಗ್ರಂಥಗಳಲ್ಲಿ ಶ್ರದ್ಧೆ, ನಂಬಿಕೆಗಳೂ ಉಪದೇಶಪರಂಪರಾಗತವಾದ ಶಾಸ್ತ್ರೀಯವಾದ ಸಂಪ್ರದಾಯಗಳ ಪರಿಚಯಗಳೂ ಇದ್ದವರು, ಪಾಶ್ಚಾತ್ಯರ ದೃಷ್ಟಿ ಕೋನದಿಂದ ಇಂತಹ ಕೆಲಸವನ್ನು ಪರಿಶ್ರಮಪೂರ್ವಕವಾಗಿ ಮಾಡಿದರೆ ಅದರಿಂದಮಾತ್ರ ಜನರಿಗೆ ಸ್ವಲ್ಪಮಟ್ಟಿಗಾದರೂ ಪ್ರಯೋಜನವು ದೊರೆಯಬಹುದೆಂದು ನಿರೀಕ್ಷಿಸಬಹುದು. ಆದರೆ ಇಂತಹ ಪ್ರಯತ್ನವು ಇತರ ವಿಷಯಗಳ ಬಗ್ಗೆ ಸ್ವಲ್ಪಮಟ್ಟಿಗೆ ನಡೆದಿರಬಹುದಾದರೂ, ವೈದಿಕ ವಾಙ್ಮಯದ ಬಗ್ಗೆ ಮಾತ್ರ ಒಂದೆರಡು ಖಂಡಲೇಖನಗಳು, ಆಗೀಗ ಪತ್ರಿಕೆಗಳಲ್ಲಿ ಪ್ರಕಟವಾಗಿರಬಹುದೇ ಹೊರತು ಒಂದು ಕ್ರಮಬದ್ಧವಾದ ರೀತಿಯಲ್ಲಿ ವೈದಿಕ ವಾಙ್ಮಯದ ವಿವಿಧಾಂಗಗಳ ಸಾಮಾನ್ಯ ಪರಿಚಯವನ್ನು ಮಾಡಿಕೊಡುವಂತಹ ಒಂದು ಪ್ರಯತ್ನವೂ, ಕನ್ನಡದಲ್ಲಿ ಈವರೆಗೂ ನಡೆಯಲಿಲ್ಲವೆಂಬುದು ಕನ್ನಡಿಗರ ದುರ್ದೈವವೆಂದೇ ಹೇಳಬೇಕಾಗಿದೆ.

ಭಾರತೀಯರಿಗೆ, ಅದರಲ್ಲಿಯೂ ವಿಶೇಷವಾಗಿ ಹಿಂದೂಗಳಿಗೆ ತಮ್ಮ ಧರ್ಮ, ಸಂಸ್ಕೃತಿಗಳ ಮೂಲಗ್ರಂಥವಾದ ವೇದ ಮತ್ತು ವೇದಗಳಿಗೆ ಸಂಬಂಧಪಟ್ಟ ಇತರ ವೈದಿಕ ವಾಙ್ಮಯದ ಸಾಮಾನ್ಯ ಪರಿಚಯವು ಇರ ಬೇಕಾದುದು ಅವಶ್ಯವಿರುತ್ತದೆ. ವೇದವೆಂದರೇನು? ಅದು ಎಷ್ಟು ವಿಧವಾಗಿದೆ? ಅದರ ಶಾಖೋಪಶಾಖೆಗಳೆಷ್ಟು ? ಅವುಗಳು ಏನು ಹೇಳುತ್ತವೆ ? ಅವುಗಳಲ್ಲಿ ಯಾವ ಯಾವ ವಿಷಯಗಳಿವೆ ? ಮೊದಲಾದ ವಿಷಯಗಳಲ್ಲಿ ಸಾಮಾನ್ಯ ಪರಿಚಯವನ್ನಾದರೂ ಇವರು ಮಾಡಿಕೊಂಡಿರಬೇಕಾಗುತ್ತದೆ. ಅದಕ್ಕೆ ಪ್ರತಿಯೊಂದು ಪ್ರಾಂತ ಭಾಷೆಗಳಲ್ಲಿಯೂ ಇವುಗಳನ್ನು ತಿಳಿಸುವ ಗ್ರಂಥಗಳು ವಿಪುಲವಾಗಿ, ಸಂಶೋಧನಾತ್ಮಕವಾಗಿ ಬೆಳೆಯಬೇಕಾಗಿದೆ. ಅದರಂತೆಯೇ ಕನ್ನಡ ನಾಡಿನ ಹಿಂದುಗಳಿಗೆ ವೈದಿಕ ವಾಙ್ಮಯದ ಪರಿಚಯವನ್ನು ಮಾಡಿ ಕೊಡುವ ಗ್ರಂಥಗಳ ನಿರ್ಮಾಣವಾಗಬೇಕಾಗಿದೆ.

ಇಂದು ಒಬ್ಬ ಕನ್ನಡಿಗನು ವೇದಗಳ ವಿಷಯವನ್ನು ತಿಳಿಯಬೇಕೆಂದು ಅಪೇಕ್ಷಿಸಿದರೆ, ಅಥವಾ ಒಬ್ಬ ವಿಧರ್ಮಿಯು ಒಬ್ಬ ಹಿಂದೂ ಕನ್ನಡಿಗನನ್ನು "ನಿಮ್ಮ ಧರ್ಮದ ಮೂಲ ಗ್ರಂಥವಾವುದು ? ಅದರ ವಿಸ್ತಾರವೆಷ್ಟು ? ಅದರಲ್ಲಿ ಏನಿದೆ ? ಎಂದು ಪ್ರಶ್ನಿಸಿದರೆ, ಅದಕ್ಕೆ ಸಾಮಾನ್ಯವಾದ ಉತ್ತರ ಕೊಡಲು ಬೇಕಾಗುವಷ್ಟು ವಿಷಯಗಳನ್ನು ತಿಳಿಸುವ, ಅಥವಾ ಇಂತಹ ಪುಸ್ತಕವನ್ನು ನೋಡೆಂದು ಸೂಚಿಸಲು ಅರ್ಹವಾದ ಒಂದು ಗ್ರಂಥವಾದರೂ ಕನ್ನಡದಲ್ಲಿಲ್ಲವಾಗಿದೆ. ಇಂತಹ ಕೊರತೆಯನ್ನು ಸ್ವಲ್ಪಮಟ್ಟಿಗಾದರೂ ಪರಿಹರಿಸ ಬೇಕೆಂಬ ಚಾಪಲಾಯ ಪ್ರಚೋದಿತನಾಗಿ, ಬೆಟ್ಟಕ್ಕೆ ನೆಗೆಯುತ್ತಿರುವ ಕುಂಟ ನಂತೆ, ಜನರ ಹಾಸ್ಯಕ್ಕೆ ಗುರಿಯಾಗುವೆನೋ ಏನೋ ಎಂದು ಒಮ್ಮೆ ಎನಿಸಿ ದರೂ ಈ ಸಾಹಸದ ಪ್ರಯತ್ನಕ್ಕೆ ಕೈಯಿಕ್ಕಿದ್ದೇನೆ. ಇದರ ಸಫಲತೆಯು ಎಷ್ಟಾಗಿದೆ ಎಂಬುದನ್ನು, ಕನ್ನಡ ಜನತೆಯೂ ವಿಮರ್ಶಕರೂ, ಅಳೆದು ನೋಡಿ ಹೇಳಬೇಕು.

ವೈದಿಕ ವಾಙ್ಮಯವನ್ನು ಅಧುನಿಕ ರೀತಿಯಲ್ಲಿ ಬೆಳಕಿಗೆ ತರುವುದಕ್ಕೂ ಅದರೊಳಗಿನ ವಿಷಯಗಳನ್ನೂ, ಜ್ಞಾನ ಭಂಡಾರವನ್ನೂ ತಿಳಿದು ಪ್ರಚಾರ ಮಾಡುವುದಕ್ಕೂ, ಸುಮಾರು ಒಂದು ಶತಮಾನದಿಂದ ಅನೇಕರು ಅನೇಕ

ವಿಧವಾದ ಪ್ರಯತ್ನಗಳನ್ನು ಮಾಡುತ್ತಾ ಬಂದಿದ್ದಾರೆ. ವೇದ ಮತ್ತು ವೈದಿಕ ವಾಙ್ಮಯದ ಬಗ್ಗೆ ಇಂದು ಜಗತ್ತಿನ ಪ್ರತಿಯೊಂದು ದೇಶದಲ್ಲಿಯೂ ಜಜ್ಞಾಸುಗಳಾದ ವಿಮರ್ಶಕ ಪಂಡಿತರು ಅತ್ಯಂತ ಕುತೂಹಲಿಗಳಾಗಿ ವಿವಿಧ ದೃಷ್ಟಿಗಳಿಂದ ವಿಚಾರ ಮಾಡಿ, ಇವುಗಳ ವಿಷಯಗಳನ್ನು ತಿಳಿಯಲು ಪ್ರಯತ್ನಿಸುತ್ತಲೂ ತಮಗೆ ತಿಳಿದುಬಂದ ಸಂಗತಿಗಳನ್ನು ಬಹುಮುಖದಿಂದ ಪ್ರಚಾರ ಮಾಡುತ್ತಲೂ ಇದ್ದಾರೆ. ಈ ವೈದಿಕ ವಾಙ್ಮಯವನ್ನು ಆಧುನಿಕ ದೃಷ್ಟಿಯಿಂದ, ಪಾಶ್ಚಿಮಾತ್ಯ ದೃಷ್ಟಿಯಿಂದ ತಿಳಿಯಲು ಪ್ರಚಾರ ಮಾಡಲು, ಪ್ರಪ್ರಥಮವಾಗಿ ಆರಂಭಿಸಿದವರು ಪಾಶ್ಚಿಮಾತ್ಯರು. ಅವರಲ್ಲಿಯೂ ಮುಖ್ಯವಾಗಿ ಜರ್ಮನಿ ದೇಶದ ವಿದ್ವಾಂಸರು.

ಪಾಶ್ಚಿಮಾತ್ಯರು ಭಾರತಕ್ಕೆ ಬಂದು ನೆಲಸಿದಮೇಲೆ ಗ್ರಂಥಾವ ಲೋಕನ ಕುತೂಹಲಿಗಳಾದ ಪಾಶ್ಚಿಮಾತ್ಯ ಪಂಡಿತರನೇಕರು ಭಾರತದ ಅನೇಕ ಪುಸ್ತಕ ಭಂಡಾರಗಳನ್ನು ಶೋಧಿಸ ಹತ್ತಿದರು. ಸಂಸ್ಕೃತ ಭಾಷೆಯನ್ನು ಎಂಟು, ಹತ್ತು, ಹನ್ನೆರಡು ವರ್ಷಗಳವರೆಗೆ ತಮಗೆ ಅನುಕೂಲವಾದಷ್ಟು ಆವಶ್ಯವಿದ್ದಷ್ಟು ಕಲಿತು, ಗ್ರಂಥಗಳನ್ನು ಪರಿಶೀಲಿಸ ಹತ್ತಿದರು. ಅಪೂರ್ವ ವಾದ ಆಶ್ಚರ್ಯಕರವಾದ ವಿಷಯಗಳುಳ್ಳ ವೇದಗಳನ್ನು ಕಂಡು, ಪಾಶ್ಚಿ ಮಾತ್ಯ ಪಂಡಿತರು ಸುಮಾರು ಇಂದಿಗೆ ಒಂದು ಶತಮಾನದ ಹಿಂದೆಯೇ ವೇದಗಳನ್ನು ಅಚ್ಚುಹಾಕಿಸಿ ಅವುಗಳ ಬಗ್ಗೆ ಲೇಖನಗಳನ್ನೂ, ಟಿಪ್ಪಣಿ ಗಳನ್ನೂ, ಗಂಥಗಳನ್ನೂ ಬರೆಯಲು ಪ್ರಯತ್ನಿಸಿದರು, ಬರೆದು ಪ್ರಚಾರ ಮಾಡಿದರು. ಕ್ರಿ. ಶ. ೧೮೩೫ ರಲ್ಲಿ "ರೋಜನ್" ಎಂಬ ಜರ್ಮನಿಯ ಪಂಡಿತನು ಭಾರತದ ಒಂದು ಪುಸ್ತಕ ಭಂಡಾರದಲ್ಲಿ ತನಗೆ ದೊರೆತ ಋಗ್ವೇದದ ಪ್ರಥಮ ಮಂಡಲವನ್ನು ಅಚ್ಚು ಹಾಕಿಸಲು ಪ್ರಯತ್ನಿಸುತ್ತಿರುವಾಗಲೇ ಅಕಾಲ ಮೃತ್ಯುವಿಗೆ ತುತ್ತಾದನು. ಆಮೇಲೆ ಕ್ರಿ. ಶ. ೧೮೩೮ ರಲ್ಲಿ ಅದು ಪ್ರಕಟವಾಗಿ ರೋಜನ್ನನ ಪ್ರಯತ್ನವು ಸಫಲವಾಯಿತು. ಮತ್ತು ಅದೇ ಅವಧಿಯಲ್ಲಿಯೇ ಋಗ್ವೇದ ಸಂಹಿತೆಯ ಉಳಿದ ಒಂಬತ್ತುಮಂಡ ಲಗಳೂ ಪ್ರಕಟವಾಗಿ ಹೊರಬಿದ್ದವು. ೧೮೪೬ ರಲ್ಲಿ ರುಡಾಲ್ಫಲೋತ್ ಎಂಬ ಪಂಡಿತನು ವೈದಿಕ ಸಾಹಿತ್ಯ ಮತ್ತು ಅದರ ಚರಿತ್ರೆಯ ಬಗ್ಗೆ

ವಿಮರ್ಶಾತ್ಮಕವಾದ ಒಂದು ಖಂಡ ಕೃತಿಯನ್ನು ಬರೆದನು. ಇವನ ಈ ಪ್ರಯತ್ನದಿಂದ ವೇದದೊಳಗಿನ ಶಬ್ದಗಳನ್ನನುಸರಿಸಿ ಒಂದು ನವೀನ ರೀತಿಯ ಭಾಷಾ ಶಾಸ್ತ್ರವು ಆರಂಭವಾದದ್ದಲ್ಲದೇ ವೈದಿಕ ವಾಙ್ಮಯದ ಬಗ್ಗೆ ಪಾಶ್ಚಿಮಾತ್ಯ ಪಂಡಿತರ ದೃಷ್ಟಿಯು ಬೀಳಲೂ ಸಹ ಅತ್ಯಂತ ಅನುಕೂಲವಾಯಿತು.

ಕೃಷ್ಣ ಯಜುರ್ವೇದದ ಮೈತ್ರಾಯಣೀ ಶಾಖೆಯ ಸಂಹಿತೆಯನ್ನು ಮತ್ತು ಕಾಠಕ (ಕಠ ಶಾಖೆಯ) ಸಂಹಿತೆಯನ್ನು ಶ್ರೋಡರ್ ಎಂಬ ಪಂಡಿತನು ಪ್ರಕಟಿಸಿದನು. ಕೃಷ್ಣಯಜುರ್ವೇದದ ಪ್ರಧಾನವಾದ ತೈತ್ತಿರೀಯ ಶಾಖೆಯ ಸಂಹಿತೆಯನ್ನು ವೀಬರ್ ಎಂಬ ಮತ್ತೊಬ್ಬ ಪಂಡಿತನು ಅಚ್ಚುಹಾಕಿಸಿದನು. ಮತ್ತು ಶುಕ್ಲಯಜುರ್ವೇದದ ವಾಜಸನೇಯ--ಕಣ್ವ ಎಂಬ ಎರಡು ಶಾಖೆಗಳ ಸಂಹಿತೆಗಳನ್ನು ಸಹ ಇವನೇ ಪ್ರಕಟಿಸಿ ಬೆಳಕಿಗೆ ತಂದನು. ಸಾಮವೇದದ ರಾಣಾಯನೀಯ ಸಂಹಿತೆಯನ್ನು ಕ್ರಿ.ಶ ೧೮೪೨ರಲ್ಲಿ ಸ್ಟೀವನ್‌ಸನ್ ಎಂಬ ಪಂಡಿತನು ಮೊದಲು ಪ್ರಕಟಿಸಿದನು ಆಮೇಲೆ ಬೆನ್‌ಫೇ ಎಂಬ ಪಂಡಿತನು ೧೮೪೮ರಲ್ಲಿ ಇದೇ ಸಂಹಿತೆಯನ್ನು ಜರ್ಮನ್ ಭಾಷೆಯ ಟಿಪ್ಪಣಿಯೊಂದಿಗೆ ಪ್ರಕಟಿಸಿದನು. ಅಥರ್ವಣವೇದದ ಶೌನಕ ಶಾಖೆಯ ಸಂಹಿತೆಯನ್ನು ಕ್ರಿ.ಶ. ೧೮೫೬ರಲ್ಲಿ ವಿಟ್ನ್ಲರ್‌ರೋಟರರು ಪ್ರಕಟಿಸಿದರು, ಮತ್ತು ಮೋಕ್ಷಮುಲ್ಲರ್ ಎಂಬ ಜರ್ಮನೀ ದೇಶದ ಪಂಡಿತನು ಭಾರತಕ್ಕೆ ಬಂದು, ಅನೇಕ ವರ್ಷಗಳವರೆಗೆ ವೈದಿಕ ವಾಙ್ಮಯದ ಬಗ್ಗೆ ಅಭ್ಯಾಸಮಾಡಿ, ವೇದಗಳನ್ನು, ವಿಶೇಷವಾಗಿ ಉಪನಿಷತ್ತುಗಳನ್ನು ಕುರಿತು ಪ್ರಬಂಧಗಳನ್ನೂ, ಗ್ರಂಥಗಳನ್ನೂ ಬರೆದು ಬಹುಮುಖವಾಗಿ ಪ್ರಚಾರಪಡಿಸಿದನು.

ಹೀಗೆ ಎಲ್ಲಾ ವೇದಗಳನ್ನು ಇದಂಪ್ರಥಮವಾಗಿ ಅಚ್ಚುಹಾಕಿಸಿ ಬೆಳಕಿಗೆ ತಂದ ಕೀರ್ತಿಯು ಪಾಶ್ಚಿಮಾತ್ಯ ಪಂಡಿತರಿಗೆ ಅವರಲ್ಲಿಯೂ ಮುಖ್ಯವಾಗಿ ಜರ್ಮನಿಯ ಪಂಡಿತರಿಗೆ ಮೊದಲನೆಯದಾಗಿ ಸಲ್ಲುತ್ತದೆ. ಇವರು ಕೇವಲ ಗ್ರಂಥಗಳನ್ನು ಅಚ್ಚುಹಾಕುವ ಕೆಲಸವನ್ನು ಮಾಡದೆ, ವೇದಗಳ ಬಗ್ಗೆ ಅನೇಕಾನೇಕ ಲೇಖನ, ಪ್ರಬಂಧಗಳನ್ನು ಬರೆದು, ಪತ್ರಿ

ಕೆಗಳಲ್ಲಿ ಆಗಾಗ ಪ್ರಕಟಿಸಿ ಜಗತ್ತಿನ ವಿಚಾರವಂತ ಪಂಡಿತರ ಲಕ್ಷ್ಯಗಳನ್ನು ವೇದಗಳ ಕಡೆಗೂ, ಭಾರತದ ಕಡೆಗೂ, ಅದರಿಂದ ಭಾರತೀಯ ಸಂಸ್ಕೃತಿ ಯ ಕಡೆಗೂ ಎಳೆದಿದ್ದಾರೆ, ಇಂದೂ ಎಳೆಯುತ್ತಿದ್ದಾರೆ. ಇವರ ಈ ರೀತಿ ಯ ಪ್ರಯತ್ನದಿಂದ ವೈದಿಕ ಭಾಷಾ ಶಾಸ್ತ್ರವೆಂಬ ಒಂದು ಭಾಷಾ ಶಾಸ್ತ್ರವು ಹುಟ್ಟಿ ಬೆಳೆದು ಬಂದಿತು, ಸಂಸ್ಕೃತ ಭಾಷೆಯ ಧಾತು, ವಿಕರಣ ಆಖ್ಯಾತ ಪ್ರತ್ಯಯಗಳ ಬಲದಿಂದಲೂ ಶಬ್ದಾರ್ಥಗಳ ಸಾಮ್ಯದಿಂದಲೂ ರೂಪಗೊಂಡ ಪ್ಲೇಗತ್ ಪಂಡಿತನ ಭಾಷಾಶಾಸ್ತ್ರವನ್ನು ಅನುಸರಿಸಿ ಅದರ ಆಧಾರದಿಂದ ಇಂಡೋ ಆರ್ಯನ್ ಭಾಷೆಗಳ ಶಬ್ದಗಳನ್ನು ಕ್ರೋಢೀಕರಿಸಿ ಅಸಾಧಾರಣವಾದ, ಬೃಹದಾಕಾರವಾದ ಒಂದು ಸರ್ವಾರ್ಥಕೋಶ ಎಂಬ ಗ್ರಂಥವು ಸಿದ್ಧವಾಗಿ ಅದು ಸ್ಟ್ರಾಸ್ಬರ್ಗ ನಗರದಲ್ಲಿ ಸಂಚಿಕಾ ರೂಪದಲ್ಲಿ ಪ್ರಕಟವಾಗಿದೆ. ಹೀಗೆ ಪಾಶ್ಚಿಮಾತ್ಯ ಪಂಡಿತರು ಕೇವಲ ವಿಷಯಾವ ಗಾಹನೆಯ ದೃಷ್ಟಿಯಿಂದ ತಮಗೆ ಪರದೇಶೀಯರ ಪರಧರ್ಮೀಯರ ಗ್ರಂಥ ವಾಗಿದ್ದರೂ, ವೇದಗಳ ಬಗ್ಗೆ ಇಂತಹ ಸಾಹಸದ ಸಪ್ರಯೋಜನದ-ಬಹುಮುಖವಾದ ಪ್ರಯತ್ನ ಸಾಧ್ಯವಾದ ಕೆಲಸಗಳನ್ನು ಮಾಡಿ, ಸದಾ ಕಾಲವು ಇಂದಿನ ಭಾರತೀಯರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಹೀಗೆ ಪಾಶ್ಚಿಮಾತ್ಯರಿಂದ ಆರಂಭವಾದ ವೈದಿಕ ವಾಙ್ಮಯದ ಶೋಧನೆ, ಪ್ರಕಟನೆ, ವಿಮರ್ಶೆಗಳಿಂದ ಭಾರತದ ವಿದ್ವಾಂಸರ ಲಕ್ಷ್ಯವು ಅತ್ತ ಹರಿಯಿತು. ವೇದ ಮತ್ತೂ ಇತರ ವೈದಿಕ ವಾಙ್ಮಯವನ್ನು ಪರಿಶೀಲಿಸಹತ್ತಿದರು; ಪ್ರಕಟಿಸಹತ್ತಿದರು. ಪರಸಂಸ್ಕೃತಿ, ಪರಧರ್ಮೀಯರಾದ ಪಾಶ್ಚಿಮಾತ್ಯರು ಪ್ರಕಟಿಸಿದ, ವಿಮರ್ಶಿಸಿದ ಕೆಲವು ಸಂಗತಿಗಳನ್ನು ಆರಂಭದ ಕೆಲವು ಕಾಲದವರೆಗೆ ಅಂಧಾನುಕರಣವಾಗಿ ಪರಿಗ್ರಹಿಸುತ್ತಿದ್ದರೂ, ಕಾಲ ಕ್ರಮದಲ್ಲಿ ಭಾರತೀಯ ಸಂಪ್ರದಾಯ ಸಂಸ್ಕೃತಿಗಳ ದೃಷ್ಟಿಯಿಂದಲೂ ನೋಡಲು ಆರಂಭ ಮಾಡಿದರು. ಇದರಿಂದ ಪರದೇಶದವರು ವೇದಗಳ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳು ಬಹುಮಟ್ಟಿಗೆ ಭ್ರಮಾತ್ಮಕವಾಗಿವೆ ಯೆಂದು ತಿಳಿಯಹತ್ತಿತು. ಮತ್ತು ಪಾಶ್ಚಿಮಾತ್ಯರ ರೀತಿಗಳನ್ನನುಸರಿಸಿ ಭಾರತೀಯ ದೃಷ್ಟಿಯಿಂದ ನೋಡುತ್ತಾ ಬರುವುದರಿಂದ ಹೊಸ ಹೊಸ

ಅಭಿಪ್ರಾಯಗಳು ಹೊರಬಿದ್ದು, ಪ್ರಚಾರವಾಗುತ್ತಾ ಬಂದವು. ಭಾರತೀಯ ರಾಗಿ ಹೊರದೇಶಗಳಲ್ಲಿ ಪ್ರಚಾರ ಮಾಡಿದವರಲ್ಲಿ ಶ್ರೀ ರಾಮಕೃಷ್ಣ ಪರಮ ಹಂಸರ ಪಟ್ಟ ಶಿಷ್ಯರಾದ ಶ್ರೀ ಸ್ವಾಮಿ ವಿವೇಕಾನಂದರು ಮೊದಲಿಗರು. ಇವರು ಪ್ರಪ್ರಥಮವಾಗಿ ಅಮೇರಿಕಾಕ್ಕೆ ಹೋಗಿ ಅಲ್ಲಿ "ಸಕಲ ಧರ್ಮ ಮಹಾ ಸಮ್ಮೇಳನ" ದಲ್ಲಿ ಭಾಗವಹಿಸಿ ಪಾಶ್ಚಿಮಾತ್ಯರಿಗೆ ಭಾರತದ ಬಗ್ಗೆ ಇರುವ ಭ್ರಮೆಯನ್ನೂ, ತಪ್ಪು ಕಲ್ಪನೆಯನ್ನೂ ಪರಿಹರಿಸಿದರು. ಮತ್ತೆ ಅದೇ ಕಾಲದಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ಸಂಚರಿಸಿ, ವೇದಧರ್ಮದ ಅಮೌಲ್ಯ ತತ್ವಗಳನ್ನು ಪ್ರಚಾರ ಮಾಡಿದರು. ಅನೇಕ ಗ್ರಂಥಗಳನ್ನು ಬರೆದು ಜಗತ್ತಿಗೆ ಒಂದು ಅಪೂರ್ವವಾದ ರೀತಿಯಲ್ಲಿ ವೇದಸಂದೇಶ ವನ್ನು ಸಾರಿದರು. ಇದರಂತೆ ವೈದಿಕ ವಾಙ್ಮಯವನ್ನು ಅಚ್ಚು ಹಾಕಿ ಸುವುದಕ್ಕೂ, ಹಾಕುವುದಕ್ಕೂ ಭಾರತೀಯರು ಮುಂದೆ ಬಂದು ಅನೇಕ ಸಂಘ, ಸಂಸ್ಥೆಗಳ ಮುಖಾಂತರವಾಗಿಯೂ, ಸ್ವತಂತ್ರರಾಗಿಯೂ ಅಚ್ಚು ಹಾಕಿಸಹತ್ತಿದರು. ವೈದಿಕ ವಾಙ್ಮಯದ ಮುಖ್ಯ ಪುಸ್ತಕಗಳೆಲ್ಲವೂ ಬಹುಮಟ್ಟಿಗೆ ಅಚ್ಚಾಗಿ ಈಗ ಬೆಳಕಿಗೆ ಬಂದಿವೆ. ಕಲ್ಕತ್ತೆ, ಬೊಂಬಾಯಿ, ಮದ್ರಾಸು, ಪುಣೆ, ಕಾಶೀ, ಮೈಸೂರು ಮೊದಲಾದ ಸ್ಥಳಗಳಲ್ಲಿ ವೈದಿಕ ವಾಙ್ಮಯಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಅಚ್ಚು ಹಾಕಿಸಿದ್ದಾರೆ; ಇನ್ನೂ ಹಾಕಿಸುತ್ತಿದ್ದಾರೆ.

ಹೀಗೆ ಒಂದು ಶತಮಾನಕ್ಕಿಂತ ಹೆಚ್ಚು ಕಾಲದಿಂದ ವೈದಿಕ ವಾಙ್ಮಯದ ಬಗ್ಗೆ ವಿಚಾರ ವಿಮರ್ಶೆಗಳು ನಡೆಯುತ್ತಿದ್ದರೂ, ಇವುಗಳ ಬಗ್ಗೆ ಇನ್ನೂ ಅನೇಕ ವಿಚಾರಗಳು ಅನಿಶ್ಚಿತವಾಗಿಯೇ ಇದ್ದು ಈವರೆಗೆ ನಡೆದ ವಿಚಾರ ವಿಮರ್ಶೆಗಳೆಲ್ಲವೂ ಕೇವಲ ಊಹಿತವಾಗಿಯೇ ಇವೆ, ಆತಏವ ನಿರ್ಣೀತವೂ ಆಗಿಲ್ಲ. ಇವುಗಳ ಬಗ್ಗೆ ಈವರೆಗೆ ಬರೆದವರೆಲ್ಲರೂ "ಅದು ಹೀಗೆ ಇರಬಹುದು" "ನನಗೆ ಹೀಗೆ ತೋರುತ್ತದೆ." ಎಂದು ಹೇಳುತ್ತಾ ಬಂದಿದ್ದಾರೆಯೇ ಹೊರತು ಅದು ಹೀಗೆ ಎಂದು ಖಚಿತವಾಗಿ ಯಾರೂ ಹೇಳಿಲ್ಲ, ಹೇಳುವಂತಿಲ್ಲ. ಅದರಂತೆ ಈ ಹೊತ್ತಿಗೆಯಲ್ಲಿ ಮಾಡಲಾದ ವಿಷಯ ವಿವೇಚನೆಯೂ, ವಿಚಾರಧಾರೆಯೂ ಸಹ ನಡೆದಿವೆ ಎಂದು

ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅದಲ್ಲದೆ ಸಂಸ್ಕೃತದಲ್ಲಾಗಲೀ ಕನ್ನಡದಲ್ಲಾಗಲೀ ವೈದಿಕ ವಾಙ್ಮಯದ ಬಗ್ಗೆ ಆಧುನಿಕರೀತಿಯ ವಿಚಾರ ಸರಣಿಯಿಂದ ಲೇಖನಾದಿಗಳು ಹೆಚ್ಚಾಗಿ ಬಾರದೇ ಇರುವುದರಿಂದ, ಆಂಗ್ಲ ಭಾಷೆಯ ಪರಿಚಯವೇ ಇಲ್ಲದ ನನ್ನ ಪರಿಶ್ರಮವು, ಆಂಗ್ಲ ಭಾಷಾ ಮುಖೇನ ಇವುಗಳ ಬಗ್ಗೆ ತಿಳಿದುಕೊಂಡಿರುವ ವಿದ್ವಾಂಸರಿಗೆ ಅಸಂಪೂರ್ಣ - ಕೊರತೆಯದೆಂದೆನಿಸಿದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೂ ಈ ಪುಸ್ತಕವನ್ನು ಬರೆಯುವಾಗ ಸಾಮಾನ್ಯವಾಗಿ ಪ್ರತಿಯೊಂದು ವಿಷಯಗಳ ಬಗ್ಗೆಯೂ ಪ್ರಾಚೀನ ಸಂಪ್ರದಾಯ ಮತ್ತು ಆಧುನಿಕ ಸಂಪ್ರದಾಯಗಳೆರಡು ದೃಷ್ಟಿಯಿಂದಲೇ ಆ ವಸ್ತುಗಳನ್ನು ವಿವೇಚಿಸಿ, ಪರಿಚಯ ಮಾಡಿಕೊಡಲು ಸಾಧ್ಯವಾದಷ್ಟು ಪ್ರಯತ್ನಿಸಿದ್ದೇನೆ.

ಇದರೊಳಗಿನ ಋಷಿ, ದೇವತೆ, ಛಂದಸ್ಸು, ವೇದಾಂಗಗಳ ವಿಷಯಗಳನ್ನು ಬರೆಯುವಾಗ ಆಯಾ ವಿಷಯಗಳಿಗೆ ಸಂಬಂಧಪಟ್ಟ ಮೂಲ ಗ್ರಂಥಗಳನ್ನು ನೋಡಿ ನಾನೇ ಸಂಗ್ರಹಿಸಿದ್ದೇನೆ. ಇತರ ವಿಷಯಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಬರೆಯುವಾಗಲೂ ಸಹ ಸಾಧ್ಯವಾದಷ್ಟು ಆಯಾ ವಿಷಯಗಳ ಮೂಲ ಗ್ರಂಥಗಳನ್ನು ನೋಡಿಯೂ ಮತ್ತು ಅವುಗಳಿಗೆ ಸಂಬಂಧಪಟ್ಟ ಬೇರೆಯವರ ಲೇಖನಾದಿ ಸಹಾಯ ಗ್ರಂಥಗಳ ವಿಷಯಗಳನ್ನು ಕ್ರೋಢೀಕರಿಸಿಯೂ ಇದನ್ನು ಬರೆಯಲಾಗಿದೆ. ಋಷಿ. ದೇವತೆ. ಛಂದಸ್ಸುಗಳ ಪಟ್ಟಿಯನ್ನು ಸಿದ್ಧಗೊಳಿಸುವಾಗ, ಋಕ್ಸಂಹಿತೆ, ಬೌಧಾಯನಗೃಹ್ಯ ಸಂಗ್ರಹಗಳ ಆಧಾರದಿಂದ ಶೇಖರಿಸಲಾಗಿದೆ.

ಸುಮಾರು ಎಂಟು ಸಾವಿರ ವರ್ಷಕ್ಕಿಂತ ಹಿಂದೆಯೇ ಆರಂಭವಾಗಿ ಬೆಳೆದು ಕೊಂಡು ವಿವಿಧ ಮುಖವಾಗಿ, ವಿಸ್ತಾರವಾಗಿ ಹಬ್ಬಿಕೊಂಡು ಬಂದ ವೈದಿಕ ವಾಙ್ಮಯಕ್ಕೆ ಅತ್ಯಂತ ಮೊದಲನೆಯ ಗ್ರಂಥವು ಋಕ್ಸಂಹಿತೆಯೆಂದೂ ಕೊನೆಯ ಗ್ರಂಥವು ಸಾಯಣಾಚಾರ್ಯರ ವೇದ ಭಾಷ್ಯವೆಂದೂ ಇಟ್ಟುಕೊಂಡು ಇಂದಿನ ವಿಮರ್ಶಕರೆಲ್ಲರೂ ಅಭಿಪ್ರಾಯ ಪಡುತ್ತಾ ಬಂದಿದ್ದಾರೆ. ಈ ಅಭಿಪ್ರಾಯವನ್ನನುಸರಿಸಿಯೇ ನನ್ನ ಈ

ಪುಸ್ತಕದಲ್ಲಿಯು ಸಹ ಋಕ್ಸಂಹಿತೆಯಿಂದ ಮೊದಲುಮಾಡಿ ವೈದಿಕ
ವಾಙ್ಮಯವು ಬೆಳೆದುಕೊಂಡು ಬಂದಿರುವ ಕ್ರಮಾನುಗುಣವಾಗಿ ಪ್ರಕರಣ
ಗಳನ್ನು ಜೋಡಿಸಿದ್ದೇನೆ. ವೇದ ಸಾಹಿತ್ಯವು ಉಪನಿಷತ್ತಿಗೆ ಮುಗಿ
ಯುವುದರಿಂದ ವೇದಗಳಿಗೆ ಸಂಬಂಧಪಟ್ಟ ಕೆಲವು ವಿಷಯಗಳನ್ನೂ
ವೇದಪ್ರತಿಪಾದ್ಯವಾದ ವಿಷಯಗಳನ್ನು ಕೆಲವುಮಟ್ಟಿಗೆ ತಿಳಿಸಿ ಕೇವಲ
ವೇದಗಳಿಗೆ ಸಂಬಂಧಪಡುವಂತೆ ಇರುವ ವೇದಾಭ್ಯಾಸಕ್ರಮ ಮತ್ತು
ವೇದಗಳಕಾಲದ ವಿಚಾರವನ್ನೂ ಸೇರಿಸಿ ವೇದಗಳಿಗೆ ಸಂಬಂಧಪಟ್ಟ
ಇತರ ಶಾಸ್ತ್ರಗಳನ್ನೂ, ವೇದಾಂಗಗಳನ್ನೂ ಕೊನೆಗೆ ಕೊಟ್ಟಿದ್ದೇನೆ. ಹೀಗೆ
ಪ್ರಕರಣಗಳನ್ನು ಸಂಯೋಜನೆಮಾಡಿರುವುದರಿಂದ ಆಧುನಿಕ ವಿಮರ್ಶಕರ
ಅಭಿಪ್ರಾಯದಂತೆ ವೈದಿಕ ವಾಙ್ಮಯವು ಹೇಗೆ ಬೆಳೆದುಕೊಂಡು ಬಂದಿದೆ
ಎಂಬುದನ್ನು ಸುಲಭವಾಗಿ ತಿಳಿಯಲು ಸಾಧ್ಯವಾದೀತೆಂದು ಭಾವಿಸಿದ್ದೇನೆ
ಈ ನನ್ನ ಪ್ರಯತ್ನದಿಂದ ಕನ್ನಡ ಬಾಂಧವರಿಗೆ ಸ್ವಲ್ಪವಾದರೂ ಪ್ರಯೋ
ಜನವಾದರೆ, ವೈದಿಕ ವಾಙ್ಮಯದಬಗ್ಗೆ ತಿಳಿಯಬೇಕೆಂಬ ಕುತೂಹಲಿ
ಗಳಿಗೆ ಕೆಲವು ವಿಷಯಗಳಾದರೂ ಇದರಲ್ಲಿ ದೊರತರೆ ಈ ನನ್ನ ಪ್ರಯ
ತ್ನವು ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ಈ ಗ್ರಂಥವಲ್ಲಿ ಬರುವ ಉಪನಿಷತ್ತು, ಋಷಿಗಳು ದೇವತೆಗಳು
ಛಂದಸ್ಸುಗಳೆಂಬ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಇರುವ ಅವುಗಳ
ಅಕಾರದಿ ಹೆಸರುಗಳ ಪಟ್ಟಿಗಳನ್ನು ಗ್ರಂಥದ ಕೊನೆಯಲ್ಲಿ ನಾಲ್ಕು ಪರಿಶಿ
ಷ್ಟಗಳಾಗಿ ಕೊಟ್ಟಿರುವೆನು. ಇದರಿಂದ ಗ್ರಂಥವನ್ನು ಓದಿಕೊಂಡು ಹೋಗು
ವಾಗ ಮಧ್ಯದಲ್ಲಿ ತಡೆಯಾಗದೇ ಅವುಗಳ ಹೆಸರುಗಳನ್ನು ತಿಳಿಯಬೇಕೆಂದಿರು
ವವರಿಗೆ ಕೊನೆಗೆ ಬೇಕಾದರೆ ನೋಡಿಕೊಳ್ಳಲು ಅನುಕೂಲವಾಗುವುದೆಂದು
ಭಾವಿಸಿದ್ದೇನೆ.

**ರಾ. ಭ. ಹಾಸಣಗಿ.**

# ವೈದಿಕ ವಾಙ್ಮಯ ಪರಿಚಯ

ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥

---

**ವೇ**ದಗಳು ಹಿಂದೂ ಧರ್ಮದ ಸಾರಸರ್ವಸ್ವವಾಗಿವೆ, ಹಿಂದೂ ಧರ್ಮದ ಮೂಲಗ್ರಂಥವಾಗಿವೆ, ಹಿಂದೂ ಸಂಸ್ಕೃತಿಯ ತಳಹದಿಯಾಗಿವೆ. ಹಿಂದೂ ಧರ್ಮವು ಯಾವ ಮಾರ್ಗವಾಗಿ ಹೊರಟಿದ್ದರೂ ಯಾವ ಪಂಥವನ್ನು ಹಿಡಿದಿದ್ದರೂ ಅದು ವೇದಗಳ ತಳಹದಿಯ ಮೇಲೆ ಕಟ್ಟಿದ ಮನೆಯ ಒಂದೊಂದು ಕೋಣೆಯಂತೆ. ಅದಕ್ಕಾಗಿಯೇ ಪ್ರಾಚೀನ ಕಾಲದಿಂದ ಮೊದಲುಗೊಂಡು ಇಂದಿನವರೆಗೂ ಹೊಸ ಹೊಸದಾಗಿ ಹೊರಟ ಎಲ್ಲಾ ಮತಪಂಥಗಳೂ ವೇದವನ್ನು ಮುಂದುಮಾಡಿಕೊಂಡು ಅದರ ಅನುಮತಿಯ ಮುದ್ರೆಯನ್ನು ಒತ್ತಿಕೊಂಡು ಅದರ ಆಧಾರದ ಮೇಲೆಯೇ ಹೊರಟಿರುವುದು ಕಂಡುಬರುತ್ತದೆ. ಈಗೀಗ ಹೊಸದಾಗಿ ಹೊರಟ, ಹೊರಡುತ್ತಿರುವ ಮತಗಳೂ ಸಹ ವೇದದ ಆಧಾರಗಳಿಂದಲೇ ವೇದೋಕ್ತಿಗಳ ಅನುಮತಿಗಳನ್ನು ಪ್ರದರ್ಶಿಸುತ್ತಲೇ ತಮ್ಮ ಮತ ಪಂಥಗಳನ್ನು ಸ್ಥಾಪಿಸಲು ಪ್ರಯತ್ನ ಮಾಡಿವೆ; ಮಾಡುತ್ತಿವೆ.

ವೃದ್ಧಿ ಪಡಿಸಲು ಪ್ರಚಾರ ಮಾಡಲು ಹವಣಿಸುತ್ತಿವೆ. ಯಾವುದಾ ದರೂ ಒಂದು ಮತವು ವೇದವನ್ನು ಮನ್ನಿಸದೆ, ವೇದದ ಹೆಸರನ್ನು ಎತ್ತದೆ, ತನ್ನ ಮತದ ಪ್ರಚುರ, ಪ್ರಚಾರಗಳಿಗೆ ಪ್ರಯತ್ನಿಸಿದರೆ ಅದು ಆಸ್ತಿಕ ಮತಗಳೊಳಗೆ ಸೇರಲು ಅನರ್ಹವಾಗುತ್ತದೆ. ಅದರ ಅನು ಯಾಯಿಗಳು ನಾಸ್ತಿಕರೆನಿಸಿಕೊಳ್ಳುತ್ತಾರೆ. ಅದಕ್ಕಾಗಿಯೇ ವೇದದ ಹೆಸರನ್ನು ಎತ್ತದ ಅವರ ಪ್ರತ್ಯಕ್ಷ ಅನುಮತಿಯನ್ನು ಪಡೆಯದ, ಜೈನ ಬೌದ್ಧಮತಗಳು ಆರ್ಯಧರ್ಮದ - ವೇದ ಧರ್ಮದ- ಪ್ರಧಾನವೂ ಮೂಲಭೂತವೂ ಆದ ತತ್ತ್ವಗಳನ್ನು ಬೋಧಿಸುತ್ತಿದ್ದರೂ, ಅವು ಆಸ್ತಿಕ ದರ್ಶನಗಳೆಂದು ಎಣಿಸಲ್ಪಡಲಿಲ್ಲ. ತದನುಯಾಯಿಗಳು ನಾಸ್ತಿಕರೆಂದು ಪ್ರಸಿದ್ಧರಾದರು.

ವೇದಕ್ಕೆ ಮನ್ನಣೆಯನ್ನು ಕೊಟ್ಟ ವೇದದ ಅನುಮತಿಯನ್ನು ಪಡೆದು ವೇದದ ವಾಕ್ಯಗಳನ್ನು ಉದಾಹರಿಸುತ್ತಾ ಹೊರಟು ಬಂದ ಸಾಂಖ್ಯ ನ್ಯಾಯಾದಿ ದರ್ಶನಗಳೂ, ಕೊನೆಯದಾದ ವೇದಾಂತ ದರ್ಶನವು ಅಭಿಪ್ರಾಯ ಭೇದದಿಂದ ದ್ವೈತ, ಅದ್ವೈತ, ವಿಶಿಷ್ಟಾ ದ್ವೈತಗಳೆಂದು ಮೂರು ಮಾರ್ಗಗಳಿಂದ ಹೊರಟಿದ್ದರೂ ಅವೆಲ್ಲವೂ ಆಸ್ತಿಕ ದರ್ಶನಗಳಾದುವು. ತದನುಯಾಯಿಗಳು ಆಸ್ತಿಕರಾದರು. ಆ ಮತಪ್ರಚಾರಕರಲ್ಲಿ ಕೆಲವರು ಋಷಿಗಳೆಂದು ಪ್ರಸಿದ್ಧರಾದರು, ಮತ್ತೆ ಕೆಲವರು ಆಚಾರ್ಯರೆಂದು ಖ್ಯಾತಿಪಡೆದರು. ಇವರೆಲ್ಲರೂ ಆಸ್ತಿಕರಾದರು, ಜಗನ್ಮಾನ್ಯರಾದರು. ಅದಕ್ಕಾಗಿಯೇ ಪ್ರಾಚೀನ ಮತಪ್ರಚಾರಕರಂತೆ ಆಧುನಿಕವಾದ ಆರ್ಯಸಮಾಜ, ಬ್ರಹ್ಮಸಮಾಜಗಳ ಮತಪ್ರವರ್ತಕರೂ ಸಹ ತಮ್ಮ ಮತಗಳನ್ನೂ ವೇದಗಳ ತಳಹದಿಯ ಮೇಲೆಯೇ ತಮ್ಮ ದೊಂದೊಂದು ಕೊಠಡಿಗಳನ್ನು ಕಟ್ಟಲು ಪ್ರಯತ್ನಿಸಿರುವರು. ಆ ಭವ್ಯ ಮಂದಿರಕ್ಕೆ ತಮ್ಮದಾದ ಒಂದು ಶಿಖರವನ್ನು ಏರಿಸಿ ವೇದ ವಾಣಿಗಳಿಂದ ತಮ್ಮ ಮತಗಳನ್ನು ಬೆಳೆಸಿಕೊಳ್ಳುತ್ತಾ ಬಂದಿದ್ದಾರೆ. ಇವೆಲ್ಲವನ್ನೂ ಪರಿಶೀಲಿಸಿದರೆ ನಮ್ಮ ಭಾರತೀಯರು ವೇದಕ್ಕೆ ಎಷ್ಟು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ, ಕೊಡುತ್ತಿದ್ದಾರೆ, ಇನ್ನು ಮುಂದೂ ಕೊಡಬಹುದೆಂಬುವನ್ನು

ಚೆನ್ನಾಗಿ ತಿಳಿದುಕೊಳ್ಳಬಹುದು.

ಇದರಿಂದ ಭಾರತದ ಯಾವ ಧರ್ಮ ಮತ ಪಂಥಗಳಿದ್ದರೂ, ಅವೆಲ್ಲಕ್ಕೂ ವೇದವೇ ಆಧಾರ, ಮೂಲವಾಗಿದೆ. ಭಾರತೀಯರ ಧರ್ಮಗಳಲ್ಲಿ ವಿಶಿಷ್ಟವಾದ ಮೌಲಿಕವಾದ ನಿಷ್ಠೆ, ಶ್ರೇಷ್ಠತೆಗಳು ಕಾಣುತ್ತಿದ್ದರೂ ಅವುಗಳ ಮೂಲವು ವೇದವಾಗಿದೆ. ಭಾರತದ ಪ್ರಾಚೀನ ಋಷಿಗಳು ತಮ್ಮ ಅನುಭವಕ್ಕೆ ಬಂದ ಆತ್ಮ ತತ್ವಗಳನ್ನು ವೇದಗಳಲ್ಲಿ ಪ್ರತಿಪಾದಿಸಿರುತ್ತಾರೆ. ವೇದಗಳಲ್ಲಿರುವ ತತ್ವಗಳನ್ನು ಪ್ರತಿಪಾದಿಸುವ ಸ್ಮೃತಿ, ಪುರಾಣಗಳು ಸಹಾ ನಮಗೆ ವೇದಗಳಷ್ಟೇ ಮಹತ್ವವಾಗಿವೆ, ಮಾನ್ಯವಾಗಿವೆ. ವೇದ ಮತ್ತು ಸ್ಮೃತಿಗಳೊಳಗೆ ಪರಸ್ಪರ ವಿರೋಧವು ಕಂಡು ಬಂದರೆ ಸ್ಮೃತಿಯಲ್ಲಿ ಹೇಳಿರುವ ವಿಚಾರವನ್ನು ಬಿಟ್ಟು ವೇದದ ನುಡಿಗೆ ಹೆಚ್ಚು ಬೆಲೆಯನ್ನು ಕೊಟ್ಟು ನಡೆದುಕೊಳ್ಳಬೇಕಾಗುತ್ತದೆ. ಅದರಂತೆಯೇ ಸ್ಮೃತಿ ಪುರಾಣಗಳೊಳಗೆ ಪರಸ್ಪರ ವಿರೋಧವು ಕಂಡು ಬಂದರೆ ಪುರಾಣದಲ್ಲಿ ಹೇಳಿರುವುದನ್ನು ಬಿಟ್ಟ ಸ್ಮೃತಿಗಳಲ್ಲಿ ಹೇಳಿರುವುದಕ್ಕೆ ಹೆಚ್ಚು ಮನ್ನಣೆ ಕೊಡಬೇಕಾಗುತ್ತದೆ. ಪುರಾಣ, ಧರ್ಮಶಾಸ್ತ್ರ, ಸ್ಮೃತಿಗ್ರಂಥಗಳಲ್ಲಿ ಧರ್ಮದ ಬಗ್ಗೆ ನಿಯಮಗಳನ್ನು ಮಾಡಿದ್ದರೂ, ಅವು ವೇದವಿರುದ್ಧವಾಗಿ ಇರಕೂಡದು. ಆದ್ದರಿಂದ "ವೇದ ವಿಹಿತವಾದ ವಸ್ತು ಅಥವಾ ಇಷ್ಟಪ್ರಾಪ್ತಿಗಳನ್ನು ಪಡೆಯಲು ನ್ಯಾಯವಾದ ಉಪಾಯಗಳನ್ನು ಒದಗಿಸಿ ಕೊಡುವುದೇ" ಧರ್ಮವೆಂದು ಹೇಳಿಸಿಕೊಳ್ಳುತ್ತದೆ.

ಇವಲ್ಲದೆ ಇನ್ನೊಂದು ದೃಷ್ಟಿಯಲ್ಲಿಯೂ ಸಹಾ ವೇದಕ್ಕೆ ವಿಶೇಷವಾದ ಮನ್ನಣೆಯು ದೊರೆಯುತ್ತದೆ. ವೇದವು ಹಿಂದೂ ಧರ್ಮದ ಪರಮ ಪ್ರಾಚೀನವಾದ ಗ್ರಂಥ. ಅದರಂತೆ ಪ್ರಪಂಚದ ಎಲ್ಲಾ ಸಾಹಿತ್ಯ, ತತ್ವ ಗ್ರಂಥಗಳಿಗಿಂತಲೂ ವೇದವು ಪ್ರಾಚೀನವಾಗಿದೆ. ಆರ್ಯರ. ಭಾರತೀಯರ ಸಭ್ಯತೆ, ಸಂಸ್ಕೃತಿಗಳನ್ನು, ಸಮಾಜಧರ್ಮ, ನೀತಿಗಳನ್ನು ತಿಳಿಯುವುದಕ್ಕೆ ಪ್ರಾಚೀನತಮವಾದ ಸಾಧನವು ಈ ವೇದವನ್ನು ಬಿಟ್ಟು ಬೇರೆ ಯಾವುದೂ ಇಲ್ಲ. ಆರ್ಯಧರ್ಮದ ವಿಕಾಸವು ಹೇಗೆ ಆಯಿತೆಂಬುದನ್ನು ತಿಳಿಯಬೇಕಿದ್ದರೆ, ವೇದವನ್ನು ಚೆನ್ನಾಗಿ ಅಭ್ಯಾಸಮಾಡಿ

ಸರಿಯಾದ ದೃಷ್ಟಿಯಿಂದ ವಿಮರ್ಶಿಸಿದರೆ ಮಾತ್ರ ಅದು ಸಾಧ್ಯವಾಗುತ್ತದೆ. ವೇದದ ಭಾಷೆಯು ಅತ್ಯಂತ ಪ್ರಾಚೀನವಾಗಿದೆ. ಆರ್ಯ ಭಾಷೆಯು ಮತ್ತು ಅದರ ಸಂತತಿ ಭಾಷೆಗಳ ಮೂಲ ಸ್ವರೂಪವನ್ನು ತಿಳಿಯಬೇಕಿದ್ದರೆ ವೇದದ ಸಂಸ್ಕೃತ ಭಾಷೆಯನ್ನು ಬಿಟ್ಟರೆ ಪ್ರಪಂಚದಲ್ಲಿ ಬೇರೆ ಯಾವುದೂ ಸರಿಯಾದ ಸಾಧನವು ಸಿಗುವಂತಿಲ್ಲ. ಆದ್ದರಿಂದ ವೇದಕ್ಕಿರುವ ಮಹತ್ವವು ಅದ್ವಿತೀಯವಾದದ್ದೆಂದು ಪ್ರತ್ಯೇಕವಾಗಿ ಹೇಳಬೇಕಾದದ್ದೇನಿದೆ?

"ವೇದ" ಶಬ್ದವು ಜ್ಞಾನಾರ್ಥಕವಾದ "ವಿದ್" ಧಾತುವಿನಿಂದ ಹುಟ್ಟಿದೆ. ವೇದವೆಂದರೆ ಜ್ಞಾನ ಭಂಡಾರ, ಅಥವಾ ಜ್ಞಾನ ಬೋಧಕ ವೆಂದು ಹೇಳಬಹುದು. ವೇದವು ನಮಗೆ ಭಾರತೀಯರಿಗೆ- ಪ್ರಭು ಸಂಹಿತೆಯು. ಅಂದರೆ ರಾಜಾಜ್ಞೆಯಂತೆ ಅನುಸರಿಸಲು ಯೋಗ್ಯವಾದುದು, ರಾಜಾಜ್ಞೆಯಮೇಲೆ ಸೇವಕನಿಗೆ 'ಅದು ಏತಕ್ಕೆ?' 'ಹೇಗೆ?' ಎಂದು ಕೇಳುವ ಅಧಿಕಾರವಿಲ್ಲವೋ ಅದಕ್ಕಾಗಿಯೇ ಕೇಳಕೂಡದೋ ಅವನು ಅಪ್ಪಣೆಯಂತೆಯೇ ನಡೆದುಕೊಳ್ಳಬೇಕಾಗುತ್ತದೆಯೋ ಅದರಂತೆಯೇ ವೇದದ ಅಪ್ಪಣೆಯನ್ನು, ವೇದವು ಹೇಳುವ ಧರ್ಮ, ಕರ್ಮ, ರೀತಿ, ನೀತಿಗಳನ್ನು ತಪ್ಪದೇ ಹಿಂದುವಾದವನು ಪಾಲಿಸಬೇಕು, ಅದರಂತೆ ನಡೆದುಕೊಳ್ಳಬೇಕು. ಇಲ್ಲದಿದ್ದರೆ ಮಾತುಮೀರುವ ಅಧಿಕ ಪ್ರಸಂಗಿಯಾದ ಸೇವಕನಿಗೆ ರಾಜದಂಡವು ಬೀಳುವಂತೆ ವೇದದ ಆಜ್ಞೆಯನ್ನು ಮೀರಿದ ಹಿಂದುವು ದೈವದಂಡ, ವೇದ ದಂಡವನ್ನು ಅನುಭವಿಸಬೇಕಾಗುತ್ತದೆ. ಇಂತಹ ಪ್ರಭು ಸಂಹಿತೆಯು ಪ್ರತಿಯೊಂದು ಜನಾಂಗಕ್ಕೂ ಇರುತ್ತದೆ. ಹಿಂದುಗಳಿಗೆ ವೇದವು ಪ್ರಭು ಸಂಹಿತೆಯಾದಂತೆ ಮಹಮ್ಮದೀಯರಿಗೆ 'ಖುರಾನ್' ಕ್ರೈಸ್ತರಿಗೆ 'ಬೈಬಲ್' ಪ್ರಭು ಸಂಹಿತೆಗಳಾಗಿವೆ. ತಮ್ಮ ತಮ್ಮ ಪ್ರಭು ಸಂಹಿತೆಗಳ ಆಜ್ಞೆಯನ್ನು ಪಾಲಿಸುವುದು ಪ್ರತಿಯೊಬ್ಬ ಸುಪಥಗಾಮಿಯಾದ, ನೀತಿಪರನಾದ ಮಾನವನ ಕರ್ತವ್ಯವಾಗಿದೆ. ಆಯಾ ದೇಶದ ಸಂಸ್ಕೃತಿ ಸನ್ನಿವೇಶಗಳಿಗೆ ಅನುಕೂಲ ವಾಗುವಂತೆ ಪ್ರತಿಯೊಂದು ಪ್ರಭು ಸಂಹಿತೆಯೂ ತಮ್ಮ ಮಕ್ಕಳಿಗೆ ತಂದೆಯು ಉಪದೇಶಿಸುವಂತೆ ರಾಜನು ಪ್ರಜೆಗಳಿಗೆ ಆಜ್ಞೆ ಮಾಡುವಂತೆ ತಮ್ಮ ಜನಾಂಗಕ್ಕೆ ಹೀಗೆಯೇ ನಡೆದುಕೊಳ್ಳಬೇಕೆಂದು ಬೋಧಿಸುತ್ತವೆ. ಅವನ್ನು ಮೀರಿ ನಡೆ

ದವರೇ ನಾಸ್ತಿಕರಾಗುತ್ತಾರೆ, ಧರ್ಮಬಾಹಿರರು ದ್ರೋಹಿಗಳು ಆಗುತ್ತಾರೆ, ದೇಶದ ಸಂಸ್ಕೃತಿಯ ದ್ರೋಹಿಗಳಾಗುತ್ತಾರೆ. ಆದ್ದರಿಂದ ಭಾರತೀಯರಾದ ನಾವು ಭಾರತದ ಪ್ರಭು ಸಂಹಿತೆಯೆನಿಸ ವೇದವನ್ನು ಗೌರವಿಸಬೇಕು ಅವರಲ್ಲಿ ಹೇಳಿದಂತೆ ನಡೆದುಕೊಳ್ಳಬೇಕೆಂದು ಧರ್ಮಶಾಸ್ತ್ರ, ಸ್ಮೃತಿ ಪುರಾಣಾದಿಗಳು, ಋಷಿಗಳು, ಮಹಾತ್ಮರು, ಸದಾ ಸಾರಿರುವರು.

## ವೇದಗಳ ಉಗಮ

ವೇದಗಳನ್ನು ಪ್ರಭು ಸಂಹಿತೆಯೆಂದು ಕರೆಯುತ್ತಾರೆ. ವೇದಗಳು ಪರಮಾತ್ಮನ ಉಸಿರು, ಆಜ್ಞೆ ಎಂದು ಭಾರತೀಯರಲ್ಲಿ ಪ್ರಾಚೀನ ಕಾಲದಿಂದಲೂ ನಂಬಿಕೆ ಮೂಡಿಬಂದಿದೆ. ನಮ್ಮ ಪ್ರಾಚೀನರು ವೇದವು ಅನಾದಿ ಮತ್ತು ಅನಂತ, ಪ್ರಪಂಚಕ್ಕೆಯೇ, ಪ್ರಭುವಾದ ಪರಮಾತ್ಮನ ಉಸಿರು ಎಂದು ಹೇಳಿರುವರು. ವೇದವು ಅನಾದ್ಯನಂತವಾಗಿದ್ದರೂ ಪ್ರತಿಯೊಂದು ಸಲ ಪ್ರಪಂಚದ ಸೃಷ್ಟಿಯಾದಾಗಲೂ ಚತುರ್ಮುಖ ಬ್ರಹ್ಮನ ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಹೊರಟುಬರುತ್ತವೆ. ಪ್ರಳಯ ಕಾಲದಲ್ಲಿ ಅವೆಲ್ಲವೂ ಪರಮಾತ್ಮನಲ್ಲಿ ಲೀನವಾಗುತ್ತವೆ. ಸೃಷ್ಟಿಯ ಆರಂಭದಲ್ಲಿ ಧ್ಯಾನಮಗ್ನನಾದ ಬ್ರಹ್ಮನಿಗೆ ಈ ವೇದಗಳು ಹೊಳೆಯುತ್ತವೆ. ಧ್ಯಾನಾಂತ್ಯದಲ್ಲಿ ಅವನ ನಾಲ್ಕು ಮುಖಗಳಿಂದ ಈ ನಾಲ್ಕು ವೇದಗಳು ಉಸಿರಿನ ರೂಪದಿಂದ ಹೊರಗೆ ಪ್ರಕಾಶಕ್ಕೆ ಬರುತ್ತವೆ. ಬ್ರಹ್ಮನ ಪೂರ್ವದಿಕ್ಕಿನ ಮುಖದಿಂದ ಋಗ್ವೇದವೂ, ದಕ್ಷಿಣಮುಖದಿಂದ ಯಜುರ್ವೇದವೂ, ಪಶ್ಚಿಮ ಮುಖದಿಂದ ಸಾಮವೇದವೂ, ಉತ್ತರಮುಖದಿಂದ ಅಥರ್ವಣವೇದವೂ, ಪ್ರಕಾಶಕ್ಕೆ ಬರುತ್ತವೆ ಎಂದು ಪೌರಾಣಿಕ ಸಿದ್ಧಾಂತವಿರುವುದು. ಇದನ್ನೇ ಭಾರತದ ಎಲ್ಲಾ ದಾರ್ಶನಿಕರು ಋಷಿಗಳು ಸ್ಮೃತಿಶಾಸ್ತ್ರಕಾರರು ಒಪ್ಪಿಕೊಂಡು ಘಂಟಾ ಘೋಷವಾಗಿ ಸಾರಿರುವರು. ಬ್ರಹ್ಮನ ಉಸಿರಿನ ರೂಪದಿಂದ ಹೊರಟುಬಂದ ವೇದಗಳು ಆಕಾಶದಲ್ಲಿ ಅವ್ಯಕ್ತ ಶಬ್ದಮಯವಾಗಿದ್ದುವು. ಅವುಗಳನ್ನು ಋಷಿಗಳು ತಪಃಶಕ್ತಿಯಿಂದ ಕಂಡುಹಿಡಿ

ವರು. 'ಋಷಿ' ಎಂದರೆ ನೋಡುವವನು ಎಂಬರ್ಥವಾಗುತ್ತದೆ. ಈ ಅರ್ಥವನ್ನು ಅನುಸರಿಸಿಯೇ ಯಾಸ್ಕನು ಋಷಿ ಶಬ್ದಕ್ಕೆ "ಮಂತ್ರಗಳನ್ನು ಕಂಡುಹಿಡಿದವನು" ಎಂದು ಅರ್ಥವಿವರಣೆ ಮಾಡಿದ್ದಾನೆ. ತಪೋನಿಷ್ಠರಾದ ಋಷಿಗಳು ವೇದಗಳನ್ನು ಕಂಡುಹಿಡಿದರು. ಭಿನ್ನ ಭಿನ್ನ ಕಾಲದಲ್ಲಿ ಭಿನ್ನ ಭಿನ್ನ ದೇಶಗಳಲ್ಲಿ ಅನೇಕ ವಂಶಜರಾದ ಋಷಿಪುಂಗವರು ಮಂತ್ರಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ತಾವು ಕಂಡುಹಿಡಿದ ಮಂತ್ರಗಳನ್ನು ತಮ್ಮಮಕ್ಕಳಗೆ ತಮ್ಮಶಿಷ್ಯರಿಗೆ ಉಪದೇಶಿಸಿದರು. ಅವರು ತಮ್ಮಮಕ್ಕಳಿಗೆ ತಮ್ಮಶಿಷ್ಯರಿಗೆ ಉಪದೇಶಿಸಿದರು. ಹೀಗೆ ತಲೆತಲಾಂತರಗಳಿಂದ ಸಾವಿರಾರು ವರ್ಷಗಳವರೆಗೆ, **ಹಳೆಯ ಮಂತ್ರಗಳ ಜೊತೆಗೆ ಹೊಸದಾಗಿ ಕಂಡುಹಿಡಿದಮಂತ್ರಗಳನ್ನು ಸೇರಿಸಿಕೊಳ್ಳುತ್ತಾ** ವೇದಗಳು ಹರಿಯುತ್ತಾ ಬಂದುವು ಹೀಗೆ ಹರಿಯುತ್ತಾಬಂದ ಮಂತ್ರಗಳು ಶಿಷ್ಯ ಪ್ರಶಿಷ್ಯರ ಮೂಲಕ ಭಾರತ ಭೂಮಿಯ ಎಲ್ಲಾ ಪ್ರಾಂತಗಳಲ್ಲಿಯೂ ವ್ಯಾಪಿಸಿ, ಸ್ಥಿರಮೂಲವಾದುವು. ಮಂತ್ರಗಳನ್ನು ಶ್ರೌತ, ಸ್ಮಾರ್ತ, ನಿತ್ಯ, ನೈಮಿತ್ತಿಕ ಕರ್ಮಗಳಲ್ಲಿಯೂ, ಯಜ್ಞಯಾಗಾದಿಗಳಲ್ಲಿಯೂ, ಉಪಾಸನೆ ತಂತ್ರಗಳಲ್ಲಿಯೂ, ಉಪಯೋಗಿಸತ್ತಾ ಬಂದಿರುವರು. ಇವುಗಳನ್ನು ಎಲ್ಲಾ ಕರ್ಮಗಳಲ್ಲಿಯೂ ಬಳಸುತ್ತಾ ಬಂದುದರಿಂದ ಇವು ಭಾರತದ ಸರ್ವಮಾನ್ಯ ಗ್ರಂಥವಾಗಿ ಏರ್ಪಟ್ಟವು. ಬೆಳೆಯುತ್ತಾ, ಪ್ರಚಾರವಾಗುತ್ತಾ, ಜನಪ್ರಿಯವಾಗುತ್ತಾ, ಪೂಜ್ಯವಾಗುತ್ತಾ ಬಂದ ಮಂತ್ರಗಳು ಅಸಂಖ್ಯಾಕವಾಗಿ ಬೆಳೆದುವು. ಅವೊಂದು ರಾಶಿಯಂತೆ ಆದುವು, ಕೊನೆಗೆ "ಅನಂತಾವೈವೇದಾಃ" (ತೈ. ಸಂ. ಬ್ರಾ) ಎನ್ನುವ ಸ್ಥಿತಿಗೆ ಬಂದು ಮುಟ್ಟಿತು. ಇದರಿಂದ ಕಲಿಸುವವರಿಗೂ, ಕಲಿಯುವವರಿಗೂ, ಉಪಾಸನೆ ಮಾಡುವವರಿಗೂ ಅತ್ಯಂತ ಕಠಿನ ಸಾಧ್ಯವಾಗಹತ್ತಿತು. ಈ ಮಂತ್ರ ಸಮುದಾಯದಲ್ಲಿ ಯಾವ ಭಾಗವನ್ನು ಕಲಿಸುವುದು, ಯಾವುದನ್ನು ಬಿಡುವುದೆಂದು ತೋಚದಾಯಿತು. ಒಂದು ಜೀವಮಾನವೆಲ್ಲ ಓದಿದರೂ ಅದನ್ನು ಓದಿಮುಗಿಸುವುದು ಅಸಾಧ್ಯವಾಯಿತು. ಇಂತಹ ! ಸಮಯದಲ್ಲಿ ರಾಶಿರಾಶಿಯಾಗಿ ಬೆಳೆದುಕೊಂಡಿರುವ ಮಂತ್ರಗಳನ್ನು ಒಂದು ವ್ಯವಸ್ಥೆಗೆ ತಂದು ಓದು

ಪಮಂಗೆ, ಕಲಿಸುವವರಿಗೆ ಎಲ್ಲಾ ಅನುಕೂಲವಾಗುವಂತೆ ವ್ಯವಸ್ಥೆಮಾಡಿ ಕೊಡಲು ಒಬ್ಬ ಮಹಾನುಭಾವನ ಅವಶ್ಯಕತೆಯೂ ಉಂಟಾಯಿತು. ಅದಕ್ಕೆ ತಕ್ಕಂತೆ ಅತ್ಯಂತ ಮೇಧಾವಿಯೂ, ಪ್ರತಿಭಾಶಾಲಿಯೂ ಸ್ವಭಾವತಃ ವಿರಕ್ತನೂ ಆದ ಕೃಷ್ಣದ್ವೈಪಾಯನನು ಪರಾಶರ ಪುತ್ರ ನಾಗಿ ಜನಿಸಿದನು. ಈತನು ವೇದಗಳೆಲ್ಲವನ್ನು ಪರಿಶೀಲಿಸಿ ಯಾವ ಯಾವ ಮಂತ್ರಗಳನ್ನು ಯಾವ ಯಾವ ಕರ್ಮಗಳಿಗೆ ಉಪಯೋಗಿಸುತ್ತಾ ರೆಂಬುದನ್ನು ಕಂಡುಹಿಡಿದು ಮಂತ್ರಗಳನ್ನು ನಾಲ್ಕು ವಿಧವಾಗಿ ವಿಭಾಗ ಸಿದನು. ಹೀಗೆ ವಿಭಾಗಿಸಿರುವ ಮಂತ್ರಗಳು ಋಕ್, ಯಜುಸ್, ಸಾಮ, ಅಥರ್ವಣ ವೇದಗಳಿಗೆ ಹೊಂದಿಕೊಳ್ಳುವಂತೆ ವ್ಯವಸ್ಥೆಗೊಳಿಸಿದನು. ಹೀಗೆ ವೇದಗಳನ್ನು ವಿಭಾಗಿಸಿ ವ್ಯವಸ್ಥೆಗೊಳಿಸಿದ್ದರಿಂದಲೇ ಕೃಷ್ಣದ್ವೈಪಾಯನನಿಗೆ 'ವ್ಯಾಸ' ನೆಂಬ ಹೆಸರು ಪ್ರಸಿದ್ಧವಾಯಿತು. ತಾನು ನಾಲ್ಕು ವಿಧವಾಗಿ ವಿಭಾಗಿಸಿದ ಮಂತ್ರಸಮುದಾಯಗಳನ್ನು ಪ್ರಧಾನವಾಗಿ ನಾಲ್ಕು ಜನ ಶಿಷ್ಯರಿಗೆ ಕಲಿಸಿದನು. ಅಲ್ಲಿಂದ ಗೋತ್ರ, ಶಿಷ್ಯ ಪರಂಪರೆಯೇ ಮೊದ ಲಾದವುಗಳನ್ನು ಅನುಸರಿಸಿ ಯಾವಯಾವ ಪಂಗಡದವರು ಯಾವ ಯಾವ ವೇದಗಳನ್ನು ಕಲಿಯಬೇಕೆಂಬ ಒಂದು ಕ್ರಮವು ಏರ್ಪಟ್ಟಿತು, ಅದರಂತೆಯೇ ನಿಯಮವಾಯಿತು ಆ ನಿಯಮವನ್ನನುಸರಿಸಿಯೇ ವೇದಾ ಭ್ಯಾಸ ಮಾಡುವುದು ಸಾಂಪ್ರದಾಯಕವಾಗಿ ಹರಿಯ ಹತ್ತಿತು. ಅದು ಇಂದಿನವರೆಗೂ ಬತ್ತದೆ ಹರಿಯುತ್ತಾ ಬಂದಿದೆ. ವೇದವನ್ನು ಅಭ್ಯಾಸ ಮಾಡದೆ ಇದ್ದರೂ ಸಹ ತಾವು ಯಾವ ವೇದದ ಅನುಯಾಯಿಗಳೆಂಬು ದನ್ನು ಮರೆಯದೆ ಇರಲೆಂಬ ಉದ್ದೇಶದಿಂದ ಗೋತ್ರಪ್ರವರದ ಉಚ್ಚಾ ರಣೆಯ ಪದ್ಧತಿಯು ಏರ್ಪಟ್ಟು ಇಂದಿನವರೆಗೂ ನಡೆದುಕೊಂಡು ಬಂದಿದೆ. ವೇದಗಳು ಉಗಮವಾಗಿ ಪ್ರಚಾರಕ್ಕೆ ಬಂದ ಕ್ರಮವನ್ನು ಸಾಮಾನ್ಯ ವಾಗಿ ಮೇಲಿನಂತೆ ಸಂಗ್ರಹಿಸಿ ಹೇಳಬಹುದು.

"ವೇದಗಳು ಅನಂತವಾಗಿವೆ" ಎಂಬುದಕ್ಕೆ ಕೃಷ್ಣಯಜುರ್ವೇದದ ಬ್ರಾಹ್ಮಣದಲ್ಲಿ ಒಂದು ಕಥೆಯು ಬರುತ್ತದೆ. ಭರದ್ವಾಜನೆಂಬ ಮುನಿಯು ಸುಮಾರು ಮುನ್ನೂರು ವರ್ಷಗಳ ಕಾಲ ವೇದಾಭ್ಯಾಸ

ಮಾಡಿದನು. ಅದರಲ್ಲಿಯೇ ಭರದ್ವಾಜನ ಆಯುಸ್ಸು ಮುಗಿಯುತ್ತಾ ಬಂದಿತು, ಇವನು ವೇದಾಭ್ಯಾಸದಲ್ಲಿಯೇ ತಲ್ಲೀನನಾಗಿ ಗಾರ್ಹಸ್ಥ್ಯವನ್ನು ಸ್ವೀಕರಿಸದೆಯೇ ಮುದುಕನಾದನು. ಇವನ ಏಕನಿಷ್ಠೆಯನ್ನು ಕಂಡ ಇಂದ್ರನು ಇವನ ಹತ್ತಿರ ಪ್ರತ್ಯಕ್ಷ್ಯವಾಗಿ ಬಂದು "ಇನ್ನೊಂದು ನೂರು ವರ್ಷ ನಿನಗೆ ಆಯುಸ್ಸು ಕೊಟ್ಟರೆ ನೀನು ಏನು ಮಾಡುತ್ತೀಯೆ?" ಎಂದು ಕೇಳಿದನು. ಅದಕ್ಕೆ ಭರದ್ವಾಜನು "ಇನ್ನೂ ಕಲಿಯದೆ ಬಾಕಿ ಉಳಿದಿರುವ ವೇದ ಭಾಗವನ್ನು ಕಲಿಯುತ್ತೇನೆ." ಎಂದು ಹೇಳಿದನು. ಅದಕ್ಕೆ ಇಂದ್ರನು ವೇದಗಳ ನಾಲ್ಕು ಪರ್ವತಗಳನ್ನು ತೋರಿಸಿ ಆ ನಾಲ್ಕು ಪರ್ವತಗಳಿಂದಲೂ ಒಂದೊಂದು ಮುಷ್ಟಿ ಪುಡಿಯನ್ನು ತೆಗೆದುಕೊಂಡು ಬಂದು "ನೀನು ಈ ವರೆಗೆ ಕಲಿತಿರುವ ವೇದಭಾಗವು ಇಷ್ಟು, ಇನ್ನು ಅಲ್ಲಿರುವ ಪರ್ವತದಷ್ಟು ನೀನು ಕಲಿಯಬೇಕೆಂದಿರುವ ವೇದಭಾಗವು ಉಳಿದಿದೆ, ಇಷ್ಟು ಕಲಿಯುವುದಕ್ಕೆ ೩೦೦ ವರ್ಷಗಳು ಕಳೆದಮೇಲೆ ಆ ಪರ್ವತದಂತಿರುವ ವೇದಭಾಗವನ್ನು ಕಲಿತು ಮುಗಿಸಲು ನಿನ್ನಿಂದ ಸಾಧ್ಯವೇ? ಈಗ ಕಲಿತಿರುವುದರಲ್ಲಿಯೇ ತೃಪ್ತಿಹೊಂದಿ ಪ್ರಯೋಜನವನ್ನು ಪಡೆ" ಎಂದು ಹೇಳಿದನು. ಅದನ್ನು ತಿಳಿದು ಭರದ್ವಾಜನು ವೇದಗಳನ್ನು ಕಲಿತು ಮುಗಿಸುವ ಯೋಚನೆಯನ್ನು ಬಿಟ್ಟು ಗೃಹಸ್ಥನಾದನು. ಇದರಿಂದ ವೇದಗಳು ಈಗ ದೊರೆತಿರುವಷ್ಟೇ ಅಲ್ಲದೆ ಇನ್ನೂ ಎಷ್ಟೋ ಮಂತ್ರ ಬ್ರಾಹ್ಮಣಾದಿಭಾಗಗಳು ಕಣ್ಮರೆಯಾಗಿವೆ ಎಂಬುದನ್ನು ಕಲ್ಪಿಸಿ ತಿಳಿದುಕೊಳ್ಳಬಹುದು. ಆದರೆ ವೇದಗಳು ಉಗಮವಾದ ರೀತಿಯಬಗ್ಗೆ ಪ್ರಾಚೀನ ಕಾಲದಿಂದ ಹೇಳಿಕೊಂಡು ಬಂದಿರುವ ರೀತಿಯನ್ನು ಇಂದಿನ ವಿಮರ್ಶಕರು ನಂಬುವುದಿಲ್ಲ. ಇಂದಿನ ವಿಮರ್ಶಕರು ಆರ್ಯರು ಭಾರತಕ್ಕೆ ಬಂದನಂತರ ತಮ್ಮ ಅನುಭವಕ್ಕೆ ಬಂದ ವಿಷಯಗಳಿಗೆ ಪ್ರತಿರೂಪ ಕೊಟ್ಟು ಹೇಳಿರುವ ವಾಕ್ಯಗಳಿಗೆ ಅಥವಾ ಗ್ರಂಥಕ್ಕೆ ವೇದವೆಂದು ಕರೆಯುವ ಪದ್ಧತಿ ಬಂದಿದೆ ಎಂದು ಹೇಳುತ್ತಾರೆ. ಇವರು ನಾನಾ ಪ್ರಾಂತಗಳಲ್ಲಿ ವಾಸಮಾಡಿದ ಆರ್ಯರು, ಈ ವೇದವನ್ನು ರಚಿಸಿದರೆಂಬ ಸಿದ್ಧಾಂತದ ಮೇಲೆ ತಮ್ಮ ವಿಚಾರಸರಣಿಯನ್ನು ವಿಸ್ತರಿಸಿಕೊಂಡು ಬರುತ್ತಾರೆ.

# ವೇದದ ನಾಮಾಂತರಗಳು

ಈಶ್ವರನ ಜ್ಞಾನವು ಒಂದು. ಈಶ್ವರನು ತನ್ನ ಒಂದೇ ಜ್ಞಾನದಿಂದ ಎಲ್ಲವನ್ನೂ ನಡೆಸುತ್ತಾನೆ, ನೋಡುತ್ತಾನೆ, ಮಾಡುತ್ತಾನೆ ಮಾಡಿಸುತ್ತಾನೆ. ಅವನ ಜ್ಞಾನವು ಕಾಲಭೇದ ವಿಷಯ ಭೇದಗಳಿಂದ ಎಂದೂ ಬದಲಾವಣೆ ಹೊಂದುವುದಿಲ್ಲ. ಆದ್ದರಿಂದ ಈಶ್ವರನ ಜ್ಞಾನವು ಅಖಂಡವೂ, ಪರಿಪೂರ್ಣವೂ, ಏಕವೂ ಆಗಿದೆ. ಇಂತಹ ಈಶ್ವರನ ಜ್ಞಾನವು ಪ್ರಣವ—ಓಂಕಾರಾತ್ಮಕವಾದುದು. ಈ ಒಂದು ಪ್ರಣವದಲ್ಲಿಯೇ ಗಾಯಿತ್ರಿಯೂ, ಗಾಯಿತ್ರಿಯಲ್ಲಿ ಚತುರ್ವೇದಗಳೂ ಚತುರ್ವೇದಗಳಲ್ಲಿ ಪ್ರಪಂಚದ ಎಲ್ಲಾ ವಿಧವಾದ ಜ್ಞಾನ, ಸತ್ಯಗಳೂ ಅಡಕವಾಗಿವೆ. ಆದ್ದರಿಂದ ಈಶ್ವರನ ಜ್ಞಾನವಾದ ವೇದವೂಸಹ ನಿತ್ಯವೂ ಅಖಂಡವೂ ಪರಿಪೂರ್ಣವೂ ಏಕವೂ ಆಗಿದೆ. ವೇದವು ತಾತ್ವಿಕವಾಗಿ ಮೂಲತಃ ಒಂದೇ ಒಂದಾಗಿದ್ದು ಅದರಲ್ಲಿ ಯಾವ ವಿಧವಾದ ಭೇದಗಳೂ ಇರುವುದಿಲ್ಲ.

ಹೀಗೆ ವೇದವು ತಾತ್ವಿಕವಾಗಿ ಒಂದೇ ಆಗಿದ್ದರೂ, ವ್ಯವಹಾರದಲ್ಲಿ ಅದನ್ನು, ವೇದ, ತ್ರಯೀ, ಚತುರ್ವೇದಗಳು, ಶ್ರುತಿಗಳೆಂದು ಅನೇಕ ಹೆಸರುಗಳಿಂದ ಕರೆಯಲಾಗುತ್ತದೆ. ಈ ರೀತಿಯ ವ್ಯವಹಾರವು ಅನಾದಿಕಾಲದಿಂದಲೂ ಪ್ರಸಿದ್ಧವಾಗಿ ಬಂದಿರುವುದಕ್ಕೆ ಕಾರಣವನ್ನೂ ಆಯಾ ಹೆಸರುಗಳ ಸಾರ್ಥಕತೆಯನ್ನೂ ಸಹ ನಾವು ಸ್ವಲ್ಪವಾದರೂ ತಿಳಿದುಕೊಳ್ಳುವುದು ಅವಶ್ಯವಿರುತ್ತದೆ.

೧ **ವೇದಃ—** ವೇದವು ಈಶ್ವರನ ಜ್ಞಾನವಾಗಿರುವುದರಿಂದ ಇದಕ್ಕೆ ವೇದವೆಂಬ ಹೆಸರು ಬಂದಿದೆ. ಜ್ಞಾನಾರ್ಥಕವಾದ 'ವಿದ್' ಧಾತುವಿನ ನಾಮಪದವಾದ 'ವೇದ' ಶಬ್ದಕ್ಕೆ ಜ್ಞಾನ, ಜ್ಞಾನ ಭಂಡಾರ, ಜ್ಞಾನ ಬೋಧಕವೆಂದು ಅರ್ಥವಾಗುತ್ತದೆ. ಆದ್ದರಿಂದಲೇ ಈಶ್ವರನ ಜ್ಞಾನವಾದ ವೇದಕ್ಕೆ 'ವೇದ' ವೆಂಬ ಹೆಸರು ಸಾರ್ಥಕವಾಗಿದೆ.

೨ **ತ್ರಯೀ:—** ವೇದವು ಮೂಲತಃ ಒಂದೇ ಆಗಿದ್ದರೂ ಅದರ ಉಪ

ಯೋಗದ ದೃಷ್ಟಿಯಿಂದ, ಅದರಲ್ಲಿರುವ ವಿಷಯಗಳ ದೃಷ್ಟಿಯಿಂದ ವೇದವನ್ನು "ತ್ರಯೀ" ಎಂದು ಕರೆಯಲಾಗುತ್ತದೆ. ವೇದವಲ್ಲಿ ಪ್ರಧಾನವಾಗಿ ತುಂಬಿಕೊಂಡಿರುವ ವಿಷಯಗಳು ಜ್ಞಾನಕಾಂಡ, ಉಪಾಸನಾಕಾಂಡ, ಕರ್ಮ ಕಾಂಡಗಳಿಗೆ ಸಂಬಂಧಪಟ್ಟವು. ಈ ಮೂರುಕಾಂಡಗಳಿಗೆ ಸಂಬಂಧಪಟ್ಟ ಮಂತ್ರಗಳು ಪ್ರತಿಯೊಂದು ವೇದದಲ್ಲಿಯೂ ಇರುವುದರಿಂದ ವೇದಗಳಿಗ "ತ್ರಯೀ" ಎಂದು ಕರೆಯುತ್ತಾರೆ. ಇದಲ್ಲದೆ ವೇದದಲ್ಲಿ ವಿನಿಯೋಗ ಮಂತ್ರಗಳು, [ಯಜ್ಞ ಹೋಮಾದಿಗಳನ್ನು ಮಾಡುವ ಸಮಯದಲ್ಲಿ ಹವನ ಮಾಡುವುದಕ್ಕೆ ಉಪಯೋಗಿಸುವ ಮಂತ್ರಗಳು.] ಗಾನಮಂತ್ರಗಳು [ಯಜ್ಞ ಸಮಯದಲ್ಲಿ ಸಾಮಗಾನವನ್ನು ಹಚ್ಚಿ ದೇವತೆಗಳನ್ನು ಕರೆಯಲು ಉಪ ಯೋಗಿಸುವ ಮಂತ್ರಗಳು.], ಗದ್ಯ ಮಂತ್ರಗಳು [ಸಾಂಗವಾದ ಯಜ್ಞಗಳನ್ನು ವಿವರಿಸುವ ಮಂತ್ರಗಳು]. ಎಂದು ಪ್ರಧಾನವಾಗಿ ಮೂರು ವಿಧವಾದ ಮಂತ್ರ ಗಳಿರುತ್ತವೆ. ಹೀಗೆ ನಾಲ್ಕು ವೇದಗಳಲ್ಲಿ ವಿಷಯ ಮತ್ತು ವಿನಿಯೋಗಗಳ ದೃಷ್ಟಿಯಿಂದ ಮೂರು ವಿಧವಾದ ಮಂತ್ರಗಳಿರುವುದರಿಂದ, ಎಲ್ಲಾ ವೇದ ಗಳಿಗೂ 'ತ್ರಯೀ' ಎಂಬ ಹೆಸರು ಸಾರ್ಥಕವಾಗಿ ಸಲ್ಲುತ್ತದೆ.

೩ **ಚತುರ್ವೇದಗಳು :—** ಇದರಂತೆಯೇ ವೇದಗಳನ್ನು ನಾಲ್ಕು ವೇದಗಳೆಂದು ಕರೆಯುವ ಪದ್ಧತಿಯೂ ಸಹ ಉಪಯೋಗದ ದೃಷ್ಟಿಯಿಂದ ಲೇ ಬಂದಿ . ಆರಂಭದಲ್ಲಿ ಮನುಷ್ಯನ ಸಾಧನಾಕ್ರಮವು ತಪಸ್ಸು, ಧ್ಯಾನ ಗಳಾಗಿದ್ದವು. ಧ್ಯಾನ, ತಪಸ್ಸುಗಳನ್ನು ಮಾಡಲು ಅಸಮರ್ಥರಾದವರಿಗಾಗಿ ಋಷಿಗಳು ಯಜ್ಞಕ್ರಮವನ್ನು ಆರಂಭಿಸಿದರು. ಯಜ್ಞಗಳನ್ನು ಕ್ರಮಬದ್ಧ ವಾಗಿ ನಡೆಸಲು ಒಂದೇ ಒಂದಾದ ವೇದದಲ್ಲಿನ ಕೆಲ ಕೆಲವು ಮಂತ್ರ ಭಾಗ ಗಳನ್ನು ಒಂದೊಂದು ವಿಧವಾದ ಕೆಲಸಕ್ಕೆ ಉಪಯೋಗಿಸುವಂತೆ ವ್ಯವಸ್ಥೆ ಮಾಡಿದರು. ಹೀಗೆ ಒಂದೊಂದು ಕೆಲಸಕ್ಕೆ ಉಪಯೋಗಿಸುತ್ತಾ ಬಂದ ಮಂತ್ರಸಮುದಾಯಗಳಿಗೆ ನಾಲ್ಕು ವೇದಗಳೆಂದು ಹೆಸರು ಬಂದಿತು. ಒಂದೇ ಒಂದಾದ ಮೂಲ ವೇದದ ನಾಲ್ಕು ಭಾಗಗಳನ್ನು ಋಕ್, ಯಜುಸ್ ಸಾಮ, ಅಥರ್ವಣವೆಂಬ ನಾಲ್ಕು ಹೆಸರುಗಳಿಂದ ಕರೆಯುತ್ತಾರೆ. ಇವು ಗಳಲ್ಲಿ ಮೊದಲನೆಯದಾದ ಋಗ್ವೇದವನ್ನು ಹೋತೃವೂ, ಎರಡನೆಯದಾದ

ಯಜುರ್ವೇದವನ್ನು ಅಧ್ವರ್ಯುವೂ, ಮೂರನೆಯದಾದ ಸಾಮವೇದವನ್ನು ಉದ್ಗಾತೃವೂ, ನಾಲ್ಕನೆಯದಾದ ಅಥರ್ವಣ ವೇದವನ್ನು ಬ್ರಹ್ಮನೂ(ಯಜ್ಞಾಧ್ಯಕ್ಷ) ಉಪಯೋಗಿಸಿಕೊಂಡು, ತಮ್ಮ ತಮ್ಮ ಭಾಗದ ಕೆಲಸವನ್ನು ಸಾಂಗವಾಗಿ ವಿಧಿವತ್ತಾಗಿ ಪೂರ್ಣಗೊಳಿಸುತ್ತಿದ್ದರು.

ಋಗ್ವೇದೇನ ಹೋತಾ ಯಜುರ್ವೇದೇನಾಧ್ವರ್ಯುಃ |
ಸಾಮವೇದೇನೋದ್ಗಾತಾ ಅಥರ್ವೈರ್ವಾ ಬ್ರಹ್ಮಾ ||

ಈ ನಾಲ್ಕು ವೇದಗಳೂ ಸಹ ಪರಮಾತ್ಮನ ಉಸಿರೆಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿವೆ. "ಅರೇ ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತತ್ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ"
ವೇದವನ್ನು "ತ್ರಯೀ" ಎಂದು ಹೆಸರಿಸಿರುವುದನ್ನು ನೋಡಿ, ಅಥರ್ವಣ ವೇದವು ಅನಂತರಿಕವೆಂದು ಹೇಳುವವರು ಇದನ್ನು ಚನ್ನಾಗಿ ನೆನಪಿನಲ್ಲಿಡಬೇಕಾಗುತ್ತದೆ. ಅಥರ್ವಣ ವೇದಕ್ಕೆಯೇ "ಅಥರ್ವ, ಆಂಗೀರಸ, ಛಾಂದಸ ಎಂಬ ಮೂರು ಹೆಸರಗಳಿದ್ದವು, ಮತ್ತು ತ್ರಯೀ ಎಂಬ ಹೆಸರು ನಾಲ್ಕು ವೇದಗಳಿಗೂ ಪ್ರತ್ಯೇಕವಾಗಿಯೂ, ಸಮಷ್ಟಿರೂಪವಾಗಿಯೂ ಅನ್ವಯಿಸುತ್ತದೆ. ಈ ನಾಲ್ಕು ವೇದಗಳಲ್ಲಿಯೂ ಹಿಂದೆ ಹೇಳಿರುವ ಮೂರು ಕಾಂಡಗಳಿಗೆ ಸಂಬಂಧಪಟ್ಟ ಮಂತ್ರಗಳಿರುತ್ತವೆ. ಅವನ್ನು ಮಹಾ ಭಾರತದ ಒಂದು ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದೆ.

"ತ್ರಯೀವಿದ್ಯಾಮವೇಕ್ಷೇತ ವೇದೇ ಸೂಕ್ತಮಥಾಂಗತಃ |
ಋಕ್ಸಾಮವರ್ಣಾಕ್ಷರತೋ ಯಜುಷೋಽಥರ್ವಣಸ್ತಥಾ ||

೪. **ಶ್ರುತಿ:**— ಇದಲ್ಲದೆ ವೇದಗಳನ್ನು 'ಶ್ರುತಿ' ಎಂದು ಕರೆಯಲಾಗುತ್ತಿದೆ. ಶ್ರುತಿ ಎಂದರೆ ಶ್ರವಣಮಾಡಿದ್ದು, ಕೇಳಿದ್ದು, ಎಂದು ಅರ್ಥವಾಗುತ್ತದೆ. ಶ್ರವಣಾರ್ಥಕವಾದ 'ಶ್ರು' ಧಾತುವಿನಿಂದ 'ಶ್ರುತಿ' ಎಂಬ ಶಬ್ದವು ನಿಷ್ಪನ್ನವಾಗಿದೆ. ಪರಮಾತ್ಮನ ನಿತ್ಯ ಜ್ಞಾನವಾದ ವೇದವು ಅನಾದಿ ಪರಂಪರೆಯಾಗಿ ಕಿವಿಗಳಿಂದ ಕೇಳಿ ಗ್ರಹಣ ಮಾಡಲಾಗುತ್ತಿದೆ. ಸೃಷ್ಟಿಯ ಆರಂಭದಲ್ಲಿ ಪರಮಾತ್ಮನ ನಿಶ್ವಾಸವಾದ (ಉಸಿರಾದ) ವೇದವನ್ನು ಪ್ರಜಾಪತಿಯು

ಕೇಳಿದನು. ಹಾಗೆಯೇ ಕರ್ಣಪರಂಪರೆಯಾಗಿ ವೇದವು ಪ್ರಚಾರವಾಗುತ್ತಾ ಬಂದಿತು. ಹೀಗೆ ಶ್ರವಣಪರಂಪರೆಯಾಗಿ ಪ್ರಚಾರವಾಗುತ್ತಾ ಬಂದ ವೇದಗಳಿಗೆ 'ಶ್ರುತಿ' ಎಂಬ ಹೆಸರು ಸಾರ್ಥಕವಾಗಿವೆ,

ಶಬ್ದಾರಾಧಕರಾದ ಯೋಗಿಗಳು ಎರಡು ಕಿವಿಗಳನ್ನು ಮುಚ್ಚಿಕೊಂಡು ಧ್ಯಾನಮಗ್ನರಾಗುತ್ತಾರೆ. ಧ್ಯಾನಮಗ್ನರಾದ ಯೋಗಿಗಳಿಗೆ ಅನಾಹತವಾದ ನಾದವು ಕೇಳಬರುತ್ತದೆ. ಅನಾಹತನಾದವೇ ಅವ್ಯಕ್ತ ಪ್ರಣವವೆಂದು ಹೇಳಿಸಿಕೊಳ್ಳುತ್ತದೆ. ಈ ಪ್ರಣವವನ್ನು ಓಂಕಾರವೆಂಬ ಇನ್ನೊಂದು ಹೆಸರಿನಿಂದ ಕರೆಯುತ್ತಾರೆ. ಈ ಓಂಕಾರದಿಂದಲೇ ಗಾಯತ್ರಿಯೂ, ಗಾಯತ್ರಿಯಿಂದ ಸಮಸ್ತ ವೇದಗಳೂ, ಅಭಿವ್ಯಕ್ತವಾದವೆಂದು ಶಾಸ್ತ್ರಗಳು ಹೇಳುತ್ತವೆ. ಈ ಅನಾಹತ ನಾದದಲ್ಲಿ ದೀರ್ಘ ಕಾಲದವರೆಗೆ ಅನುಸಂಧಾನಪೂರ್ವಕವಾಗಿ ಧ್ಯಾನಮಗ್ನನಾಗಿದ್ದರೆ, ಅವನ ಹೃದಯಾಂತರಾಳದಲ್ಲಿ ಈ ವೇದವು ಗೋಚರವಾಗುತ್ತದೆ.

ಯಸ್ಯಾಮುತ್ಪದ್ಯತೇ ನಾದಃ ಸೂಕ್ಷ್ಮಬೀಜಾದಿವಾಂಕುರಃ
ತಾಂ ಪಶ್ಯಂತೀಂ ವಿದುರ್ವಿಶ್ವಂ ಯಯಾಪಶ್ಯಂತಿ ಯೋಗಿನಃ।
ಅಕಾರಾದಿ ಕ್ಷಕಾರಾಂತಾನ್ಯಕ್ಷರಾಣಿ ಸಮೀರಯೇತ್
ಸರ್ವೇ ವಾಕ್ಯಾತ್ಮಕಾ ಮಂತ್ರಾಃ ವೇದಶಾಸ್ತ್ರಾಣಿ ಕೃತ್ಸ್ನಶಃ॥

( ಯೋಗಿ ಶಿಖೋಪನಿಷತ್ )

ಸೃಷ್ಟಿಯ ಆರಂಭದಲ್ಲಿ ಪ್ರಜಾಪತಿಯು ಇದೇರೀತಿಯಲ್ಲಿ ಸಹಸ್ರಾರು ವರ್ಷಗಳ ಕಾಲ ಧ್ಯಾನಾಸಕ್ತನಾಗಿದ್ದನು. ಕೊನೆಗೆ ಪ್ರಜಾಪತಿಯ ಹೃದಯದಲ್ಲಿ ಪರಮಾತ್ಮನ ಉಸಿರಾದ ವೇದವು ಮೊಳಗಿತು, ಕೇಳಿಸಿತು. ಧ್ಯಾನವಿಮುಖನಾದಮೇಲೆ, ಪ್ರಜಾಪತಿಯ ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಉಸಿರಿನ ರೂಪವಾಗಿ ಹೊರಬಂದು ಆಕಾಶದಲ್ಲಿ ಅವ್ಯಕ್ತವಾಗಿ ಉಳಿದವು. ಈ ವೇದಜ್ಞಾನದಿಂದಲೆ ಪ್ರಜಾಪತಿಯು ಪ್ರಪಂಚದ ಎಲ್ಲಾ ಕೆಲಸಗಳನ್ನು ನಡೆಸುತ್ತಾನೆ. ಹಾಗೆಯೇ ಪ್ರಜಾಪತಿಯ ಮುಖದಿಂದ ಹೊರಬಂದು ಆಕಾಶದಲ್ಲಿ ಅವ್ಯಕ್ತವಾಗಿದ್ದ ವೇದಗಳನ್ನು ಋಷಿಗಳು ಸಹ ತಮ್ಮತಮ್ಮ ತಪಸ್ಸಿಗನುಸಾರವಾಗಿ ವೇದ ಮಂತ್ರಗಳನ್ನು ಕೇಳಿದರು, ಮತ್ತು ಪ್ರತ್ಯಕ್ಷೀಕರಿಸಿ

ಕೊಂಡರು. ಆದ್ದರಿಂದಲೇ ವೇದಗಳಿಗೆ ಶ್ರುತಿ ಎಂಬ ಹೆಸರು ಸಾರ್ಥಕವಾಗಿದೆ.

## ವೇದಗಳ ಒಳ ವಿಭಾಗಗಳು.

ವೇದವು ತಾತ್ವಿಕವಾಗಿ ಒಂದೇ ಆಗಿದ್ದರೂ ನಾಲ್ಕು ವೇದಗಳಾ ಗಿರುವುದನ್ನು ಹಿಂದೆಯೇ ಹೇಳಿದ್ದಾಯಿತು. ಈ ನಾಲ್ಕು ವೇದಗಳನ್ನು ಸಹ ಪುನಃ ಅನೇಕ ವಿಧವಾಗಿ ವಿಭಾಗಿಸಿ ಕರೆಯಲಾಗುತ್ತಿದೆ. ಪ್ರತಿಯೊಂದು ವೇದವನ್ನೂ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳೆಂದು ನಾಲ್ಕು ವಿಧವಾಗಿವಿಭಾಗ ಮಾಡಿದ್ದಾರೆ. ವೇದವೊಳಗಿನ ಮಂತ್ರಗಳ ಸಮುದಾಯಕ್ಕೆ ಸಂಹಿತೆ ಎಂದು ಕರೆಯುತ್ತಾರೆ. ಈ ಸಂಹಿತಾ ಮಂತ್ರಗಳ ಒಂದು ವಿಧವಾ ವಿಸ್ತೃತವಾದ ವ್ಯಾಖ್ಯಾನಗಳಿಗೆ ಬ್ರಾಹ್ಮಣವೆಂದು ಕರೆದಿರುವರೆಂದು ಹೇಳ ಬಹುದು. ಮುಖ್ಯವಾಗಿ ಯಜ್ಞಗಳ ವಿಸ್ತೃತವಾದ ವಿವರಣೆಗಳನ್ನು ಮಾಡಿಕೊಡುವುದೇ ಬ್ರಾಹ್ಮಣ ಗ್ರಂಥದ ಪರಮೋದ್ದೇಶವೆಂದು ತೋರುತ್ತದೆ. ಬ್ರಾಹ್ಮಣ ಗ್ರಂಥಗಳಲ್ಲಿ ಯಜ್ಞಗಳ ವಿಸ್ತೃತವಾದ ವಿವರಣೆಗಳು, ಅನೇಕ ಕಥೆ, ಆಖ್ಯಾಯಿಕೆಗಳು ಇರುತ್ತವೆ. ಆರಣ್ಯಕಗಳಲ್ಲಿ ಯಜ್ಞಗಳ ಆಧ್ಯಾತ್ಮಿ ಕವಾದ ವಿವೇಚನೆಗಳು ಮಾಡಲ್ಪಟ್ಟಿವೆ. ಬ್ರಾಹ್ಮಣ ಗ್ರಂಥಗಳು ಗೃಹ ಸ್ಥಾಶ್ರಮಿಗಳಿಗೆ ಹೆಚ್ಚು ಉಪಯೋಗವಾಗಿರುವಂತೆ, ಉಪಾದೇಯವಾಗಿರುವಂತೆ ಆರಣ್ಯಕಗಳಲ್ಲಿ "ವಾನಪ್ರಸ್ಥಾಶ್ರಮಿಗಳಿಗೆ ಸಂಬಂಧಪಟ್ಟ ವಿಷಯಗಳಿವೆ." ಎಂದು ಹೇಳಬಹುದು. ಉಪನಿಷತ್ತುಗಳಲ್ಲಿ ಸನ್ಯಾಸಾಶ್ರಮಕ್ಕೆ ಮುಮುಕ್ಷು ಗಳಿಗೆ ಯೋಗ್ಯವಾದ, ಉಪಾದೇಯವಾದ ವಿಷಯಗಳು ಮುಖ್ಯವಾಗಿ ಪ್ರತಿಪಾದಿಸಲ್ಪಟ್ಟಿವೆ. ಉಪನಿಷತ್ತುಗಳೆಂದರೆ ಬ್ರಹ್ಮವಿದ್ಯೆಯನ್ನು ಪ್ರತಿಪಾದಿ ಸುವ ಗ್ರಂಥಗಳೆಂದು ಹೇಳಬಹುದು. ಇವುಗಳನ್ನು ಪರಿಶೀಲಿಸುವುದರಿಂದ, ಸತತ ಚಿಂತನೆಯನ್ನು ಮಾಡುವುದರಿಂದ, ಜನನ ಮರಣ ರೂಪವಾದ ಚಕ್ರ ದಲ್ಲಿ ಪರಿವರ್ತನೆಯಾಗುತ್ತಿರುವ ಅಪಾರವಾದ ಈ ಸಂಸಾರ ಸಾಗರವನ್ನು ದಾಟಿ ನಿತ್ಯಾನಂದಸುಖವಾದ ಮೋಕ್ಷವನ್ನು ಪಡೆಯಲು ಮಾನವನು ಅಧಿ ಕಾರಿಯಾಗುತ್ತಾನೆ. ಈ ಉಪನಿಷತ್ತುಗಳು ವೈದಿಕ ವಾಙ್ಮಯದಲ್ಲಿ ಕೊನೆಯ ಭಾಗವಾಗಿರುವುದರಿಂದಲೂ ವೇದವಿಹಿತವಾದ ವಿಷಯಗಳಲ್ಲಿ ಚರಮ ಮನ್ನು

ಪರಮ ಸಿದ್ಧಾಂತವನ್ನು ಬೋಧಿಸುವುದರಿಂದಲೂ ಇವನ್ನು "ವೇದಾಂತ" ವೆಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ. ಈ ಉಪನಿಷತ್ತುಗಳ ಸಾರಸರ್ವಸ್ವವಾದ ಭಗವದ್ಗೀತೆಯು ವೇದಾನಧಿಕಾರಿಗಳಾದ ಸ್ತ್ರೀ, ಶೂದ್ರ, ಸಾಮಾನ್ಯರಿಗೂ ಉಪಯೋಗ ಬೀಳುವ ಉದ್ದೇಶವಾಗಿ ಅರ್ಜುನನನ್ನು ನಿಮಿತ್ತೀಕರಿಸಿ ಪ್ರಕಾಶಕ್ಕೆ ಬಂದಿದೆ.

ವಿಷಯ ವಿವೇಚನೆಯ ದೃಷ್ಟಿಯಿಂದ ವೇದಗಳನ್ನು ಕರ್ಮಕಾಂಡ, ಜ್ಞಾನ ಕಾಂಡಗಳೆಂದು ಮತ್ತೊಂದುತರಹ ವಿಭಾಗಿಸಬಹುದು. ಸಂಹಿತಾ, ಬ್ರಾಹ್ಮಣ ಆರಣ್ಯಕಗಳು ಪ್ರಧಾನವಾಗಿ ಕರ್ಮಗಳ ವಿವೇಚನೆ ಮಾಡುವುದರಿಂದ ಇವುಗಳನ್ನು ಕರ್ಮಕಾಂಡ ಗ್ರಂಥಗಳೆಂದು ಕರೆಯಬಹುದು. ಉಪನಿಷತ್ತು ಗಳು ಪ್ರಧಾನವಾಗಿ ಮೋಕ್ಷವನ್ನೂ ಮತ್ತು ಅದನ್ನು ಪಡೆಯುವುದಕ್ಕೆ ಪ್ರಧಾನಕಾರಣವಾದ ಜ್ಞಾನವನ್ನೂ ಪ್ರತಿಪಾದಿಸುವುದರಿಂದ ಉಪನಿಷತ್ತು ಗಳಿಗೆ ಜ್ಞಾನ ಕಾಂಡವೆಂದು ಕರೆಯಬಹುದು,

## ಸಂಹಿತೆಗಳು

ಮಂತ್ರಗಳ ಸಮುದಾಯಕ್ಕೆ ಸಂಹಿತೆಯೆಂದು ಕರೆಯುತ್ತಾರೆಂದು ಹೇಳಬಹುದು. ಯಾವುದಾದರೊಂದು ದೇವತೆಯ ಸ್ತುತಿ ರೂಪವಾದ ಅರ್ಥದಿಂದ ಕೂಡಿದ ಒಂದು ವೃತ್ತ ಬದ್ಧವಾದ ವಾಕ್ಯವನ್ನು ಮಂತ್ರ ವೆಂದು ಕರೆಯುವರು. "ಅಜ್ಞಾತಾರ್ಥ ಜ್ಞಾಪಕೋ ಮಂತ್ರಃ" ತಿಳಿಯದ ವಿಷಯವನ್ನು ತಿಳಿಸಿಕೊಡುವ ವಾಕ್ಯಗಳು ಮಂತ್ರಗಳೆಂದು ಮೀಮಾಂಸ ಕರು ಹೇಳುವರು. ಎಂದರೆ ಇಂದ್ರಿಯಾದಿಗಳಿಂದ ತಿಳಿಯಲು ಅಸಾಧ್ಯವಾದ ದೇವತಾವಿಶೇಷಗಳ ಸ್ವರೂಪಗಳನ್ನೂ, ಆ ದೇವತೆಗಳನ್ನು ಉಪಾಸನೆ ಮಾಡು ವುದರಿಂದ ಉಂಟಾಗುವ ಅದೃಷ್ಟ — ಪುಣ್ಯಗಳನ್ನೂ ತಿಳಿಸಿಕೊಡುವ ವಾಕ್ಯಕ್ಕೆ ಮಂತ್ರವೆಂದು ತಾಂತ್ರಿಕವಾಗಿ ಕರೆಯುವ ಪದ್ಧತಿಯು ಬಂದಿದೆ. ಅಂತಹ ಮಂತ್ರಗಳ ಸಮುದಾಯಕ್ಕೆ ಸಂಹಿತೆ ಎಂದು ಹೆಸರು. ಆಸಂಹಿ ತೆಗಳನ್ನು ವ್ಯಾಸನು ಋಕ್, ಯಜುಸ್, ಸಾಮ, ಅಥರ್ವಣಗಳೆಂಬ ನಾಲ್ಕು ತರಹ ವಿಭಾಗ ಮಾಡಿದ್ದಾನೆ.

ವ್ಯಾಸನು ವೇದ ವಿಭಾಗ ಮಾಡುವಾಗ ವಿಷಯ ಮತ್ತು ಅವಶ್ಯಕತೆಗಳನ್ನು ಅನುಸರಿಸಿ ವಿಭಾಗ ಮಾಡಿದ್ದಾನೆ. ಯಜ್ಞಗಳಲ್ಲಿ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮರೆಂದು ಪ್ರಧಾನವಾಗಿ ನಾಲ್ಕು ಜನ ಋತ್ವಿಜರು ಬೇಕಾಗುತ್ತಾರೆ. ಮುಖ್ಯವಾಗಿ ಹೋತೃವಿಗೆ ಸಂಬಂಧಪಟ್ಟ ಮಂತ್ರಗಳನ್ನೆಲ್ಲಾ ಋಗ್ವೇದದಲ್ಲಿಯೂ, ಅಧ್ವರ್ಯುವಿಗೆ ಸಂಬಂಧಪಟ್ಟ ಮಂತ್ರಗಳನ್ನು ಯಜುರ್ವೇದದಲ್ಲಿಯೂ, ಉದ್ಗಾತೃವಿಗೆ ಸಂಬಂಧಪಟ್ಟ ಮಂತ್ರಗಳನ್ನು ಸಾಮವೇದದಲ್ಲಿಯೂ ಬ್ರಹ್ಮನಿಗೆ ಸಂಬಂಧಪಟ್ಟ ವಿಷಯಗಳನ್ನು ಪ್ರತಿಪಾದಿಸುವ ಮಂತ್ರಗಳನ್ನು ಅಥರ್ವಣ ವೇದದಲ್ಲಿಯೂ ಸೇರಿಸಿದ್ದಾನೆ.

**ಹೋತೃ:—** ಹೋತೃವೆಂದರೆ "ಕರೆಯುವವನು" ಎಂದು ಸಾಮಾನ್ಯವಾಗಿ ಅರ್ಥವಾಗುತ್ತದೆ. ಯಜ್ಞವಲ್ಲಿ ಹವನಮಾಡುವುದಕ್ಕಿಂತ ಮುಂಚೆ ಆಯಾ ದೇವತೆಗಳಿಗೆ ಸಂಬಂಧಪಟ್ಟ ಮಂತ್ರಗಳಿಂದ ಪ್ರಾರ್ಥನೆಮಾಡಿ ಹವಿಸ್ಸನ್ನು ತೆಗೆದುಕೊಂಡು ಹೋಗುವಂತೆ ದೇವತೆಗಳನ್ನು ಪ್ರಾರ್ಥಿಸಬೇಕಾಗುತ್ತದೆ. ಈ ಕೆಲಸವನ್ನು ಹೋತೃವು ಮಾಡುತ್ತಾನೆ. ಅದಕ್ಕೆ ಅವಶ್ಯಕವಾಗಿ ಬೇಕಾಗುವ ಮಂತ್ರಗಳು ಋಗ್ವೇದದಲ್ಲಿವೆ. ಆದ್ದರಿಂದ ಮೊದಲನೆಯ ವೇದಕ್ಕೆ ಋಗ್ವೇದ, ಅದರ ಸಂಹಿತೆಗೆ ಋಕ್ ಸಂಹಿತೆ ಎಂದು ಹೆಸರು ಬಂದಿದೆ.

**ಅಧ್ವರ್ಯು:—** ಅಧ್ವರ್ಯುವೆಂದರೆ "ಯಜ್ಞ ಸಮಯದಲ್ಲಿ ಮಂತ್ರೋಚ್ಚಾರಣೆ ಮಾಡಿ ಸ್ವಾಹಾಕಾರದೊಂದಿಗೆ ಆಯಾ ದೇವತೆಗಳನ್ನು ಉದ್ದೇಶಿಸಿ ಅಗ್ನಿಕುಂಡದಲ್ಲಿ ಆಹುತಿಯನ್ನು ಹಾಕುವವನು" ಎಂದು ಅರ್ಥವಾಗುತ್ತದೆ. ಇವಕ್ಕೆ ಅವಶ್ಯಕವಾದ ಮಂತ್ರಗಳು ಇರುವ ವೇದಕ್ಕೆ ಯಜುರ್ವೇದವೆಂದೂ, ಇದರ ಸಂಹಿತೆಗೆ ಯಜುಃ ಸಂಹಿತೆಯೆಂದೂ ಕರೆಯುತ್ತಾರೆ.

**ಉದ್ಗಾತೃ:—** ಉದ್ಗಾತೃವೆಂದರೆ "ಉಚ್ಚಸ್ವರದಲ್ಲಿ ಹಾಡುವವನು" ಎಂದು ಅರ್ಥವಾಗುತ್ತದೆ. ಯಜ್ಞಸಮಯದಲ್ಲಿ ಮಂತ್ರಗಳಿಗೆ ಒಂದು ವಿಶಿಷ್ಟ ರೀತಿಯಲ್ಲಿ ಸ್ವರ ಸಂಯೋಜನೆ ಮಾಡಿದಂತೆ ಮೃದುವಾಗಿ ಹಾಡುವುದು

ತಾಂತ್ರಿಕವಾದ ಪದ್ಧತಿಯಾಗಿದೆ. ಇವನ್ನು ಕ್ರಮಬದ್ಧವಾಗಿ ಹಾಡುವವ ನಿಗೆ ಉದ್ಗಾತೃವೆಂದು ಹೆಸರು. ಇದಕ್ಕೆ ಸಂಬಂಧಪಟ್ಟ ಅಥವಾ ಅನುಕೂಲ ವಾದ ಮಂತ್ರಗಳು ಇರುವ ವೇದಕ್ಕೆ ಸಾಮವೇದವೆಂದು ಹೆಸರು.

**ಬ್ರಹ್ಮ:—** ಇಲ್ಲಿಯ ಬಹ್ಮ ಶಬ್ದವು ತಾಂತ್ರಿಕವಾದ ಒಂದು ವಿಶಿಷ್ಟ ಅರ್ಥದಿಂದ ಕೂಡಿದೆ. ಇಲ್ಲಿಯ ಬ್ರಹ್ಮ ಶಬ್ದಕ್ಕೆ "ಯಜ್ಞಾಧ್ಯಕ್ಷ" ಎಂದು ಸಾಮಾನ್ಯವಾಗಿ ಅರ್ಥ ಹೇಳಬಹುದು. ಯಜ್ಞ ಸಮಯದಲ್ಲಿ ಯಾವ ಸ್ಖಾಲಿತ್ಯವೂ, ತೊಂದರೆಯೂ, ಅಡ್ಡಿ ಆತಂಕಗಳೂ ಬರದಂತೆ ಏಕ್ಷಾತಕ್ಷಕ್ಷುವಾಗಿ ನೋಡಿಕೊಂಡು ಬರುವುದು ಬ್ರಹ್ಮನ ಕೆಲಸವಾಗಿದೆ. ಈ ಬ್ರಹ್ಮನಿಗೆ ಎಲ್ಲಾ ವೇದಗಳ ಪರಿಜ್ಞಾನವೂ ಯಜ್ಞ ಕರ್ಮಗಳಲ್ಲಿ ಪರಿನಿಷ್ಠಿತವಾದ ಪರಿಶ್ರಮವೂ ಬೇಕಾಗುತ್ತದೆ. ಇದಕ್ಕೆ ಸಂಬಂಧ ಪಟ್ಟ ಮಂತ್ರಗಳು ಒಂದು ವಿಶಿಷ್ಟ ರೀತಿಯಿಂದ ಇರುವ ವೇದಕ್ಕೆ ಅಥರ್ವಣ ವೇದ ವೆಂತಲೂ, ಅವರ ಸಂಹಿತೆಗೆ ಅಥರ್ವಣ ಸಂಹಿತೆ ಎಂತಲೂ ಹೆಸರು ಬಂದಿದೆ.



# ೨. ಸಂಹಿತೆಗಳು

ಋಗ್ವೇದವು ವೈದಿಕ ವಾಙ್ಮಯದಲ್ಲಿ ಮೊದಲನೆಯದು ಮತ್ತು ಅತ್ಯಂತ ಪ್ರಾಚೀನವಾದುದು. ಇದು ಚತುರ್ಮುಖ ಬ್ರಹ್ಮನ ಪೂರ್ವ ದಿಕ್ಕಿನ ಮುಖದಿಂದ ಪ್ರಕಾಶಕ್ಕೆ ಬಂದಿದೆ. ವೇದ ವಿಭಾಗ ಮಾಡಿದ ವ್ಯಾಸಮುನಿಯು ಇದನ್ನು ಮೊಟ್ಟಮೊದಲು ಪೈಲನೆಂಬ ಮುನಿಗೆ ಉಪ ದೇಶಿಸಿದನು. ಅನಂತರ ಪೈಲ ಋಷಿಯ ಸಂತತಿ ಮತ್ತು ಶಿಷ್ಯಪರಂಪರೆ ಯಾಗಿ ಋಗ್ವೇದವು ಕ್ರಮವಾದ ರೀತಿಯಿಂದ ಪ್ರಚಾರಕ್ಕೆ ಬಂದಿತು. ಹಿಂದೆ ಹೇಳಿದ ನಾಲ್ಕು ಸಂಹಿತೆಗಳಲ್ಲಿ ಋಗ್ವೇದದ ಸಂಹಿತೆಯು ಉಳಿದ ಮೂರು ಸಂಹಿತೆಗಳಿಗಿಂತ ಅತ್ಯಂತ ಬೃಹದಾಕಾರವೂ, ಪ್ರಾಚೀನತಮವೂ ಆಗಿದೆ. ಋಗ್ವೇದದೊಳಗಿನ ಅನೇಕ ಮಂತ್ರಗಳು ಉಳಿದ ಮೂರು ವೇದಗಳಲ್ಲಿಯೂ ಯಥೇಚ್ಛವಾಗಿ ಬರುತ್ತವೆ. ಅದರಲ್ಲಿಯೂ ಸಾಮವೇದ ವಂತೂ ಸಂಪೂರ್ಣವಾಗಿ ಋಗ್ವೇದದ ಮಂತ್ರಮಯವಾಗಿದೆ. ಋಗ್ವೇದ ವು ಕೇವಲ ಒಂದು ಗ್ರಂಥವಾಗಿರದೆ, ಅದೊಂದು ಅನೇಕ ಗ್ರಂಥಗಳ ಸಮುದಾಯದಂತೆ ಇದೆ. ಭಾಷೆ ಮತ್ತು ಅರ್ಥಗಳ ದೃಷ್ಟಿಯಿಂದಲೂ ಸಹ ಋಗ್ವೇದವು ವೈದಿಕ ವಾಙ್ಮಯದಲ್ಲಿಯೇ ಒಂದು ವಿಶಿಷ್ಟವಾದ ಅನುಪಮವಾದ ಸ್ಥಾನವನ್ನು, ಮಹತ್ವವನ್ನು ಪಡೆದಿದೆಯೆಂದು ಇಂದಿನ ವಿಮರ್ಶಕರು ಹೇಳುತ್ತಾರೆ.

## ಋಕ್ಸಂಹಿತೆ

ಋಕ್‌ಸಂಹಿತೆಯಲ್ಲಿ ಮೊದಲಿನಿಂದ ಕೊನೆಯವರೆಗೂ ಸಂಪೂರ್ಣ ವಾಗಿ ವೃತ್ತಬದ್ಧವಾದ ಪದ್ಯಗಳು ಇರುತ್ತವೆ. ಇದರಲ್ಲಿ ಗದ್ಯಭಾಗವು ಸ್ವಲ್ಪವೂ ಇರುವುದಿಲ್ಲ. ಸುಮಾರು ನೂರೈವತ್ತಕ್ಕಿಂತ ಹೆಚ್ಚು ದೇವತೆಗಳ ವಿಷಯವಾದ ಸ್ತೋತ್ರಗಳು ಇದರಲ್ಲಿವೆ. ಒಂದೊಂದು ದೇವತೆಯನ್ನೂ

ವಿವಿಧ ದೃಷ್ಟಿಗಳಿಂದ ವರ್ಣಿಸಿದ್ದಾರೆ, ವಿವಿಧ ಕಾಮನೆಗಳಿಂದ ಪ್ರಾರ್ಥಿಸಿ
ದ್ದಾರೆ. ಅನ್ಯೋನ್ಯ ಸಂಭಾಷಣೆಯ ಚಿತ್ರಗಳು ಎಷ್ಟೋ ಸೂಕ್ತಗಳಲ್ಲಿ
ಚಿತ್ರಿಸಲ್ಪಟ್ಟಿವೆ. ಆತ್ಮವಿಷಯಕವಾದ ವೇದಾಂತಸೂಕ್ತಗಳು ಎಷ್ಟೊ ಇವೆ.
ವೈದಿಕ ವಾಙ್ಮಯದಲ್ಲಿ ವರ್ಣಿತವಾಗಿರುವ ಎಲ್ಲಾ ವಿಷಯಗಳಿಗೂ ಋಕ್
ಸಂಹಿತೆಯು ಮೂಲಸ್ರೋತವಾಗಿದೆಯೆಂದು ಹೇಳಬಹುದು.

ಋಕ್‌ಸಂಹಿತೆಯನ್ನು ಪ್ರಧಾನವಾಗಿ ಎರಡು ರೀತಿಯಿಂದ ವಿಭಾಗ
ಮಾಡಿದ್ದಾರೆ. ೧) ಅಷ್ಟಕ, ಅಧ್ಯಾಯ, ಸೂಕ್ತಗಳೆಂದು ಒಂದು ತರಹ
ವಿಭಾಗಿಸಿದ್ದಾರೆ. ಋಗ್ವೇದ ಸಂಹಿತೆಯೊಳಗಿರುವ ಒಟ್ಟು ಮಂತ್ರಗಳನ್ನು
ಎಂಟು ವಿಭಾಗ ಮಾಡಿ ಅವುಗಳನ್ನು ಅಷ್ಟಕಗಳೆಂದು ಕರೆದಿದ್ದಾರೆ. ಈ ಪ್ರತಿ
ಯೊಂದು ಅಷ್ಟಕಗಳಲ್ಲಿಯೂ ಎಂಟೆಂಟು ಅಧ್ಯಾಯಗಳಿವೆ. ಈ ಅಧ್ಯಾಯ
ಗಳ ಒಳ ವಿಭಾಗಗಳು ಸೂಕ್ತಗಳು. ಈ ಸೂಕ್ತಗಳಲ್ಲಿ ಬಹು ಮಟ್ಟಿಗೆ
ಒಬ್ಬ ಋಷಿಯು ಒಂದೇ ದೇವತೆಯನ್ನುದ್ದೇಶಿಸಿ ಒಮ್ಮೆ ಕಂಡುಹಿಡಿದ
ಮಂತ್ರಗಳು ಇವೆ. ಕೆಲವು ಸೂಕ್ತಗಳಲ್ಲಿ ಎರಡು ಮೂರು ದೇವತೆಗಳ ವಿಷ
ಯವೂ ಮತ್ತೆ ಕೆಲವು ಸೂಕ್ತಗಳಲ್ಲಿ ಸಂಭಾಷಣೆಯ ರೂಪದಲ್ಲಿ ಅಥವಾ
ಮತ್ತಾವ ರೂಪದಲ್ಲಿಯಾದರೂ ಒಂದಕ್ಕಿಂತ ಹೆಚ್ಚು ಋಷಿಗಳು ಕಂಡುಹಿಡಿದ
ಮಂತ್ರಗಳೂ ಇವೆ. ಋಗ್ವೇದ ಸಂಹಿತೆಯ ಎಂಟು ಅಷ್ಟಕಗಳಲ್ಲಿ ೬೪ ಅಧ್ಯಾ
ಯಗಳಿವೆ. ಈ ವಿಭಾಗವನ್ನು ಅಭ್ಯಾಸ ಮಾಡುವುದಕ್ಕೆ ಅನುಕೂಲವಾಗ
ಬೇಕೆಂದು ಮಾಡಿರುವಂತೆ ತೋರುತ್ತದೆ. ೨) ಮಂಡಲ, ಅನುವಾಕ,
ಸೂಕ್ತಗಳೆಂದು ಋಗ್ವೇದಸಂಹಿತೆಯನ್ನು ಮತ್ತೊಂದು ತರಹ ವಿಭಾಗಿಸಿ
ದ್ದಾರೆ. ಋಗ್ವೇದದ ಎಲ್ಲಾ ಮಂತ್ರಗಳನ್ನು ಹತ್ತು ಗುಂಪಾಗಿ ವಿಭಾಗಿಸಿ
ಅವುಗಳನ್ನು ಮಂಡಲವೆಂದು ಕರೆದಿದ್ದಾರೆ. ಈ ಮಂಡಲಗಳ ಒಳ ವಿಭಾಗಕ್ಕೆ
ಅನುವಾಕವೆಂದು ಕರೆಯುತ್ತಾರೆ. ಅನುವಾಕಗಳ ಒಳ ವಿಭಾಗಗಳು ಸೂಕ್ತ
ಗಳು. ಸೂಕ್ತಗಳ ಒಳ ವಿಭಾಗಗಳು ಮಂತ್ರಗಳು. ಈ ಕ್ರಮದ ವಿಭಾಗವು
ಮೊದಲಿನ ವಿಭಾಗ ಕ್ರಮಕ್ಕಿಂತ ಐತಿಹಾಸಿಕ ಮಹತ್ವವನ್ನು ಹೊಂದಿದೆ
ಎಂದು ಹೇಳಬಹುದು. ಋಗ್ವೇದದ ಆರಂಭಕಾಲದಲ್ಲಿದ್ದ ವಿಭಾಗದ
ಕ್ರಮವು ಇದೇ ಇರಬೇಕೆಂದು ವಿಮರ್ಶಕರು ಊಹಿಸುತ್ತಾರೆ. ಒಟ್ಟು

ಋಗ್ವೇದಸಂಹಿತೆಯಲ್ಲಿ ಸುಮಾರು ೧೦೨೮ ಸೂಕ್ತಗಳೂ ೧೧೦೦
ಮಂತ್ರಗಳೂ ಇವೆ.

ಋಗ್ವೇದವನ್ನು ಮಂಡಲ ಕ್ರಮದಲ್ಲಿ ವಿಭಾಗಿಸುವಾಗ ವ್ಯಾಸ
ಒಂದು ವಿಶಿಷ್ಟವಾದ ಕ್ರಮವನ್ನು ಅನುಸರಿಸಿದ್ದಾರೆ. ಋಗ್ವೇದದ ಮಂ
ಗಳನ್ನು ಕಂಡುಹಿಡಿದ ಋಷಿಗಳು ಅನೇಕ ವಂಶದವರಿದ್ದಾರೆ. ಈ
ದೊಂದು ವಂಶದವರು ಕಂಡುಹಿಡಿದ ಮಂತ್ರಗಳನ್ನು ಸಾಮಾನ್ಯವಾ
ಒಂದೊಂದು ಮಂಡಲದಲ್ಲಿ ಬರುವಂತೆ ಸೂಕ್ತ ಮಂತ್ರಗಳನ್ನು ಸಂ
ಜಿಸಿದ್ದಾರೆ. ಅದರಲ್ಲಿಯೂ ಸಹ ವಂಶಾನುಕ್ರಮವಾಗಿ ಒಬ್ಬ ಋಷಿ
ಕಂಡುಹಿಡಿದ ಮಂತ್ರಗಳು ಒಂದೇ ಕಡೆಗೆ ಬರುವಂತೆಯೂ, ಒಂದೊಂ
ದೇವತೆಯ ವಿಷಯವಾಗಿ ಇರುವ ಸೂಕ್ತಗಳು ಒಂದೇ ಕಡೆಗೆ ಇರುವ
ಯೂ ಸೂಕ್ತಗಳನ್ನು ಸೇರಿಸಿದ್ದಾರೆ. ಎರಡನೆಯ ಮಂಡಲದಿಂದ ಏಳನೆ
ಮಂಡಲದವರೆಗೆ ಆರು ಮಂಡಲಗಳನ್ನು ಕಂಡುಹಿಡಿದ ಋಷಿಗಳು ಪ್ರತ್ಯೇ
ವಾಗಿ ಒಂದೊಂದು ಋಷಿಯ ವಂಶದವರಾಗಿದ್ದಾರೆ. ಎರಡರಿಂದ ಏ
ರೆಗಿನ ಆರು ಮಂಡಲಗಳನ್ನು ಕಂಡುಹಿಡಿದ ಋಷಿ ವಂಶವು ಹೀಗಿದೆ:—

(೨) ಗೃತ್ಸಮದ ಋಷಿವಂಶದವರು. (೩) ವಾಮದೇವ (೪) ವಿ
ಮಿತ್ರ (೫) ಅತ್ರಿ (೬) ಭರದ್ವಾಜ (೭) ವಶಿಷ್ಠ. ಹೀಗೆ ಆರು ಮ
ಲಗಳ ಮಂತ್ರ ದ್ರಷ್ಟಾರರು ಈ ಆರು ವಂಶದವರಾಗಿದ್ದಾರೆ. ಎ
ಯ ಮಂಡಲದಲ್ಲಿ ಕಣ್ವ ಮತ್ತು ಅಂಗಿರಸ ಋಷಿಗಳ ಗೋತ್ರದ
ಅಥವಾ ವಂಶದವರು ಕಂಡುಹಿಡಿದ ಮಂತ್ರಗಳಿವೆ. ಒಂಭತ್ತನೆಯ ಮ
ಲದಲ್ಲಿ ಮಾತ್ರ ಋಷಿವಂಶ ಕ್ರಮವನ್ನು ಬಿಟ್ಟು ದೇವತೆಗಳನ್ನು
ದಲ್ಲಿಟ್ಟುಕೊಂಡು ಮಂತ್ರಗಳನ್ನು ಸೇರಿಸಲಾಗಿದೆ. ನವಮ ಮಂಡ
ಸೋಮದೇವತೆಗೆ ಸಂಬಂಧಪಟ್ಟ ಮಂತ್ರಗಳನ್ನು ಸೇರಿಸಿದ್ದಾರೆ. ಸೋ
ದೇವತೆಗೆ ಪವಮಾನನೆಂಬ ಹೆಸರು ಪ್ರಸಿದ್ಧವಿದೆ. ಪವಮಾನನೆಂದರೆ
ಗೊಳಿಸುವವನು ಎಂದು ಅರ್ಥವಾಗುತ್ತದೆ. ನವಮ ಮಂಡಲದ ಮಂ
ಸೋಮದೇವತೆಗೆ ಸಂಬಂಧಪಟ್ಟವುಗಳಾದರೂ ಈ ಮಂಡಲವು ಪವಮಾ
ಪಲವೆಂದು ಪ್ರಸಿದ್ಧವಾಗಿದೆ. ದಶಮ ಮಂಡಲದಲ್ಲಿ ಬೇರೆ ಬೇರೆ ಋ

ಕಂಡುಹಿಡಿದ ಮಂತ್ರಗಳು ಇರುವುದಲ್ಲದೆ ದೇವತಾ ಸ್ತೋತ್ರಗಳ ಜೊತೆಗೆ ಬೇರೆಯ ವಿಧವಾದ ಅನೇಕ ವಿಷಯಗಳು ಸಹಾ ಇವೆ. "ಋಕ್‌ಸಂಹಿತೆಯ ಹತ್ತು ಮಂಡಲಗಳಲ್ಲಿ ಎರಡರಿಂದ ಏಳರ ಪರ್ಯಂತ ಆರು ಮಂಡಲಗಳು ಋಗ್ವೇದದ ಇತರ ಮಂಡಲಗಳಿಗಿಂತ ಪ್ರಾಚೀನತಮವಾಗಿರಬೇಕು. ಹತ್ತನೆಯ ಮಂಡಲವು ಎಲ್ಲಕ್ಕಿಂತಲೂ ಕಡೆಗೆ ಕಂಡುಹಿಡಿಯಲ್ಪಟ್ಟು ಒಂದು, ಎಂಟು, ಒಂಭತ್ತನೆಯ ಮಂಡಲಗಳು ಇವೆರಡರ ಮಧ್ಯಕಾಲದಲ್ಲಿ ಕಂಡುಹಿಡಿಯಲ್ಪಟ್ಟಿರಬೇಕು" ಎಂದು ಇಂದಿನ ವಿಮರ್ಶಕರು ಊಹಿಸುತ್ತಾರೆ.

## ವೇದದ ಶಾಖೆಗಳು.

ಉಪಯೋಗ ಮತ್ತು ವಿಷಯಗಳ ದೃಷ್ಟಿಗಳಿಂದ ವಿಭಕ್ತವಾದ ನಾಲ್ಕು ವೇದಗಳಲ್ಲಿಯೂ ಅನೇಕ ವಿಧವಾದ ಶಾಖೆಗಳು ಇರುತ್ತವೆ. ಶಾಖೆ ಎಂದರೆ ಪಾಠಕ್ರಮ ಅಥವಾ ಸ್ವಲ್ಪ ಬದಲಾವಣೆಗಳಿಂದ ಕೂಡಿದ ಪಾಠಪರಂಪರೆ ಎಂದು ಸಾಮಾನ್ಯವಾಗಿ ಹೇಳಬಹುದು.

ಮನುಷ್ಯನ ಬುದ್ಧಿಶಕ್ತಿ, ಗ್ರಹಣ, ಧಾರಣ ಶಕ್ತಿಗಳು ಕಡಿಮೆಯಾಗುತ್ತಾ ಬಂದಂತೆ ಋಷಿಗಳು ವೇದಾಭ್ಯಾಸದ ಮೊದಲಿನ ಕ್ರಮವನ್ನು ಬದಲಾಯಿಸಿ ಸುಲಭಗೊಳಿಸುತ್ತಾ ಬಂದರು. ಮೂಲ ವೇದವನ್ನು ತಮ್ಮ ಶಿಷ್ಯರಿಗೆ ಕಲಿಸುವಾಗ ಒಬ್ಬ ಋಷಿಯು ಒಂದೊಂದು ದೇವತೆಗಳಿಗೆ ಸಂಬಂಧಪಟ್ಟ ಮಂತ್ರಗಳನ್ನು ಒಂದೊಂದು ಕಡೆಗೆ ಸೇರಿಸಿ ತನ್ನ ಶಿಷ್ಯರಿಗೆ ಕಲಿಸಿದನು. ಇನ್ನೊಬ್ಬ ಋಷಿಯು ತನ್ನ ಶಿಷ್ಯರಿಗೆ ಕಲಿಸಲು ಸುಲಭವಾಗಬೇಕೆಂದು ಒಬ್ಬೊಬ್ಬ ಋಷಿಯು ಕಂಡುಹಿಡಿದ ಮಂತ್ರಗಳನ್ನು ಒಂದೊಂದು ಕಡೆಗೆ ಸೇರಿಸಿ ಕಲಿಸಿದನು. ಮತ್ತೊಬ್ಬನು ವಿಷಯಗಳನ್ನು ಅನುಸರಿಸಿ ಒಂದೊಂದು ವಿಷಯಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಒಂದೊಂದು ಕಡೆಗೆ ಬರುವಂತೆ ಜೋಡಿಸಿ ಅವುಗಳನ್ನು ತನ್ನ ಶಿಷ್ಯರಿಗೆ ಕಲಿಸಿದನು. ಇನ್ನೊಬ್ಬ ಋಷಿಯು ಛಂದಸ್ಸಿನ ಕ್ರಮವನ್ನನುಸರಿಸಿ ಒಂದೊಂದು ಛಂದಸ್ಸಿನ ಮಂತ್ರಗಳು ಒಂದೊಂದು ಕಡೆಗೆ ಬರುವಂತೆ ಸೇರಿಸಿ ಕಲಿಸಿದನು. ಹೀಗೆ ದೇವತೆ, ಋಷಿ, ಛಂದಸ್ಸು ವಿಷಯಗಳನ್ನು ಅನುಸರಿಸಿ ತಮ್ಮ ತಮ್ಮ ಶಿಷ್ಯರಿಗೆ ಕಲಿಯಲು

ಅನುಕೂಲವಾಗುವಂತೆ ಮಾಡಿದ ಮಂತ್ರಗಳ ವಿವಿಧವಾದ ಜೋಡಣೆಗಳೇ ಅನೇಕ ಶಾಖೆಗಳಾದವು. ಹೀಗೆ ಕಲಿಯಲು ಸುಲಭವಾಗುವಂತೆ ನಾಲ್ಕು ವೇದಗಳ ಮಂತ್ರಗಳನ್ನು ವಿವಿಧ ರೀತಿಯಿಂದ ಜೋಡಿಸಿದ ಶಾಖೆಗಳು ಒಟ್ಟು ೧೧೮೦ ಇವೆ ಎಂದು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದೆ. ಇವುಗಳಲ್ಲಿ ಋಗ್ವೇದದ ಶಾಖೆಗಳು ೨೧, ಯಜುರ್ವೇದದ ಶಾಖೆಗಳು ೧೦೯, ಸಾಮವೇದದ ಶಾಖೆಗಳು ೧೦೦೦, ಅಥರ್ವಣ ವೇದದ ಶಾಖೆಗಳು ೫೦ ಎಂದು ಯಾವ ಯಾವ ವೇದಗಳ ಶಾಖೆಗಳು ಎಷ್ಟೆಷ್ಟು ವಿಧವಾಗಿದ್ದವೆಂಬುದನ್ನು ಹೇಳಿದೆ.

ಕೂರ್ಮ ಪುರಾಣದಲ್ಲಿ ವೇದ ಮತ್ತು ಶಾಖೆಗಳ ಬಗ್ಗೆ ವಿವರಿಸುವಾಗ ಒಟ್ಟು ಶಾಖೆಗಳು ೧೧೩೦ ಎಂದೂ ಅವುಗಳಲ್ಲಿ ಋಗ್ವೇದದ ಶಾಖೆಗಳು ೨೧, ಯಜುರ್ವೇದದ ಶಾಖೆಗಳು ೧೦೦, ಸಾಮವೇದದ ಶಾಖೆಗಳು ೧೦೦೦, ಅಥರ್ವಣವೇದದ ಶಾಖೆಗಳು ೯ ಎಂದೂ ಹೇಳಿದೆ.

ಹೀಗೆ ವೇದಗಳ ಶಾಖೆಗಳು ಎಷ್ಟೋ ಇದ್ದರೂ ಅವೆಲ್ಲವೂ ಕೇವಲ ಪಾಠಕ್ರಮದಲ್ಲಿ ಮಂತ್ರಗಳ ಸಂಕಲನೆಗಳ ಉಚ್ಚಾರಣೆಯ ಭೇದವಲ್ಲದೆ ವೇದದ ಕೆಲಕೆಲವು ಭಾಗಗಳೆಂದಾಗಲೀ ಮಂತ್ರ ಸಂಖ್ಯೆ ಅಥವಾ ವಿಷಯಗಳ ದೃಷ್ಟಿಯಿಂದ ನ್ಯೂನಾಧಿಕವಾದುವುಗಳೆಂದಾಗಲಿ ತಿಳಿಯ ಕೂಡದು. ಆದ್ದರಿಂದ ನಾಲ್ಕು ವೇದಗಳಲ್ಲಿಯೂ ಯಾವುದಾದರೊಂದು ಶಾಖೆಯು ಶುದ್ಧವಾಗಿ ಇರುವವರೆಗೂ ವೇದಗಳು ಮೂಲರೂಪದಲ್ಲಿಯೇ—ತಮ್ಮ ನಿಜರೂಪದಲ್ಲಿಯೇ—ಇರುವವೆಂಬುದನ್ನು ಮರೆಯತಕ್ಕದ್ದಲ್ಲ. ಅನೇಕ ಶಾಖೆಗಳು ನಷ್ಟವಾಗಿವೆ ಎಂದರೆ ವೇದಗಳ ಪಾಠಕ್ರಮದ ಪ್ರಭೇದಗಳು ಬಳಕೆಯಿಂದ ತಪ್ಪಿ ಹೋಗಿವೆ ಎಂದು ಹೇಳಿದಂತಾಗುತ್ತದೆಯೇ ಹೊರತು ಯಾವ ವೇದವೇ ಆಗಲಿ, ವೇದದ ಕೆಲವು ಭಾಗಗಳಾಗಲೀ ನಷ್ಟವಾಗಿವೆ ಎಂದು ಹೇಳಿದಂತಾಗುವುದಿಲ್ಲ.

## —ಋಗ್ವೇದದ ಶಾಖೆಗಳು—

ಶಾಖೆ ಎಂದರೆ ಪಾಠಕ್ರಮ ಅಥವಾ ಸ್ವಲ್ಪ ಬದಲಾವಣೆಗಳಿಂದ ಕೂಡಿದ ಪಾಠಪರಂಪರೆ ಎಂದು ಹಿಂದೆ ಹೇಳಿದೆ. ಇಂತಹ ಶಾಖೆಗಳು

ಋಗ್ವೇದದಲ್ಲಿ ೨೧ ಇವೆ ಎಂದು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದೆ.
ಚರಣವ್ಯೂಹವೆಂಬ ಗ್ರಂಥದಲ್ಲಿ (೧) ಶಾಕಲ (೨) ಬಾಷ್ಕಲ (೩) ಆಶ್ವಲಾಯನ
(೪) ಶಾಂಖ್ಯಾಯನ (೫) ಮಾಂಡುಕೇಯ ವೆಂದು ಐದು ಶಾಖೆಗಳು ಋಗ್ವೇ
ದಕ್ಕೆ ಸಂಭಂಧಪಟ್ಟಂತೆ ಇವೆ ಎಂದು ಹೇಳಿದೆ. ಆದರೆ ಕೆಲವು ಪುರಾಣ
ಗಳಲ್ಲಿ ಮಾತ್ರ ೧) ಶಾಕಲ ೨) ಬಾಷ್ಕಲ ೩) ಮಾಂಡುಕೇಯ ಈ ಮೂರು
ಶಾಖೆಗಳ ಹೆಸರುಮಾತ್ರ ಕಾಣಬರುತ್ತದೆ. ಇವುಗಳಲ್ಲಿ ಮಾಂಡುಕೇಯ
ಶಾಖಾಕ್ರಮವು ಆರಂಭ ಕಾಲದಲ್ಲಿದ್ದು ಬಹಳ ಪ್ರಾಚೀನ ಕಾಲದಲ್ಲಿಯೇ
ಬಿಟ್ಟು ಹೋಗಿರಬೇಕೆಂದು ತೋರುತ್ತದೆ. ಶಾಕಲ ಪಾಠಕ್ರಮವು ಸರ್ವೋ
ತ್ಕೃಷ್ಟವಾಗಿದ್ದು ಪರಂಪರಾಗತವಾಗಿ ಇಂದಿನವರೆಗೂ ನಡೆದುಕೊಂಡು
ಬಂದಿದೆ. ಈ ಪಾಠಕ್ರಮವೇ ಸರ್ವಸಮ್ಮತವಾದ, ಸರ್ವವ್ಯಾಪಿಯಾದ
ಪಾಠಕ್ರಮವೆಂದು ಹೇಳಬಹುದು. ಬಾಷ್ಕಲ ಪಾಠಕ್ರಮವು ತ್ರುಟಿತ್ರವಾಗಿ
ಉಳಿದಿದೆ. ಉಳಿದ ಎಲ್ಲಾ ಪಾಠಕ್ರಮಗಳೂ ಯಾವ ಕಾಲದಲ್ಲಿ
ಅಳಿಸಿ ಹೋಗಿವೆ ಎಂಬುದರ ಕುರುಹೂ ಸಹ ಇಲ್ಲದಂತಾಗಿದೆ.

## ಕೃಷ್ಣ ಯಜುರ್ವೇದ

ವೈದಿಕ ವಾಙ್ಮಯದೊಳಗೆ ಪ್ರಧಾನವಾದ ನಾಲ್ಕು ವೇದಗಳ
ಯಜುರ್ವೇದವು ಎರಡನೆಯದು. ಇದು ಚತುರ್ಮುಖ ಬ್ರಹ್ಮನ
ಮುಖದಿಂದ ಉಸಿರಿನ ರೂಪವಾಗಿ ಪ್ರಕಾಶಕ್ಕೆ ಬಂದಿತು. ಕೃಷ್ಣದ್ವೈ
ಯನನು ವೇದಗಳನ್ನು ವಿಭಾಗಿಸಿದನಂತರ ಇದನ್ನು ವೈಶಂಪಾಯ
ಮುನಿಗೆ ಕಲಿಸಿದನು. ಆಮೇಲೆ ಇವನ ಶಿಷ್ಯ ಪ್ರಶಿಷ್ಯಪರಂಪರೆಯಾ
ಪ್ರಪಂಚದಲ್ಲಿ ಒಂದು ಕ್ರಮಬದ್ಧವಾಗಿ ಪ್ರಚಾರವಾಯಿತು. 'ಯಜು
ಎಂದರೆ, 'ಯಜ್ಞಮಾಡಲು ಯೋಗ್ಯವಾದದ್ದು, ಅಥವಾ ಹವನಮಾಡ
ಯೋಗ್ಯವಾದದ್ದು ಎಂದು ಅರ್ಥವಾಗುತ್ತದೆ. ಯಜ್ಞ ಸಮಯ
ಅಧ್ವರ್ಯುವು ಇದರೊಳಗಿನ ಮಂತ್ರಗಳನ್ನು ಉಚ್ಚಾರಣೆಮಾಡಿ ಸ್ವಾ
ಕಾರದೊಂದಿಗೆ ದೇವತೆಗಳಿಗೆ ಆಹುತಿಗಳನ್ನು ಕೊಡುತ್ತಾನೆ. ಅದ್ದ
ಇತರ ವೇದಗಳಿಗಿಂತ ಯಜುರ್ವೇದದ ಸಂಬಂಧವು ಯಜ್ಞಕ್ರಿಯೆಯಲ್ಲಿ

ಕ್ಷವಾದ ಸಾಕ್ಷಾತ್ಸಂಬಂಧವು ಹೆಚ್ಚಾಗಿರುವುದು. ಆದಕ್ಕಾಗಿಯೇ ಈ ವೇದಕ್ಕೆ ಯಜುರ್ವೇದವೆಂಬ ಹೆಸರು ಸಾರ್ಥಕವಾಗಿ ಬಂದಿದೆಯೆಂದು ಹೇಳಬಹುದು. ಯಜುರ್ವೇದ ಸಂಹಿತೆಯಲ್ಲಿ ಗದ್ಯ ಪದ್ಯಗಳು ಸಮ್ಮಿಶ್ರವಾಗಿದ್ದರೂ, ಪದ್ಯಭಾಗಕ್ಕಿಂತ ಗದ್ಯಭಾಗವು ಹೆಚ್ಚಾಗಿದೆ.

ಯಜುರ್ವೇದದಲ್ಲಿ "ಶುಕ್ಲ ಯಜುರ್ವೇದ," "ಕೃಷ್ಣಯಜುರ್ವೇದ" ಎಂದು ಎರಡು ಭೇದಗಳಿವೆ. ಈ ಎರಡು ಭೇದಗಳಾಗುವುದಕ್ಕೆ ಕಾರಣತಿಳಿಯಲು ಪುರಾಣದೊಳಗಿನ ಒಂದುಕಥೆಯು ಉಲ್ಲೇಖನಾರ್ಹವಾಗಿದೆ. ವೇದವ್ಯಾಸ ಮುನಿಯು ವೇದಗಳನ್ನು ವಿಭಾಗಮಾಡಿದನಂತರ ಯಜುರ್ವೇದವನ್ನು ಮೊದಲು ತನ್ನ ಶಿಷ್ಯನಾದ ವೈಶಂಪಾಯನನಿಗೆ ಉಪದೇಶ ಮಾಡಿದನು. ವೈಶಂಪಾಯನನು ತಾನು ಕಲಿತ ವೇದವನ್ನು ಮೊದಲು ಶಿಷ್ಯನಾದ ಯಾಜ್ಞವಲ್ಕ್ಯನಿಗೆ ಕಲಿಸಿದನು. ಯಾಜ್ಞವಲ್ಕ್ಯನು ಗುರುವಾದ ವೈಶಂಪಾಯನನನ್ನೂ ತನ್ನ ಸಹಪಾಠಿಗಳನ್ನೂ ನಿಂದಿಸಿ, ಅಥವಾ ಅವಮಾನಪಡಿಸಿದ್ದರಿಂದ ತನ್ನಿಂದ ಕಲಿತ ವಿದ್ಯೆಯನ್ನು ತಿರುಗಿ ಕೊಡುವಂತೆ ಯಾಜ್ಞವಲ್ಕ್ಯನಿಗೆ ಹೇಳಿದನು. ಯಾಜ್ಞವಲ್ಕ್ಯನು ವೈಶಂಪಾಯನನಿಂದ ಕಲಿತ ವೇದವನ್ನು ವಮನಮಾಡಿ ಹೊರಟುಹೋದನು. ಆಗ ಯಜುರ್ವೇದದ ಶಾಖಾಧಿದೇವತೆಗಳು ತಿತ್ತಿರಿ ಪಕ್ಷಿಗಳ ರೂಪದಿಂದ ಬಂದು ಅದೆಲ್ಲವನ್ನೂ ಸ್ವೀಕರಿಸಿದರು. ಆಗ ವೈಶಂಪಾಯನನು ಅಂಗಿರಸಮುನಿಯ ವಂಶದವನಾದ ತಿತ್ತಿರಿ ಎಂಬಋಷಿಗೆ ಪುನಃ ಯಜುರ್ವೇದವನ್ನು ಕಲಿಸಿದನು. ಅವನಿಂದಶಿಷ್ಯ ಪ್ರಶಿಷ್ಯಾನುಕ್ರಮವಾಗಿ ಈ ಕೃಷ್ಣ ಯಜುರ್ವೇದವು ಪ್ರಸಾರಗೊಂಡಿತು. ಹೀಗೆ ಪ್ರಚಾರಕ್ಕೆ ಬಂದ ವೇದಕ್ಕೆ "ತೈತ್ತಿರೀಯ ಅಥವಾ ಕೃಷ್ಣಯಜುರ್ವೇದ" ಎಂದು ಹೆಸರು. ಇದು ಗದ್ಯ ಪದ್ಯ ಮಿಶ್ರಿತವಾಗಿರುವುದರಿಂದ ಇದಕ್ಕೆ "ಕೃಷ್ಣಯಜುರ್ವೇದ ಎಂದು ಹೆಸರು ಬಂದಿರಬೇಕು" ಎಂದು ಇಂದಿನ ಅನೇಕ ವಿಮರ್ಶಕರ ಅಭಿಪ್ರಾಯವಿದೆ.

## ಕೃಷ್ಣಯಜುಃಸಂಹಿತೆ.

ಕೃಷ್ಣಯಜುರ್ವೇದದ ಸಂಹಿತೆಗಳಲ್ಲಿ ತೈತ್ತಿರೀಯ ಸಂಹಿತೆಯು ಪ್ರಧಾನವಾದದ್ದು. ಇದರಲ್ಲಿ ಏಳು ಖಂಡಗಳಿವೆ. ಈ ಖಂಡಗಳನ್ನು ಕಾಂಡ

ಅಥವಾ ಅಷ್ಟಕವೆಂದು ಕರೆಯುತ್ತಾರೆ. ಈ ಪ್ರತಿಯೊಂದು ಕಾಂಡಗಳಲ್ಲಿಯೂ ಅನೇಕ ಒಳ ವಿಭಾಗಗಳಿವೆ. ಈ ಒಳ ವಿಭಾಗಗಳಿಗೆ ಅಧ್ಯಾಯಗಳೆಂದು ಕರೆಯುತ್ತಾರೆ. ಈ ಅಧ್ಯಾಯಗಳಿಗೆ ಪ್ರಪಾಠಕ, ಪ್ರಶ್ನ, ಪನ್ನ ಎಂದು ಮತ್ತೆ ಕೆಲವು ಹೆಸರುಗಳಿಂದ ಕರೆಯುವ ಪದ್ಧತಿಯಿದೆ. ಈ ಅಧ್ಯಾಯಗಳ ಒಳ ವಿಭಾಗಗಳನ್ನು "ಅನುವಾಕಗಳೆಂದು" ಕರೆಯುತ್ತಾರೆ. ಅನುವಾಕದ ಒಳ ವಿಭಾಗಗಳಿಗೆ "ಹನಸು" ಗಳೆಂದು ಕರೆಯುತ್ತಾರೆ. ಹನಸುಗಳನ್ನು ಸಾಮಾನ್ಯವಾಗಿ ಐವತ್ತು ಪದ ಅಥವಾ ಶಬ್ದಗಳಿಗೆ ಒಂದೊಂದರಂತೆ ವಿಭಾಜಿಸಿರುವರು. ಈ ಯಜುಸ್ಸಂಹಿತೆಯಲ್ಲಿ ದೀರ್ಘವಾದ ಗದ್ಯಗಳಿರುವುದರಿಂದ ಅಭ್ಯಾಸಮಾಡಲು ಅನುಕೂಲವಾಗುವ ಉದ್ದೇಶದಿಂದ ಒಂದು ನಿಯಮವನ್ನು ಅನುಸರಿಸಿ ಹನಸಿನ ವಿಭಾಗ ಕ್ರಮವನ್ನು ಏರ್ಪಡಿಸಿರುವಂತೆ ತೋರುತ್ತದೆ. ಈ ರೀತಿಯ ಪದನಿಯಮವನ್ನು ಅನುಸರಿಸಿದ ಹನಸಿನ ಅಥವಾ ವರ್ಗದ ವಿಭಾಗಪದ್ಧತಿಯು ಬೇರೆ ಯಾವ ವೇದದಲ್ಲಿಯೂ ಇರುವುದಿಲ್ಲ. ಸಾಮಾನ್ಯವಾಗಿ ಹತ್ತು ವಾಕ್ಯಗಳಿಗೆ ಒಂದು ವರ್ಗ ಅಥವಾ ಹನಸಿನಂತೆ ವಿಭಾಗಿಸಿ ಅಭ್ಯಾಸ ಮಾಡುವ ಪದ್ಧತಿಯು ಉಳಿದ ಎಲ್ಲಾ ವೇದಗಳಲ್ಲಿ ಇರುವುದು. ಒಟ್ಟು ಯಜುರ್ವೇದದಲ್ಲಿ ೮೨ ಅಧ್ಯಾಯ ಅಥವಾ ಪ್ರಶ್ನಗಳಿವೆ. ಈ ತೈತ್ತಿರೀಯ ಶಾಖೆಗೆ ಆಪಸ್ತಂಭ, ಹಿರಣ್ಯಕೇಶೀಯಗಳೆಂದು ಎರಡು ಪ್ರಧಾನವಾದ ಉಪಶಾಖೆಗಳಿವೆ. ಈ ಎರಡು ಶಾಖಾನುಯಾಯಿಗಳೇ ಇಂದು ಭಾರತದ ಕೃಷ್ಣಯಜುರ್ವೇದದ ಅನುಯಾಯಿಗಳಲ್ಲಿ ಬಹುಸಂಖ್ಯೆಯವರಿರುವರು.

## ಕೃಷ್ಣಯಜುಃ ಶಾಖೆಗಳು

ಯಜುರ್ವೇದದ ಶಾಖೆಗಳು ೧೦೯ ಇವೆಯೆಂದು ಮುಕ್ತಿಕೋಪನಿಷತ್ತಿನಲ್ಲಿಯೂ ೧೦೦ ಶಾಖೆಗಳಿವೆ ಎಂದು ಕೂರ್ಮಪುರಾಣದಲ್ಲಿಯೂ ಹೇಳಿದೆ. ಆದರೆ ಇವುಗಳಲ್ಲಿ ಕೃಷ್ಣಯಜುರ್ವೇದದ ಶಾಖೆಗಳೆಷ್ಟು, ಶುಕ್ಲಯಜುರ್ವೇದದ ಶಾಖೆಗಳೆಷ್ಟು ಎಂದು ಸ್ಪಷ್ಟಪಡಿಸಿರುವುದಿಲ್ಲ. ಆದರೂ ಕೃಷ್ಣಯಜುರ್ವೇದದ ಶಾಖೆಗಳು ಅನೇಕವಾಗಿದ್ದುವು ಎಂಬುದು ನಿರ್ವಿವಾದ

ವಾದ ಸಂಗತಿ. ಈಗ ದೊರೆತಿರುವುದರ ದೃಷ್ಟಿಯಿಂದ ಹೇಳುವುದಾದರೂ ಶಾಖೆ ಉಪಶಾಖೆಗಳು ಸೇರಿ ಆರೇಳು ಶಾಖೆಗಳಾಗಿವೆ.

**ಯಜುರ್ವೇದದ ಪ್ರಧಾನ ಶಾಖೆಗಳು**— ೧) ಕಠ ೨) ಕಾಪಿಷ್ಠ ೩) ಮೈತ್ರಾಯಣೀಯ ೪) ತೈತ್ತಿರೀಯಗಳೆಂದು ಪ್ರಧಾನವಾದ ನಾಲ್ಕು ಶಾಖೆಗಳ ಸಂಹಿತೆಗಳಿದ್ದುವೆಂದು ತಿಳಿದು ಬರುತ್ತದೆ.

೧) ಕಠಶಾಖೆಯು ಯಜುರ್ವೇದದ ಅತ್ಯಂತ ಪ್ರಾಚೀನವಾದ ಶಾಖೆ ಇರಬೇಕೆಂದು ಆಧುನಿಕರು ಊಹಿಸಿದ್ದಾರೆ. ಕಠಶಾಖಾನುಯಾಯಿಗಳು ಇಂದಿಗೂ ಕಾಶ್ಮೀರ ಪ್ರಾಂತಗಳಲ್ಲಿ ಇರುವರು.

೨) ಕಾಪಿಷ್ಠ:— ಇದಕ್ಕೆ ಕಠಕಾಪಿಷ್ಠಲವೆಂದು ಮತ್ತೊಂದು ಹೆಸರಿದೆ. ಇದು ಕಠಶಾಖೆಯ ಉಪಶಾಖೆಯಾಗಿರಬೇಕೆಂದು ಕೆಲವರು ಉಹಿಸಿದ್ದಾರೆ. ಇದರ ಅನುಯಾಯಿಗಳು ಬಹಳ ಪ್ರಾಚೀನ ಕಾಲದಲ್ಲಿಯೇ ಕಣ್ಮರೆಯಾಗಿರುವರು. ಕಣ್ಮರೆಯಾದ ಕಾಪಿಷ್ಠಲಶಾಖಾನುಯಾಯಿಗಳನ್ನು "ಕಾಲಾಪ"ರೆಂದು ನಮ್ಮ ಪ್ರಾಚೀನರು ಕರೆಯುತ್ತಿದ್ದರು.

೩) **ಮೈತ್ರಾಯಣೀಯ**:— ಇದರ ಅನುಯಾಯಿಗಳು ಘೂರ್ಜರ (ಅಹಮದಾಬಾದ್) ಪ್ರಾಂತದಲ್ಲಿಯೂ ಮತ್ತೆ ಕೆಲವು ಪ್ರಾಂತಗಳಲ್ಲಿಯೂ ಇಂದೂ ಸಹ ಇರುವರೆಂದು ತಿಳಿದು ಬಂದಿದೆ. ಇದರಲ್ಲಿ ನಾಲ್ಕು ಕಾಂಡಗಳಿದ್ದು ಒಟ್ಟು ೫೪ ಪ್ರಪಾಠಕಗಳಿವೆ. ಕಠ ಮತ್ತು ಮೈತ್ರಾಯಣೀಯ ಶಾಖೆಗಳೆರಡು ಮುಂದಿನ ಶಾಖೆಯೊಂದಿಗೆ ಬಹುಮಟ್ಟಿಗೆ ಬೆರೆತು ಹೋಗಿವೆಯಾದರೂ ಅಲ್ಲಲ್ಲಿಯೇ ಕೆಲವು ಪಾಠ ಭೇದಗಳು ಮಾತ್ರ ಉಳಿದುಕೊಂಡಿವೆ.

೪) ತೈತ್ತಿರೀಯ:— ತೈತ್ತಿರೀಯ ಶಾಖೆಯೇ ಈಗ ಭಾರತದಲ್ಲಿ ಬಹುಮಟ್ಟಿಗೆ ವ್ಯಾಪಿಸಿಕೊಂಡಿರುವ ಕೃಷ್ಣಯಜುರ್ವೇದದ ಶಾಖೆ. ಅದರಲ್ಲಿಯೂ ದಕ್ಷಿಣ ಭಾರತದ ಕೃಷ್ಣಯಜುರ್ವೇದದವರು ಬಹು ಸಂಖ್ಯೆಯಲ್ಲಿ ಇದರ ಅನುಯಾಯಿಗಳೇ ಇರುವರು. ಇದರಲ್ಲಿಒಟ್ಟು ೭ ಕಾಂಡಗಳಿದ್ದು೪೪ ಪ್ರಪಾಠಕಗಳಿವೆ.

೫) **ಆಪಸ್ತಂಭ**:— ಇದು ತೈತ್ತಿರೀಯ ಶಾಖೆಯ ಒಂದು ಉಪಶಾಖೆಯಾಗಿದೆ. ಇದರ ಅನುಯಾಯಿಗಳೂ ಸಹ ಇಂದು ಗೋದಾ

ವರೀ ತೀರದಲ್ಲಿಯೂ, ಕೆಲವರು ದಕ್ಷಿಣ ಭಾರತದ ಇತರ ಪ್ರಾಂತಗಳಲ್ಲಿಯೂ ಇರುವುದನ್ನು ಕಾಣಬಹುದು.

೬) **ಹಿರಣ್ಯಕೇಶೀಯಃ** — ಇದೂ ಸಹ ತೈತ್ತಿರೀಯ ಶಾಖೆಯ ಮತ್ತೊಂದು ಉಪಶಾಖೆಯಾಗಿದೆ. ಇದರ ಅನುಯಾಯಿಗಳೂ ಸಹ ಇಂದು ಗೋದಾವರೀ ತೀರಗಳಿಂದ ಸ್ವಲ್ಪ ಹೊರಪ್ರಾಂತಗಳಲ್ಲಿ ವಾಸ ಮಾಡಿಕೊಂಡಿರುವರೆಂದು ತಿಳಿದು ಬಂದಿದೆ.

## ಮತ್ತೊಂದು ರೀತಿಯ ವಿಭಾಗ

ಕೃಷ್ಣಯಜುರ್ವೇದದ ವಿಭಾಗ ಕ್ರಮವು ಪ್ರಾಚೀನ ಕಾಲದಲ್ಲಿ ವಿಷಯಗಳನ್ನನುಸರಿಸಿ ಬೇರೊಂದು ರೀತಿಯಿಂದ ಇದ್ದಿತೆಂದು ಕೃಷ್ಣಯಜುಃ ಶಾಖೆಗೆ ಸಂಬಂಧಪಟ್ಟ **ಗೃಹ್ಯಸೂತ್ರ**ದಿಂದ ತಿಳಿದುಬರುತ್ತದೆ. ಕೃಷ್ಣಯಜುರ್ವೇದವನ್ನು 1)ಪ್ರಾಜಾಪತ್ಯ, 2)ಸೌಮ್ಯ, 3) ಆಗ್ನೇಯ, 4) ವೈಶ್ವದೇವ 5) ಸ್ವಾಯಂಭುವ ಕಾಂಡಗಳೆಂದು ಪ್ರಧಾನವಾಗಿ ಐದು ವಿಭಾಗ ಮಾಡಿದ್ದಾರೆ. ಈ ಪ್ರತಿಯೊಂದು ಕಾಂಡವನ್ನೂ ವಿಷಯಾನುಕ್ರಮವಾಗಿ ಅನೇಕ ಒಳವಿಭಾಗಗಳಾಗಿ ವಿಭಾಗಿಸಿದ್ದಾರೆ.

೧. **ಪ್ರಾಜಾಪತ್ಯ ಕಾಂಡ:**— 1) ಪೌರೋಡಾಶಿಕ, 2) ಯಜಮಾನಃ 3) ಹೋತಾರಃ 4) ಹೋತ್ರಂ (ದಾರ್ಶಿಕ ಹೋತ್ರಂ,) (5-8) ಇವುಗಳ ನಾಲ್ಕು ಬ್ರಾಹ್ಮಣಗಳು (೯) ಪಿತೃಮೇಧವೆಂದು ಮೊದಲನೆ ಪ್ರಾಜಾಪತ್ಯ ಕಾಂಡದಲ್ಲಿ (ಪ್ರಜಾಪತಿ ದೇವತೆಗೆ ಸಂಬಂಧಪಟ್ಟ ಕಾಂಡದಲ್ಲಿ) ಒಂಭತ್ತು ವಿಭಾಗಗಳು ಇದ್ದುವೆಂದು ತಿಳಿದು ಬರುತ್ತದೆ.

೨. **ಸೌಮ್ಯ:**—೧) ಅಧ್ವರ್ಯಂ (ಅಧ್ವರ್ಯುವಿಗೆ ಸಂಬಂಧ ಪಟ್ಟದ್ದು.) ೨) ಗ್ರಹಾಃ ( ಸೂರ್ಯಾದಿ ನವಗ್ರಹಗಳಿಗೆ ಸಂಬಂಧಪಟ್ಟದ್ದು) ೩) ದಕ್ಷಿಣಾನಿ (ಯಜ್ಞ ದಕ್ಷಿಣೆಯ ವಿಷಯಕ್ಕೆ ಸಂಬಂಧಪಟ್ಟದ್ದು) ೪) ಇವುಗಳ ಬ್ರಾಹ್ಮಣಗಳು, [೫] ವಾಜಪೇಯ [ವಾಜಪೇಯವೆಂಬ ಯಜ್ಞಕ್ಕೆ ಸಂಬಂಧಪಟ್ಟದ್ದು] (೬) ವಾಜಪೇಯ ಬ್ರಾಹ್ಮಣ, [೭] ಸವಾಃ [ಯಜ್ಞಗಳು] [೮] ಶುಕ್ರಿಯಾಣಿ[ಪ್ರಾವರ್ಗ್ಯಾಣಿ]. [೯] ಶುಕ್ರಿಯ ಬ್ರಾಹ್ಮಣಗಳೆಂದು ಎರಡನೆಯದಾದ ಸೌಮ್ಯ ಕಾಂಡದಲ್ಲಿಯೂ ಒಂಭತ್ತು ಒಳವಿಭಾಗಗಳಿವೆ.

೩. **ಆಗ್ನೇಯ ಕಾಂಡ:**—೧) ಆಗ್ನ್ಯಾಧೇಯ [ಅಗ್ನಿಯನ್ನು ಇಡುವುದು.] [೨] ಪುನರಾಧೇಯ [ಪುನಃ ಅಗ್ನಿಯನ್ನು ಇಡುವುದು] [೩] ಅಗ್ನ್ಯುಪಸ್ಥಾನ [ಅಗ್ನಿಯನ್ನು ಎದುರುಗೊಂಡು ಪ್ರಾರ್ಥಿಸುವುದು.] [೪] ಅಗ್ನಿ [ಅಗ್ನಿಚಯನವೆಂಬ ಯಜ್ಞಕ್ಕೆ ಸಂಬಂಧಪಟ್ಟದ್ದು] [೫] ಆಗ್ನ್ಯಾಧೇಯ, ಪುನರಾಧೇಯ, ಅಗ್ನ್ಯುಪಸ್ಥಾನಗಳ ಬ್ರಾಹ್ಮಣಗಳು, [೬] ಅಗ್ನಿಚಯನ ಬ್ರಾಹ್ಮಣ, [೭] ಅಗ್ನಿ ಹೋತ್ರ ಬ್ರಾಹ್ಮಣಗಳೆಂದು ಮೂರನೆಯ ಆಗ್ನೇಯ ಕಾಂಡದಲ್ಲಿ ಒಳವಿಭಾಗಗಳನ್ನು ಏಳು ವಿಧವಾಗಿ ಮಾಡಿರುವರು.

೪. **ವಿಶ್ವೇದೇವಕಾಂಡಃ**— ಇದರಲ್ಲಿ ಹದಿನಾರು ಪ್ರಕರಣ ಅಥವಾ ವಿಭಾಗಗಳಿವೆ. ೧) ರಾಜಸೂಯ (ಸ್ವರಾಜ್ಯ ಕಾಮನೆಯಿಂದ ಮಾಡಬೇಕಾದ ಯಜ್ಞಕ್ಕೆ ಸಂಬಂಧಪಟ್ಟದ್ದು) (೨) ರಾಜಸೂಯಬ್ರಾಹ್ಮಣ, (೩)ಕಾಮೇಷ್ಟಯಃ (ಫಲಾಪೇಕ್ಷೆಯಿಂದ ಮಾಡುವ ಕೆಲವು ಹವನಗಳಿಗೆ ಸಂಬಂಧಿಸಿದ್ದು) ೪) ಪಶುಂಧಃ (ಯಜ್ಞ ಸಮಯದಲ್ಲಿ ಪಶುವಿಶಸನ ಮಾಡುವುದಕ್ಕೆ ಸಂಬಂಧಪಟ್ಟದ್ದು) (೫) ಅಪಾನುವಾಕ್ಯಃ (೬) ಯಾಜ್ಯಾಃ (ಹೋಮಕ್ಕೆ ಯೋಗ್ಯವಾದುವು) (೭) ಅಶ್ವಮೇಧ (ಅಶ್ವಮೇಧ ಯಜ್ಞಕ್ಕೆ ಸಂಬಂಧ ಪಟ್ಟದ್ದು] (೮) ಇವುಗಳ ಬ್ರಾಹ್ಮಣಗಳು, (೯) ಸಾತ್ರಾಯಣ, (೧೦) ಉಪಸೋಮಃ (೧೧)ಸೂಕ್ತಾನಿ (ಕೆಲವು ಸೂಕ್ತಗಳು) (೧೨) ನಕ್ಷತ್ರೇಷ್ಟಯಃ (ನಕ್ಷತ್ರಗಳನ್ನು ಉದ್ದೇಶಿಸಿ ಮಾಡುವ ಹೋಮಕ್ಕೆ ಸಂಬಂಧಪಟ್ಟವು)
(೧೩) ಸತ್ರಾಮರ್ಣಿಃ, (೧೪) ಅಚ್ಛಿದ್ರಾಣಿ, (೧೫) ಪುರುಹೋತ್ರಃ (೧೬) ಪುರುಷಮೇಧ ಎಂದು ಹದಿನಾರು ಭಾಗಗಳನ್ನು ವಿಷಯಾನುಕ್ರಮದಂತೆ ಮಾಡಿದ್ದಾರೆ.

(೫) **ಸ್ವಾಯಂಭುವಕಾಂಡ:**-- ಬ್ರಹ್ಮಾಮ್ನಾಯ ಅಥವಾ ಸ್ವಾಧ್ಯಾಯ ಬ್ರಾಹ್ಮಣವೆಂದು ಇದನ್ನು ಕರೆಯುತ್ತಾರೆ. ಇದು ಒಂದೇ ಪ್ರಕರಣವಿರುವುದು. ಹೀಗೆ ಒಟ್ಟು ಯಜುರ್ವೇದವನ್ನು ಐದು ಕಾಂಡಗಳಲ್ಲಿ ೪೨ ವಿಭಾಗಗಳಾಗಿ ವಿಂಗಡಿಸಿದ್ದಾರೆ.

ಆದರೆ ಈಗಿರುವ ಪಾಠ ಕ್ರಮದಲ್ಲಿ ಸಂಹಿತೆಯೊಂದರಲ್ಲಿಯೇ ಏಳು ಕಾಂಡಗಳೂ ೪೪ ಪ್ರಶ್ನಗಳೂ ಇವೆ. ಮೇಲಿನ ಪಾಠಕ್ರಮವು ಬಿಟ್ಟುಹೋಗಿ

ಈಗಿನ ಪಾಠಕ್ರಮವು ಹೇಗೆ ಬಂದಿತೆಂದು ತಿಳಿಯುವಂತಿಲ್ಲ. ಯಜುರ್ವೇದದ ಸಂಹಿತೆಯೊಂದರಲ್ಲಿಯೇ ಒಟ್ಟು ಅಧ್ಯಾಯಗಳು ಈಗಿನ ಪಾಠಕ್ರಮದಂತೆ ೪೪ ಇದ್ದು ೬೫೦ ಅನುವಾಕ್ಯಗಳೂ, ೧,೧೦,೨೯೬ ಪದಗಳೂ ಇರುತ್ತವೆ.

## ಶುಕ್ಲಯಜುರ್ವೇದ

ಯಾಜ್ಞವಲ್ಕ್ಯ ಋಷಿಯು ವೈಶಂಪಾಯನನಿಂದ ವೇದಲು ವೇದಾಭ್ಯಾಸ ಮಾಡಿದನು. ಅನಂತರ ಯಾಜ್ಞವಲ್ಕ್ಯನು ತನ್ನ ಗುರುವನ್ನೂ ತನ್ನ ಸಹಪಾಠಿಗಳನ್ನೂ ಅವಹೇಳನಮಾಡಿ ಗುರುವಿನ ಆಗ್ರಹಕ್ಕೆ ಪಾತ್ರನಾದನು. ಆದ್ದರಿಂದ ಗುರುವಿನ ಅಪ್ಪಣೆಯಂತೆ ತಾನು ಕಲಿತ ವೇದವನ್ನು ಕಕ್ಕಿ ಗುರುಕುಲಾಶ್ರಮದಿಂದ ಹೊರಬಿದ್ದು ಬಂದನು. ಅಲ್ಲಿಂದ ಬಂದ ಯಾಜ್ಞವಲ್ಕ್ಯನು ಜ್ಞಾನನಿಧಿಯಾದ ಸೂರ್ಯನನ್ನು ಕುರಿತು ತಪಸ್ಸು ಮಾಡಿದನು. ತಪಸ್ಸಿಗೆ ಮೆಚ್ಚಿದ ಸೂರ್ಯನು ವಾಜಿ (ಕುದುರೆ)ಯ ರೂಪದಿಂದ ಬಂದು ಯಾಜ್ಞವಲ್ಕ್ಯನಿಗೆ ವೇದವನ್ನು ಉಪದೇಶಿಸಿದನು. ಹೀಗೆ ಕುದುರೆಯ ರೂಪದಿಂದ ಬಂದ ಸೂರ್ಯನಿಂದ ಯಾಜ್ಞವಲ್ಕ್ಯನು ಉಪದೇಶ ಹೊಂದಿದ ವೇದಕ್ಕೆ 'ವಾಜಸನೇಯಶಾಖೆ' ಅಥವಾ 'ಯಾಜ್ಞವಲ್ಕ್ಯಶಾಖೆ' ಎಂದು ಹೆಸರಾಯಿತು. ಇದೇ ಶುಕ್ಲ ಯಜುರ್ವೇದ.

## ಶುಕ್ಲಯಜುಃಸಂಹಿತೆ

ಶುಕ್ಲಯಜುರ್ವೇದದ ಸಂಹಿತೆಯು ಕೃಷ್ಣಯಜುರ್ವೇದದ ಸಂಹಿತೆಯಂತೆ ಗದ್ಯ ಪದ್ಯ ಮಿಶ್ರವಾಗಿರದೆ, ಕೇವಲ ಮಂತ್ರಮಯವಾಗಿದೆ. ಗದ್ಯ ಭಾಗವನ್ನೆಲ್ಲಾ ಸಾಮಾನ್ಯವಾಗಿ ಬ್ರಾಹ್ಮಣದಲ್ಲಿ ಸೇರಿಸಲಾಗಿದೆ. ಗದ್ಯಮಿಶ್ರನಾಗಿರದೆ ಶುದ್ಧ ಮಂತ್ರಮಯವಾಗಿರುವುದರಿಂದಲೇ ಇದಕ್ಕೆಶುಕ್ಲ (ಶುದ್ಧ) ಯಜುರ್ವೇದವೆಂಬ ಹೆಸರು ಬಂದಿರಬೇಕೆಂದು ಇಂದಿನವರು ಊಹಿಸುತ್ತಾರೆ. ಇದರಲ್ಲಿ ೪೦ ಅಧ್ಯಾಯಗಳಿವೆ. ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟಂತೆ ಕಾಣ್ವ, ಮಾಧ್ಯಂದಿನಗಳೆಂದು ಎರಡು ಸಂಪ್ರದಾಯದ

ಸಂಹಿತೆಗಳು ದೊರೆಯುತ್ತವೆ. ಇವೆರಡು ಶಾಖೆಗಳ ಸಂಹಿತೆಗಳು ಭಾರತನಲ್ಲಿ ಇಂದಿಗೂ ವ್ಯವಹಾರಿಕವಾಗಿ ಬಳಕೆಯಲ್ಲಿವೆ. ಇವೆರಡು ಶಾಖೆಗಳ ಸಂಹಿತೆಗಳಲ್ಲಿ ವಿಶೇಷ ಭೇದಗಳು ಇಲ್ಲದಿದ್ದರೂ, ಪಾಠಕ್ರಮದಲ್ಲಿ ಮಾತ್ರ ಸ್ವಲ್ಪ ಭೇದವು ಇದ್ದೇ ಇದೆ. ಆದ್ದರಿಂದ ಇವೆರಡು ಶಾಖೆಗಳು ಪ್ರತ್ಯೇಕವಾಗಿ ಇಂದಿಗೂ ವ್ಯವಹಾರದಲ್ಲಿ ಉಳಿದುಕೊಂಡಿವೆ. ಈ ಶುಕ್ಲಯಜುರ್ವೇದದ ಮಂತ್ರಗಳೂಸಹ ವಿಶೇಷವಾಗಿ ಯಜ್ಞಕ್ರಿಯೆಯಲ್ಲಿ ಉಪಯೋಗಿಸಲ್ಪಟ್ಟಿವೆ.

## ಸಾಮವೇದ

ಸಾಮವೇದವು ಚತುರ್ಮುಖ ಬ್ರಹ್ಮನ ಪಶ್ಚಿಮ ದಿಕ್ಕಿನ ಮುಖದಿಂದ ಪ್ರಕಾಶಕ್ಕೆ ಬಂದಿದೆ. ವೇದವನ್ನು ವಿಭಾಗಮಾಡಿದ ವ್ಯಾಸಮುನಿಯು ಇದನ್ನು ಮೊದಲು ತನ್ನ ಶಿಷ್ಯನಾದ ಜೈಮಿನಿಗೆ ಕಲಿಸಿದನು. ಅನಂತರ ಇವನ ಶಿಷ್ಯರು ಪ್ರಶಿಷ್ಯರ ಮುಖಾಂತರವಾಗಿ ಸಾಮವೇದವು ಒಂದು ಕ್ರಮಬದ್ಧವಾದ ಪ್ರಚಾರದಲ್ಲಿ ಬಂದಿತು.

ಸಾಮವೇದವು ಯಜ್ಞಕ್ರಿಯೆಯಲ್ಲಿ ಋತ್ವಿಜನಾದ ಉದ್ಗಾತೃವಿಗೆ ಹೆಚ್ಚಾಗಿ ಸಂಬಂಧಪಟ್ಟಿದೆ. ಯಜ್ಞಸಮಯದಲ್ಲಿ ಅಧ್ವರ್ಯನು ದೇವತೆಗಳನ್ನುದ್ದೇಶಿಸಿ ಹವನ ಮಾಡುವ ಪೂರ್ವದಲ್ಲಿ ಹವನಕ್ಕೆ ಉದ್ದೇಶೀಭೂತವಾದ ದೇವತೆಯನ್ನು ಕರೆಯುವ ಕೆಲಸವು ಉದ್ಗಾತೃವಿನದು. ಮಂತ್ರಗಳಿಗೆ ಉಚಿತವಾದ, ನಿಯಮಬದ್ಧವಾದ ಸ್ವರ ಸಂಯೋಜನೆಮಾಡಿ ಉದ್ಗಾತೃವು ದೇವತೆಗಳನ್ನು ಕರೆಯುತ್ತಾನೆ. ಸ್ವರ ಸಂಯೋಜನೆಮಾಡಿ ಮಂತ್ರಗಳನ್ನು ಹಾಡುವುದಕ್ಕೆ 'ಸಾಮ'ವೆಂದು ಹೆಸರು. ಈ ಸಾಮವು ಮಂತ್ರ (ಋಕ್ಕು)ಗಳನ್ನು ಆಶ್ರಯಿಸಿಕೊಂಡಿದೆ. ಆದ್ದರಿಂದ ಮಂತ್ರಗಳನ್ನು ಅಥವಾ ಋಕ್ಕುಗಳನ್ನು ಹಾಡಲಾಗುತ್ತದೆ ಎಂದಾಯಿತು. ಇದರಿಂದ ಸಾಮವೇದವಲ್ಲಿ ಸಂಪೂರ್ಣವಾಗಿ ಋಕ್ಕುಗಳೇ ಇರಬೇಕಾದುದು ಅವಶ್ಯಕವಾಯಿತು. ಆದ್ದರಿಂದ ಸಾಮವೇದದಲ್ಲಿ ಸಂಪೂರ್ಣವಾಗಿ ಋಕ್ಕುಗಳೇ–ಅಂದರೆ ಒಂದುಕ್ರಮದ ವೃತ್ತಬದ್ಧವಾದ ಮಂತ್ರಗಳೇ-ಇರುತ್ತವೆ. ಸಾಮ

ವೇದವಲ್ಲಿ ಒಟ್ಟು ೧೫೪೯ ಋಕ್ಕುಗಳಿವೆ. ಆದರೆ ಇವುಗಳಲ್ಲಿ ಸ್ವತಂತ್ರ ವಾದ ಋಕ್ಕುಗಳು ಕೇವಲ ೭೫ ಮಾತ್ರ. ಉಳಿದ ಎಲ್ಲಾ ಋಕ್ಕುಗಳೂ ಋಗ್ವೇದದಲ್ಲಿ ಬಂದವುಗಳೇ ಇದರಲ್ಲಿವೆ. ಋಗ್ವೇದದ ಮಂತ್ರಗಳಿಗೆ ಸಾಮ (ಗಾನ)ವನ್ನೂ ಸೇರಿಸಿಹಾಡುವ ಪದ್ಧತಿಯಿಂದ ಸಾಮವೇದದ ಮುದ್ರೆಯನ್ನು ಒತ್ತಲಾಗಿದೆ. ಆದ್ದರಿಂದ ಸಾಮವೇದಕ್ಕೆ ಸಾಮ (ಗಾನ)ಪದ್ಧತಿಯನ್ನು ಬಿಟ್ಟರೆ ಸ್ವತಂತ್ರವಾದ ಅಸ್ತಿತ್ವವೇ ಇರುವುದಿಲ್ಲವೆಂದು ಹೇಳಬಹುದು. ಇದರಲ್ಲಿ ಬಂದಿರುವ ಋಗ್ವೇದದ ಮಂತ್ರಗಳಲ್ಲಿಯೂ ಬಹುಮಟ್ಟಿಗೆ ಋಗ್ವೇದದ ಎಂಟು ಒಂಭತ್ತನೆಯ ಮಂಡಲಗಳ ಮಂತ್ರಗಳೇ ಇರುತ್ತವೆ. ಆದ್ದರಿಂದ ಸಾಮವೇದದ ಬಹು ಮಂತ್ರಗಳು ಯಜ್ಞಕ್ರಿಯೆಗೆ ಯೋಗ್ಯವಾದವೂ ಹಾಗೂ ಸೋಮ ದೇವತೆಗೆ ಸಂಬಂಧಪಟ್ಟವೂ ಆಗಿರುವುದು ಸಹಜವಿರುತ್ತದೆ.

## ಸಾಮ ಸಂಹಿತೆ

ಸಾಮ ವೇದದ ಸಂಹಿತೆಯನ್ನು ಪ್ರಧಾನವಾಗಿ ಪೂರ್ವಾರ್ಚಿಕ, ಉತ್ತರಾರ್ಚಿಕಗಳೆಂದು ಎರಡು ಭಾಗವಾಗಿ ವಿಂಗಡಿಸಿದ್ದಾರೆ. ಪೂರ್ವಾರ್ಚಿಕಕ್ಕೆ ಛಂದಸ್ಸು, ಛಾಂದಸಿ ಅಥವಾ ಛಾಂದಸಿಕಾ ಎಂದು ಕರೆಯುತ್ತಾರೆ. ಇದರೊಳಗಿನ ಮಂತ್ರಗಳನ್ನು ವಿಷಯಾನುಗುಣವಾಗಿ ಪ್ರಧಾನವಾದ ನಾಲ್ಕು ವಿಭಾಗಗಳನ್ನು ಮಾಡಿದ್ದಾರೆ. ೧) ಆಗ್ನೇಯ ಪೂರ್ವ (ಅಗ್ನಿಸಂಬಂಧವಾದ ಮಂತ್ರಗಳು) ೨) ಐಂದ್ರ (ಇಂದ್ರನ ಸಂಬಂಧವಾದ ಮಂತ್ರಗಳು) ೩) ಪವಮಾನ ( ಸೋಮದೇವತೆಗೆ ಸಂಬಂಧಪಟ್ಟ ಮಂತ್ರಗಳು) ೪) ಆರಣ್ಯಕ ಪೂರ್ವ (ಅಡವಿಯಲ್ಲಿ ಕುಳಿತು ಹಾಡಲು ಯೋಗ್ಯವಾದ ಮಂತ್ರಗಳು) ಎಂದು ಪ್ರಧಾನವಾಗಿ ನಾಲ್ಕು ವಿಭಾಗಗಳನ್ನು ಮಾಡಿದ್ದಾರೆ.

ಸಾಮವೇದದ ಮತ್ತೊಂದು ಭಾಗಕ್ಕೆ ಉತ್ತರಾರ್ಚಿಕವೆಂದು ಹೆಸರು. ಇದನ್ನೂ ಸಹ ವಿಷಯಾನುಗುಣವಾಗಿ ಕೆಲವು ಉಪಖಂಡಗಳನ್ನಾಗಿ ವಿಭಾಗ ಮಾಡಿದ್ದಾರೆ. ಈ ಉಪ ಖಂಡಗಳನ್ನು ಅನುಷ್ಠಾನಕ್ಕೆ ಅನುಕೂಲವಾಗುವಂತೆ ವಿಭಾಗಿಸಿ ಸಾರ್ಥಕವಾದ ಹೆಸರು ಕೊಟ್ಟು ಕರೆದಿದ್ದಾರೆ: ೧) ದಶ

ರಾತ್ರ, (ಹತ್ತು ರಾತ್ರಿಗಳಲ್ಲಿ ಅನುಷ್ಠಾನ ಮಾಡಲು ಯೋಗ್ಯವಾದ ಮಂತ್ರಗಳು) ೨) ಸಾಂವತ್ಸರ (ಒಂದು ವರ್ಷದಲ್ಲಿ ಅನುಷ್ಠಾನ ಮಾಡಲು ಯೋಗ್ಯವಾದ ಮಂತ್ರಗಳು.) ೩) ಏಕಾಹ (ಒಂದು ದಿವಸದಲ್ಲಿ ಅನುಷ್ಠಾನ ಮಾಡಲು ಯೋಗ್ಯವಾದ ಮಂತ್ರಗಳು.) ೪) ಅಹೀನ (ಒಂದು ಹಗಲಿನಲ್ಲಿ ಅನುಷ್ಠಾನ ಮಾಡಲು ಯೋಗ್ಯವಾದ ಮಂತ್ರಗಳು) ೫) ಸತ್ರ [ಯಜ್ಞಸಂಬಂಧವಾದ ಮಂತ್ರಗಳು] ೬) ಪ್ರಾಯಶ್ಚಿತ್ತ (ಅನುಷ್ಠಾನಸಮಯದಲ್ಲಿ ಸಂಘಟಿಸಿದ ಸ್ಖಾಲಿತ್ಯ[ ತಪ್ಪು]ಗಳಿಂದ ಒದಗಬಹುದಾದ ದೋಷನಿವಾರಣೆಗೆ ಉಪಯೋಗಿಸಲು ಅವಶ್ಯಕವಾದ ಮಂತ್ರಗಳು.) ೭) ಕ್ಷುದ್ರಃ (ಅಲ್ಪವಿಷಯಗಳಿಗೆ ಅಥವಾ ಕ್ಷುದ್ರ ದೇವತೆಗಳಿಗೆ ಸಂಬಂಧಪಟ್ಟ ಮಂತ್ರಗಳು.) ಗಳೆಂದು ಏಳುತರಹ ವಿಭಾಗಿಸಿದ್ದಾರೆ. ಹೀಗೆ ಎರಡು ತರಹ ವಿಭಕ್ತವಾದ ಸಮಗ್ರ ಸಾಮ ಸಂಹಿತೆಯೂ ಶುಕ್ಲ, ಕೃಷ್ಣ ಯಜುರ್ವೇದಗಳ ಸಂಹಿತಾ ಗ್ರಂಥಗಳಿಗಿಂತಲೂ ಪ್ರಾಚೀನವಾದುವೆಂದು ಇಂದಿನ ಕೆಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.

ಸಾಮವೇದದಲ್ಲಿ ಸಂಗೀತದ ಸಪ್ತಸ್ವರಗಳೂ ಉಪಯೋಗಿಸಲ್ಪಟ್ಟಿವೆ. ಆದ್ದರಿಂದ ನಮ್ಮ ಭಾರತೀಯ ಸಂಗೀತಕ್ಕೆ ಸಾಮವೇದವೇ ಮೂಲವೆಂದು ಸಾಂಪ್ರದಾಯಿಕವಾದ ಶಾಸ್ತ್ರೀಯ ಸಿದ್ಧಾಂತವಾಗಿದೆ. ಇಂದಿನ ವಿಮರ್ಶಕರೂ ಸಹ ಇದಕ್ಕೆ ಏಕಮುಖವಾಗಿ ಸಮ್ಮತಿಯನ್ನು ಕೊಟ್ಟಿದ್ದಾರೆ. ಅಷ್ಟು ಪ್ರಾಚೀನ ಕಾಲದಲ್ಲಿಯೇ ನಮ್ಮ ಭಾರತೀಯ ಸಂಗೀತವು ಎಷ್ಟು ಉನ್ನತ ಸ್ಥಾನವನ್ನು ಮುಟ್ಟಿದ್ದಿತೆಂದೂ ಮತ್ತು ನಮ್ಮ ಪೂರ್ವಿಕರು ಯಜ್ಞದಂತಹ ಶ್ರೇಷ್ಠವಾದ ವೈದಿಕ ಕರ್ಮಗಳಲ್ಲಿ ಸಂಗೀತವನ್ನು ಹೇಗೆ ಉಪಯೋಗಿಸಿದ್ದರೆಂಬುದನ್ನೂ ಸಹ ಸುಲಭವಾಗಿ ನಾವು ತಿಳಿಯಬಹುದು. ಇದರಿಂದ ಅಷ್ಟು ಪ್ರಾಚೀನ ಕಾಲದಲ್ಲಿಯೇ ಭಾರತೀಯ ಸಭ್ಯತೆಯು ಎಷ್ಟು ವಿಕಾಸ ಹೊಂದಿತ್ತೆಂಬುದನ್ನು ಸಹಾ ಚೆನ್ನಾಗಿ ಕಾಣಬಹುದು.

## ಸಾಮವೇದದ ಶಾಖೆಗಳು

ಸಾಮವೇದಕ್ಕೆ ಸಂಬಂಧಪಟ್ಟ ಶಾಖೆಗಳು ಒಂದು ಸಾವಿರವಿದ್ದ ವೆಂದು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದೆ. ಅಷ್ಟೋತ್ತರ ಶತೋಪನಿಷತ್ತು ಗಳಲ್ಲಿ ಸಾಮವೇದಕ್ಕೆ ಸಂಬಂಧಪಟ್ಟ ಉಪನಿಷತ್ತುಗಳು ೧೬ ಇರುವುದ ರಿಂದ ಒಂದೊಂದು ಶಾಖೆಗೆ ಒಂದೊಂದು ಉಪನಿಷತ್ತು ಇದ್ದಿತೆಂದು ಒಂದು ಸಂಪ್ರದಾಯಕ ಅಭಿಪ್ರಾಯ ವಿದ್ದುದರಿಂದಲೂ ಮುಕ್ತಿಕೋಪನಿಷ ತ್ತಿನ ಕಾಲದಲ್ಲಿ ೧೬ ಶಾಖೆಗಳು ಸಾಮವೇದಕ್ಕೆ ಸಂಬಂಧ ಪಟ್ಟಂತೆ ಇದ್ದುವೆಂದು ಅಂದಿನವರು ತಿಳಿದಿದ್ದರೆಂದೂ ಸಹ ವ್ಯಕ್ತವಾಗುತ್ತದೆ. ಆದರೆ ಸದ್ಯಕ್ಕೆ ಉಪಲಬ್ಧವಿರುವ ಸಾಮವೇದದ ಶಾಖೆಗಳು ಗೌತಮೀಯು, ರಾಣಾಯನೀಯು ಎಂಬ ಎರಡು ಶಾಖೆಗಳು ಮಾತ್ರ ಇವೆ. ಇವೆರಡು ಶಾಖೆಗಳ ಸಂಹಿತೆಗಳಿಗೂ ಕೆಲವು ಪಾಠಭೇದಗಳು ಮಾತ್ರ ಇವೆ.

## ಅಥರ್ವಣ ವೇದ

ಅಥರ್ವಣ ವೇದವು ಚತುರ್ಮುಖ ಬ್ರಹ್ಮನ ಉತ್ತರ ದಿಕ್ಕಿನ ಮುಖ ದಿಂದ ಪ್ರಕಾಶಕ್ಕೆ ಬಂದಿದೆ. ವೇದವಿಭಾಗ ಮಾಡಿದನಂತರ ವ್ಯಾಸನು ಸುಮಂ ತನೆಂಬ ಋಷಿಗೆ ಮೊದಲು ಇದನ್ನು ಉಪದೇಶಿಸಿದನು. ಅನಂತರ ಇವನ ಶಿಷ್ಯ ಪ್ರಶಿಷ್ಯ ಪರಂಪರೆಯಾಗಿ ಈಗಿರುವ ಪಾಠಕ್ರಮವು ಪ್ರಚಾರಕ್ಕೆ ಬಂ ದಿತು. ಇಂದಿನ ವಿಮರ್ಶಕರು "ಅಥರ್ವಣ" ನೆಂಬ ಋಷಿಯೂ ಅವನ ವಂಶದವರೂ, ಕಂಡುಹಿಡಿದ ಮಂತ್ರಗಳು ಇದರಲ್ಲಿ ಹೆಚ್ಚಾಗಿರುವುದರಿಂದ ಇದಕ್ಕೆ ಅಥರ್ವಣ ವೇದವೆಂದು ಹೆಸರು ಬಂದಿದೆ ಎಂದು ಹೇಳುತ್ತಾರೆ.

ಇದರಲ್ಲಿ ೧೨೦೦ ಮಂತ್ರಗಳು ಮಾತ್ರ ಋಗ್ವೇದದ ಮಂತ್ರ ಗಳಿದ್ದು ಉಳಿದವು ಸ್ವತಂತ್ರ ಮಂತ್ರಗಳಾಗಿವೆ. ಅದರಂತೆಯೇ ಯಜ್ಞ ಕ್ಕೆ ಸಂಬಂಧಪಟ್ಟ ಮಂತ್ರಗಳು ಇದರಲ್ಲಿ ಕಡಿಮೆ ಪ್ರಮಾಣದಲ್ಲಿವೆ. ಇದರಲ್ಲಿ ಮೋಹನ, ಮಾರಣ, ಉಚ್ಚಾಟನ ಮೊದಲಾದ ಅಭಿಚಾರಿಕ ಕ್ರಿಯೆಗಳಿಗೆ ಸಂಬಂಧಪಟ್ಟ ಮಂತ್ರಗಳು ವಿಶೇಷವಾಗಿವೆ.

# ಅಥರ್ವ ಸಂಹಿತೆ

ಅಥರ್ವಸಂಹಿತೆಯನ್ನು ಇಪ್ಪತ್ತು ವಿಭಾಗಮಾಡಿ ಅವುಗಳನ್ನು ಖಂಡಗಳೆಂದು ಕರೆದಿದ್ದಾರೆ. ಪ್ರತಿಯೊಂದು ಖಂಡದಲ್ಲಿಯೂ ಅನೇಕ ಪ್ರಪಾಠಕಗಳಿವೆ. ಪ್ರಪಾಠಕಗಳಲ್ಲಿ ಅನುವಾಕಗಳೂ, ಅನುವಾಕಗಳಲ್ಲಿ ಸೂಕ್ತಗಳೂ, ಸೂಕ್ತಗಳಲ್ಲಿ ಮಂತ್ರಗಳೂ, ಹೀಗೆ ಕ್ರಮವಾಗಿ ಒಂದರಿಂದ ಮತ್ತೊಂದು ಒಳಭಾಗಗಳಾಗಿರುತ್ತವೆ. ಇಪ್ಪತ್ತು ಖಂಡಗಳು ಸೇರಿ ಮೂವತ್ತನಾಲ್ಕು ಪ್ರಪಾಠಕಗಳಿವೆ. ೧೧೧ ಅನುವಾಕಗಳೂ, ೭೩೧ ಸೂಕ್ತಗಳೂ, ೫೮೪೯ ಮಂತ್ರಗಳೂ ಅಥರ್ವಸಂಹಿತೆಯಲ್ಲಿ ಇವೆ. ಇವುಗಳಲ್ಲಿ ಸುಮಾರು ೧೨೦೦ ಋಗ್ವೇದದ ಮಂತ್ರಗಳು ಇರುತ್ತವೆ. ಈ ಸಂಹಿತೆಯೊಳಗೆ ಸುಮಾರು ಆರು ಕಾಂಡಗಳಾಗುವಷ್ಟು ಭಾಗ ಗದ್ಯಮಯವಾಗಿದ್ದು ಉಳಿದವೆಲ್ಲವೂ ಪದ್ಯ(ಮಂತ್ರ)ಮಯವಾಗಿವೆ. ಇದರಲ್ಲಿನ ಮೊದಲಿನ ೧೩ ಕಾಂಡಗಳಲ್ಲಿ ಅಭಿಚಾರಿಕಕ್ರಿಯೆಗಳನ್ನು ವಿವರಿಸಲಾಗಿದೆ. ೧೪ನೆಯ ಕಾಂಡದಲ್ಲಿ ವಿವಾಹಕ್ಕೆ ಸಂಬಂಧಪಟ್ಟ ವಿಷಯಗಳು ವರ್ಣಿತವಾಗಿವೆ. ೧೭ ನೆಯ ಕಾಂಡದಲ್ಲಿ ಶ್ರಾದ್ಧಾದಿ ಕ್ರಿಯೆಗಳಿಗೆ ಸಂಬಂಧಪಟ್ಟ ಮಂತ್ರಗಳಿವೆ. ೨೦ ನೆಯ ಖಂಡದಲ್ಲಿ ಸೋಮದೇವತೆಗೆ ಸಂಬಂಧಪಟ್ಟ ಮಂತ್ರಗಳಿವೆ. ಇದರಲ್ಲಿ ಬಹುಮಟ್ಟಿಗೆ ಋಗ್ವೇದದ ಮಂತ್ರಗಳು ಇರುತ್ತವೆ. ಈ ಕೊನೆಯ ಖಂಡವನ್ನು ಅಥರ್ವಣ ವೇದದಲ್ಲಿಯೂ ಹೇಗಾದರೂ ಯಜ್ಞಕ್ರಿಯಾ ಸಂಬಂಧವನ್ನು ಕಲ್ಪಿಸುವ ಆಸೆಯಿಂದ ಯಜ್ಞ ವಿಷಯಗಳನ್ನು ಬೋಧಿಸುವ ಈ ಭಾಗವನ್ನು ಅನಂತರದಲ್ಲಿ ಸೇರಿಸಿರಬೇಕೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.

ಅಥರ್ವಣ ವೇದದಲ್ಲಿ ವಿವಿಧಮುಖವಾದ ಅಭಿಚಾರಕ್ರಿಯೆಗಳಿಗೆ ಸಂಬಂಧಪಟ್ಟ ವಿಷಯಗಳು ವಿವರವಾಗಿ ವರ್ಣಿತವಾಗಿವೆ. ದಸ್ಯುಗಳೂ, ರಾಕ್ಷಸರೂ, ಮಾಯಾವಿಗಳೂ, ಶತ್ರುಗಳೂ, ಬ್ರಹ್ಮದ್ವೇಷಿಗಳೂ ಮತ್ತು ಇದೇತರಹದ ಅನೇಕ ವಿಧವಾದ ಇತರ ಸಮಾಜ ಘಾತುಕರೂ ಇವರನ್ನು ನಿವಾರಣೆ ಮಾಡುವ ವಿಧಿವಿಧಾನಗಳನ್ನು ವಿವಿಧ ಮುಖವಾಗಿ ವಿವರಿಸಿದೆ.

ಇದಲ್ಲದೆ ಐಹಿಕವಾದ ಸುಖಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನೂ ಸಹ ಇದರಲ್ಲಿ ವರ್ಣಿಸಲಾಗಿದೆ. ಮನೆ ಕಟ್ಟುವುದೂ, ಸುಖ ಸಂಸಾರ, ಗ್ರಾಮ ವಾಸ, ವೈರ ಪ್ರಶಮನ, ದೀರ್ಘಾಯುಕ್ರಮ, ಆರೋಗ್ಯಕ್ರಮ, ಶ್ರೇಯಸ್ಸು, ಸತ್ಯವ್ರತ, ದ್ಯೂತದಲ್ಲಿ ದೈವಾನುಕೂಲ್ಯವೇ ಮೊದಲಾದ ಐಹಿಕ ಜೀವನಕ್ಕೆ ಸುಖದಾಯಕವಾದ ವಿಷಯಗಳನ್ನು ಸೂಚಿಸಿದೆ. ಇದರಲ್ಲಿ ನಾನಾಪ್ರಕಾರ ವಾದ ರೋಗಗಳ ಸ್ವರೂಪ, ಅವು ಬರುವ ಕ್ರಮ, ರೋಗೋತ್ಪಾದಕಗಳಾದ ಭೂತ ಪ್ರೇತ ಪಿಶಾಚಗಳು, ಅಪಸ್ಮಾರ, ಬ್ರಹ್ಮರಾಕ್ಷಸ, ಮೊದಲಾದುವುಗಳ ಪೀಡೆ ಮತ್ತು ಅವುಗಳ ನಿವಾರಣೋಪಾಯಗಳನ್ನೂ ಸಹ ವಿವರಿಸಿದ್ದಾರೆ. ಇವಕ್ಕೆ ಸಂಬಂಧಪಟ್ಟ ಮಂತ್ರಗಳಲ್ಲದೆ ಔಷಧಿಗಳನ್ನು ವಿವರಿಸುವ ಅನೇಕ ಮಂತ್ರಗಳೂ, ವಾಕ್ಯಗಳೂ ಇದರಲ್ಲಿವೆ. ಆದ್ದರಿಂದ ಭಾರತೀಯ ವೈದ್ಯ ಶಾಸ್ತ್ರಕ್ಕೆ ಅಥರ್ವಣ ವೇದವು ಮೂಲವಾಗಿರಬೇಕೆಂದು ಇಂದಿನವರು ಊಹಿಸುತ್ತಾರೆ.

ಅಥರ್ವಣ ವೇದಕ್ಕೆ ಸಂಬಂಧಪಟ್ಟ ಶಾಖೆಗಳು ೫೧ ಇದ್ದವೆಂದು ಮುಕ್ತಿಕೋಪನಿಷತ್ತಿನಲ್ಲಿಯೂ, ಒಂಭತ್ತು ಶಾಖೆಗಳೆಂದು ಕೂರ್ಮಪುರಾಣ ದಲ್ಲಿಯೂ ಹೇಳಿದೆ. ಅಷ್ಟೋತ್ತರ ಶತೋಪನಿಷತ್ತುಗಳಲ್ಲಿ ೩೧ ಉಪ ನಿಷತ್ತುಗಳು ಅಥರ್ವಣ ವೇದದ್ದೆಂದು ಮುಕ್ತಿಕೋಪನಿಷತ್ತಿನ ಆರಂಭದಲ್ಲಿ ಹೇಳಿದೆ. ಆದರೆ ಈಗ ಉಪಲಬ್ಧವಾಗಿರುವ ಅಥರ್ವಣವೇದದ ಶಾಖೆಗಳು ಪೈಪ್ಪಲಾದಿ, ಶೌನಕ ಎಂಬ ಎರಡು ಶಾಖೆಗಳ ಸಂಹಿತೆಗಳು ಮಾತ್ರ ದೊರೆತಿವೆ.

## ಋಗ್ವೇದ ಯಜುರ್ವೇದಗಳ ತಾರತಮ್ಯ

ಋಗ್ವೇದ, ಯಜುರ್ವೇದಗಳೊಳಗೆ ದೇವತಾವಿಷಯಕವಾದ ವ್ಯತ್ಯಾಸವು ವಿಶೇಷವಾಗಿರುವುದಿಲ್ಲ. ಋಗ್ವೇದದಲ್ಲಿರುವ ಎಲ್ಲಾ ದೇವತೆಗಳೂ ಯಜುರ್ವೇದದಲ್ಲಿ ಬಂದಿವೆ. ಆದರೂ ಕೆಲವು ದೇವತೆಗಳು ವಿಶಿಷ್ಟವಾದ ಬದಲಾವಣೆ ಹೊಂದಿರುವುದನ್ನು (ಅಂದರೆ ಬೇರೆಯ ಹೆಸರು ಪಡೆದಿರುವು ದನ್ನು) ಯಜುರ್ವೇದದಲ್ಲಿ ಕಾಣಬಹುದು. ಋಗ್ವೇದದ ಕೊನೆಯ ಭಾಗದಲ್ಲಿ

ಇರುವ "ಪ್ರಜಾಪತಿ ದೇವತೆಯು" ಯಜುರ್ವೇದದ ಪ್ರಧಾನ ದೇವತೆಯಾಗಿ ವರ್ಣಿತವಾಗಿದೆ. ಅದರಂತೆಯೇ ಋಗ್ವೇದದ "ರುದ್ರ"ದೇವತೆಯು ಯಜುರ್ವೇದದಲ್ಲಿ 'ಶಿವ' ನೆಂಬ ಹೆಸರಿನಿಂದ ವ್ಯವಹೃತವಾಗಿ ಕ್ರಮೇಣ ಶಿವನ ಪರ್ಯಾಯ ಶಬ್ದಗಳಾದ ಶಂಕರ, ಮಹಾದೇವ ಮೊದಲಾದ ಶಬ್ದಗಳಿಂದಲೂ ವ್ಯವಹೃತವಾಗಿ ಕೊನೆಗೆ ಶಿವಾಭೇಧವನ್ನು ರುದ್ರನು ಹೊಂದುವನು. ಹಾಗೆಯೇ ಋಗ್ವೆದದ ವಿಷ್ಣುವು ಯಜುರ್ವೇದದಲ್ಲಿ ಬಹಳ ರೂಪಾಂತರವನ್ನು ಹೊಂದಿರುವನು. ಋಗ್ವೇದದ ಅಂತರಿಕ್ಷ ನಿವಾಸಿಗಳಾದ ಯಾತುಧಾನರು ಯಜುರ್ವೇದದ ಎಲ್ಲಾ ಕಡೆಗೂ ಬಹುಮಟ್ಟಿಗೆ ರಾಕ್ಷಸರಾಗಿ ಮಾರ್ಪಟ್ಟು ಅವರು ಸ್ವರ್ಗವಾಸಿಗಳಾದ ದೇವತೆಗಳ ವಿರೋಧಿಗಳೂ, ಹಿಂಸಕರೂ ಎಂದು ವರ್ಣಿತರಾಗಿದ್ದಾರೆ. ದೇವತೆಗಳ ಮತ್ತು ರಾಕ್ಷಸರ ವಿವಿಧ ವೃತ್ತಾಂತಗಳು ಯಜುರ್ವೇದದಲ್ಲಿ ಚಿತ್ರಿತವಾಗಿವೆ. ಅಪ್ಸರೆಯರೆಂಬ ದೇವಲೋಕ ಸುಂದರಿಯರ ಸ್ತೋತ್ರಗಳೂಸಹ ಯಜುರ್ವೇದದಲ್ಲಿ ಕಾಣಬರುತ್ತವೆ.

ಯಜುರ್ವೇದದಲ್ಲಿ ಯಜ್ಞಗಳಿಗೆ ಸರ್ವಪ್ರಾಧಾನ್ಯವು ದೊರೆತು ಋಗ್ವೇದದಲ್ಲಿರುವ ದೇವತೆಗಳ ಸರ್ವೋತ್ಕೃಷ್ಟತ್ವವೂ ಸರ್ವಸ್ವಾತಂತ್ರ್ಯವೂ ಯಜುರ್ವೇದದಲ್ಲಿ ಸ್ವಲ್ಪ ಕಡಮೆಯಾಗಿದೆ. ಯಜುರ್ವೇದದ ದೃಷ್ಟಿಯಿಂದ ಯಜ್ಞಗಳೇ ಸರ್ವಶ್ರೇಷ್ಠವಾದವುಗಳು. ಯಜ್ಞಗಳನ್ನು ಸ್ತೋತ್ರಮಾಡುವುದೇ, ವಿಧಿವತ್ತಾಗಿ ಯಜ್ಞಮಾಡುವುದೇ ಮುಖ್ಯವಾದ ಕೆಲಸಗಳು. ಸರ್ವತಂತ್ರ ಸ್ವತಂತ್ರವಾದ, ಸರ್ವಶಕ್ತಿಯುತವಾದ ಯಜ್ಞಗಳು ಕರ್ಮಾನುಗುಣವಾದ ಫಲಗಳನ್ನು ಕೊಡುತ್ತವೆ, ಮತ್ತು ದೇವತೆಗಳಿಂದ ಕೊಡಿಸುತ್ತವೆ. ಆದ್ದರಿಂದ ಸರ್ವತಂತ್ರ ಸ್ವತಂತ್ರರಾದ ಋಗ್ವೇದದ ದೇವತೆಗಳು, ಯಜುರ್ವೇದದಲ್ಲಿ ಯಜ್ಞಗಳ ಅಧೀನರಾಗಿದ್ದಾರೆ. ಯಜ್ಞಗಳು ಮಂತ್ರಗಳ ಅಧೀನವಾಗಿವೆ, ಮತ್ತು ಆ ಮಂತ್ರಗಳು ಬ್ರಾಹ್ಮಣರ ಅಧೀನವಾಗಿವೆ. ಆದ್ದರಿಂದ ಮಂತ್ರಗಳ ಮಹತಿನಿಂದ ಯಜ್ಞಸಾಧ್ಯತೆಗಳಿಗೂ ಯಜ್ಞಗಳ ನಿಯಮವರ್ತಿಗಳಾದ ದೇವತೆಗಳಿಗೂ ಮೂಲವಾದ ಮಂತ್ರಗಳಿಗೆ ಬ್ರಾಹ್ಮಣರು ಆಶ್ರಯದಾತರಾಗಿರುವುದರಿಂದ-- ಬ್ರಾಹ್ಮಣರ ಅಧೀನವಾಗಿರುವುದರಿಂದ-ಯಜುರ್ವೇದದ ದೃ

ಷ್ಟಿಯಿಂದ ಬ್ರಾಹ್ಮಣರಿಗೂ ಒಂದು ವಿಶೇಷವಾದ ಶ್ರೇಷ್ಠ ಸ್ಥಾನವು ಏರ್ಪಟ್ಟಿದೆ. ಇದರ ಆಧಾರದಿಂದಲೇ ಶಾಸ್ತ್ರಕಾರರು ಹೇಳುವ ಬ್ರಾಹ್ಮಣರ ಶ್ರೇಷ್ಠತ್ವವನ್ನು ತೋರಿಸುವ ಕೆಳಗಿನ ಶ್ಲೋಕವು ಪ್ರಚಾರದಲ್ಲಿ ಬಂದಿದೆ ಎಂದು ಹೇಳಬಹುದು.

ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಾಸ್ತು ದೇವತಾಃ ।
ತನ್ಮಂತ್ರಾ ಬ್ರಾಹ್ಮಣಾಧೀನಾಃ ಬ್ರಾಹ್ಮಣಾ ಮಮ ದೇವತಾಃ ॥

"ಪ್ರಪಂಚವು ದೇವತೆಗಳ ಅಧೀನವಾಗಿದೆ. ದೇವತೆಗಳು ಮಂತ್ರಾಧೀನವಾಗಿವೆ. ಆ ಮಂತ್ರಗಳು ಬ್ರಾಹ್ಮಣರ ಅಧೀನವಾಗಿರುವುದರಿಂದ ಬ್ರಾಹ್ಮಣರು ನನಗೆ ಪೂಜ್ಯರು, ದೇವರು" ಎಂದು ಪರಮಾತ್ಮನು ಹೇಳಿರುವುದೆಂಬುದು ಆ ಶ್ಲೋಕದ ಸಾಂದರ್ಭಿಕವಾದ ಅರ್ಥವಾಗುತ್ತದೆ.

## ಯಜುಸ್ಸಾಮಗಳ ತಾರತಮ್ಯ

ಯಜ್ಞಕರ್ಮಗಳಲ್ಲಿ ಉಪಯೋಗ ಬೀಳುವ ದೃಷ್ಟಿಯಿಂದ ಯಜುರ್ವೇದ ಸಾಮವೇದಗಳೆರಡೂ ಸಜಾತೀಯವಾಗಿವೆಯೆಂದು ಹೇಳಬಹುದು. ಆದರೆ ಇವೆರಡರಲ್ಲಿ ಮಹತ್ವಪೂರ್ಣವಾದ ಒಂದು ವಿಶಿಷ್ಟವಾದ ಭೇದವನ್ನೂ ಸಹ ಸಂಪೂರ್ಣವಾಗಿ ಕಾಣಬಹುದು. ಸಾಮವೇದದಲ್ಲಿ ಕೇವಲ ಸೋಮ ಯಾಗಕ್ಕೆ ಮಾತ್ರ ಸಂಬಂಧಪಟ್ಟ ವಿಷಯಗಳು ವರ್ಣಿತವಾಗಿದ್ದರೆ, ಯಜುರ್ವೇದದಲ್ಲಿ ಎಲ್ಲಾ ವಿಧವಾದ ಯಜ್ಞಗಳಿಗೆ ಸಂಬಂಧಪಟ್ಟ ವಿಷಯಗಳನ್ನೂ ಅವುಗಳ ನಿಯಮಗಳನ್ನೂ ಸಹ ಕಾಣಬಹುದು. ಸಾಮವೇದದಂತೆಯೇ ಯಜುರ್ವೇದದಲ್ಲಿಯೂ ಋಗ್ವೇದದ ಮಂತ್ರಗಳು ಸೇರಿಕೊಂಡಿವೆ. ಆದರೂ ಯಜುರ್ವೇದವು ಸಾಮವೇದದಂತೆ ಋಗ್ವೇದದ ಮಂತ್ರಮಯವಾಗಿರುವುದಿಲ್ಲ. ಯಜುರ್ವೇದದಲ್ಲಿ ಕೇವಲ ಕಾಲುಭಾಗ ಮಾತ್ರ ಋಗ್ವೇದದ ಮಂತ್ರಗಳಿದ್ದು ಉಳಿದವೆಲ್ಲವೂ ಸ್ವತಂತ್ರ ಮಂತ್ರಗಳಾಗಿ ವಿರಾಜಿಸುತ್ತವೆ.

# ೩. ಬ್ರಾಹ್ಮಣಗಳು



ವೈದಿಕ ವಾಙ್ಮಯದಲ್ಲಿ ಸಂಹಿತಾ ವಿಷಯಗಳನ್ನು ತಿಳಿದುಕೊಂಡ ಮೇಲೆ ಅವುಗಳ ಎರಡನೆಯ ಭಾಗವಾದ ಬ್ರಾಹ್ಮಣಗಳ ವಿಷಯಗಳನ್ನು ತಿಳಿದುಕೊಳ್ಳ ಬೇಕಾಗುತ್ತದೆ. ಈ ಬ್ರಾಹ್ಮಣಗಳು ಪ್ರತಿಯೊಂದು ವೇದಗಳ ಪ್ರತಿಯೊಂದು ಶಾಖೆಗಳಿಗೂ ಒಂದೊಂದರಂತೆ ಇರುತ್ತವೆ. ಇವುಗಳಲ್ಲಿ ಯಜ್ಞಗಳಿಗೆ ಸಂಬಂಧಪಟ್ಟ ವಿಷಯಗಳೇ ಹೆಚ್ಚಾಗಿರುತ್ತವೆ. ಯಜ್ಞಗಳ ಅನುಷ್ಠಾನ ಕ್ರಮಗಳನ್ನು ವಿಸ್ತಾರವಾಗಿ ಇವುಗಳಲ್ಲಿಹೇಳಿದೆ. ಇವುಗಳಜೊತೆಗೆ ಅನೇಕ ಆಖ್ಯಾಯಿಕೆಗಳೂ, ಅನೇಕ ರಾಜರ ಮತ್ತು ಋಷಿಗಳ ಕಥೆಗಳೂ ಮತ್ತು ಸಂಹಿತೆಗಳೊಳಗಿರುವ ಅನೇಕ ಶಬ್ದಗಳ ವ್ಯುತ್ಪತ್ತಿಗಳೂ ಸಹ ಬ್ರಾಹ್ಮಣ ಗ್ರಂಥಗಳಲ್ಲಿ ದೊರೆಯುತ್ತವೆ. ಆದ್ದರಿಂದ ಅನೇಕ ವೇದಾಂಗಗಳಿಗೆ ಬೀಜರೂಪವಾದ ವಿಷಯಗಳು ಈ ಬ್ರಾಹ್ಮಣ ಗ್ರಂಥಗಳಲ್ಲಿ ಅಡಕವಾಗಿವೆಯೆಂದು ಹೇಳಬಹುದು.

ಬ್ರಾಹ್ಮಣಗಳು ಬಹುಮಟ್ಟಿಗೆ ಗದ್ಯಮಯವಾಗಿವೆ. ಇವುಗಳಲ್ಲಿ ಯಜ್ಞಗಳಿಗೆ (ದೇವತೆಗಳಿಗೆ) ಸಂಬಂಧಪಟ್ಟ ವಿಷಯಗಳನ್ನು ವಿಧಿ (ನಿಯಮ), ಅರ್ಥ (ಪ್ರಯೋಜನ), ಅರ್ಥವಾದ (ಆಲಂಕಾರಿಕವಾದ ಹೊಗಳಿಕೆ) ಗಳೆಂದು ಮೂರು ವಿಧವಾಗಿ ವಿಭಾಗ ಮಾಡಿದ್ದಾರೆ. ಇಂದು ನಮಗೆ ಬ್ರಾಹ್ಮಣ ಗ್ರಂಥಗಳು ಬಹುಸಂಖ್ಯೆಯಲ್ಲಿ ದೊರೆಯುತ್ತವೆ. ಆದರೂ ಇನ್ನೂ ಎಷ್ಟೋ ಬ್ರಾಹ್ಮಣ ಗ್ರಂಥಗಳು ಪ್ರಕಾಶಕ್ಕೆಬಂದು ಬಾಳಿ ಕಣ್ಮರೆಯಾಗಿವೆಯೆಂದು ಹೇಳಲು ಬೇಕಾದಹಾಗೆ ಅವಕಾಶವಿದೆ. ಇಂದು ನಮಗೆ ಉಪಲಬ್ಧವಾಗದೇ ಇರುವ ಎಷ್ಟೋ ಬ್ರಾಹ್ಮಣ ಗ್ರಂಥಗಳ ಹೆಸರುಗಳೂ ಮತ್ತು ಅನೇಕ

ಗ್ರಂಥಗಳಲ್ಲಿ ಅವುಗಳವೆಂದು ಉದಾಹರಿಸಿರುವ ವಾಕ್ಯಗಳೂ ಯಥೇಚ್ಛವಾಗಿ ಕಂಡು ಬರುತ್ತವೆ.

"ಬ್ರಾಹ್ಮಣ ಗ್ರಂಥಗಳೆಲ್ಲವೂ ಸಾಮಾನ್ಯವಾಗಿ ಒಂದೇರೀತಿಯಲ್ಲಿರುವುವು. ಆದರೆ ಇವುಗಳಲ್ಲಿ ಕಾಲಕೃತವಾದ ಕೆಲಕೆಲವು ಭೇದಗಳು ಮಾತ್ರ ಕಂಡು ಬರುತ್ತವೆ" ಎಂದು ಇಂದಿನ ವಿಮರ್ಶಕರು ಹೇಳುತ್ತಾರೆ. ಕೃಷ್ಣಯಜುಃಸಂಹಿತೆಯೊಳಗಿನ ಗದ್ಯ ಭಾಗಗಳಿಗಿಂತ ಮುಂಚೆಯೇ ಆದರ ಬ್ರಾಹ್ಮಣ ಗ್ರಂಥಗಳೊಳಗಿನ ಪಂಚವಿಂಶ, ತೈತ್ತಿರೀಯವೆಂಬ ಎರಡು ಬ್ರಾಹ್ಮಣಗಳು ಉತ್ಪನ್ನವಾಗಿದ್ದವೆಂದು ಅವುಗಳಲ್ಲಿರುವ ಶಾಬ್ದಿಕವಾದ ಆಧಾರಗಳಿಂದಲೂ ವಾಕ್ಯರಚನಾ ರೀತಿಯಿಂದಲೂ ಹೇಳುವಂತಿದೆ. ಋಗ್ವೇದದ ಐತರೇಯ ಶಾಖೆಗೆ ಸಂಬಂಧಪಟ್ಟ "ಕೌಷೀತಕೀ", ಸಾಮವೇದಕ್ಕೆ ಸಂಬಂಧಪಟ್ಟ 'ಜೈಮಿನೀಯ' ಬ್ರಾಹ್ಮಣಗಳೆರಡು ಯಜುರ್ವೇದದ ಬ್ರಾಹ್ಮಣಕ್ಕಿಂತ ಆಧುನಿಕವಾಗಿವೆ ಎಂದು ತೋರುತ್ತದೆ. ಹೊಸ ಹೊಸ ಅರ್ಥಗಳಿಂದ ನವೀನವಾದ ವಿಷಯಗಳಿಂದ ಕೂಡಿದ ಶುಕ್ಲ ಯಜುರ್ವೇದದ ಶತಪಥ ಬ್ರಾಹ್ಮಣವು ಕೃಷ್ಣ ಯಜುರ್ವೇದದ ಬ್ರಾಹ್ಮಣ, ಋಗ್ವೇದ ಸಾಮವೇದಗಳ ಬ್ರಾಹ್ಮಣಗಳಿಗಿಂತಲೂ ನವೀನವಾದುವೆಂದು ಹೇಳಬಹುದು. ಅಥರ್ವಣ ಬ್ರಾಹ್ಮಣವು ಎಲ್ಲಕ್ಕಿಂತಲೂ ಕಡೆಯದಿರಬೇಕೆಂದು ಇಂದಿನ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ವಿಮರ್ಶಕರಿಗೆ ಬ್ರಾಹ್ಮಣ ಗ್ರಂಥಗಳು ಅತ್ಯಂತ ಉತ್ಸಾಹವನ್ನುಂಟುಮಾಡುವಂತಿವೆ. ಇವುಗಳಲ್ಲಿರುವ ಕರ್ಮವಿಷಯಕವಾದ ವಿವರಣೆಗಳಿಗಿಂತಲೂ ಪುರಾತನವಾದ ಕಥೆಗಳ–ವೃತ್ತಾಂತಗಳ–ವರ್ಣನೆಯ ಕ್ರಮವು ಅತ್ಯಂತ ಹೃದಯಂಗಮವಾಗಿದೆ. ಇಂತಹ ಬ್ರಾಹ್ಮಣ ಗ್ರಂಥಗಳು ನಾಲ್ಕು ವೇದಗಳ ಪ್ರತಿಯೊಂದು ಶಾಖೆಗಳಿಗೂ ಪಾಠಭೇದ, ಅಲ್ಪ ಸ್ವಲ್ಪ ವಿಷಯ ಭೇದಗಳಿಂದ ಪ್ರತ್ಯೇಕವಾಗಿ ಇರುತ್ತವೆ. ಕೆಲವು ಶಾಖೆಗಳಿಗೆ ಕೆಲವು ಪಾಠ ಭೇದಗಳಿಂದ ಒಂದಕ್ಕಿಂತ ಹೆಚ್ಚು ಬ್ರಾಹ್ಮಣಗಳು ಇದ್ದುವೆಂದು ಸಹ ತಿಳಿದು ಬರುತ್ತದೆ.

## ಋಗ್ವೇದದ ಬ್ರಾಹ್ಮಣ

ಋಗ್ವೇದದ ಬ್ರಾಹ್ಮಣಗಳಲ್ಲಿ 'ಐತರೇಯ' 'ಕೌಷೀತಕೀ' ಎಂದು ಎರಡು ಬ್ರಾಹ್ಮಣ ಗ್ರಂಥಗಳು ದೊರೆತಿವೆ. ಇವುಗಳಲ್ಲಿ ಐತರೇಯ ಬ್ರಾಹ್ಮಣವೇ ಪ್ರಧಾನವಾದುದು.

೧. **ಐತರೇಯ:—** ಐತರೇಯ ಬ್ರಾಹ್ಮಣದಲ್ಲಿ ೪೦ ಅಧ್ಯಾಯಗಳಿವೆ. ಇವುಗಳಲ್ಲಿ ಐದೈದು ಅಧ್ಯಾಯಗಳನ್ನು ಒಂದೊಂದಾಗಿ ಕೂಡಿಸಿ ಒಟ್ಟು ಎಂಟು ಗುಂಪುಗಳಾಗಿ ವಿಂಗಡಿಸಿದ್ದಾರೆ. ಇಂತಹ ಐದೈದು ಅಧ್ಯಾಯಗಳ ಒಂದೊಂದು ಗುಂಪಿಗೆ ಪಂಚಕವೆಂದೂ, ಆ ಗುಂಪುಗಳು ಎಂಟು ಇರುವುದರಿಂದ ಅಷ್ಟಕಗಳೆಂದೂ ಕರೆಯುತ್ತಾರೆ. ಇದರಲ್ಲಿ ಸೋಮಯಾಗಕ್ಕೆ ಸಂಬಂಧಪಟ್ಟ ವಿಷಯಗಳನ್ನು ಪ್ರಧಾನವಾಗಿ ವಿವರವಾಗಿ ಚಿತ್ರಿಸಿದ್ದಾರೆ.

೨. **ಕೌಷೀತಕೀ:—**ಕೌಷೀತಕೀ ಬ್ರಾಹ್ಮಣವನ್ನು 'ಶಾಂಖಾಯನ' ಬ್ರಾಹ್ಮಣವೆಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ. ಇದರಲ್ಲಿ ೩೦ ಅಧ್ಯಾಯಗಳಿವೆ. ಐತರೇಯ ಬ್ರಾಹ್ಮಣದಲ್ಲಿ ಪ್ರಧಾನವಾಗಿ ವಿವರಿಸಿದ ವಿಷಯಗಳನ್ನೇ ಇದರಲ್ಲಿಯೂ ಬಹುಮಟ್ಟಿಗೆ ವಿವರಿಸಿದ್ದಾರೆ. ಆದರೆ ವರ್ಣನೆಯ ರೀತಿಯಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದೆಯೆಂದು ಹೇಳಬಹುದು.

ಋಗ್ವೇದದ ಐತರೇಯ ಬ್ರಾಹ್ಮಣದ ಏಳನೆಯ ಪಂಚಕದ ಮೂರನೆಯ ಅಧ್ಯಾಯದಲ್ಲಿರುವ 'ಶುನಃಶೇಫನ' ಕಥೆಯು ಬಹಳ ಸುಂದರವಾಗಿಯೂ ವಿಸ್ತಾರವಾಗಿಯೂ ಇದೆ.

## ಕೃಷ್ಣಯಜುರ್ವೇದದ ಬ್ರಾಹ್ಮಣ

ಕೃಷ್ಣಯಜುರ್ವೇದ ಬ್ರಾಹ್ಮಣಗಳು ಇತರ ಎಲ್ಲಾ ಬ್ರಾಹ್ಮಣಗಳಿಗಿಂತ ವಿಚಿತ್ರವಾಗಿ ಒಂದು ವಿಶಿಷ್ಟವಾದ ಕ್ರಮವನ್ನು ಅನುಸರಿಸಿಕೊಂಡಿವೆ. ಉಳಿದ ಎಲ್ಲಾ ಬ್ರಾಹ್ಮಣ ಗ್ರಂಥಗಳು ಗದ್ಯಮಯವಾಗಿದ್ದರೆ, ಇದರ ಪ್ರಧಾನವಾದ ತೈತ್ತಿರೀಯ ಬ್ರಾಹ್ಮಣವು ಬಹುಮಟ್ಟಿಗೆ ಮಂತ್ರ ಮಯವಾಗಿಯೇ ಇದೆ, ಮತ್ತು ಇದರ ವಾಕ್ಯಗಳು ಅತ್ಯಂತ ಸಣ್ಣವಾಗಿವೆ; ಉದ್ದವಾದ ವಾಕ್ಯಗಳು ಇಲ್ಲವೇ ಇಲ್ಲವೆನ್ನುವಷ್ಟು ಕಡಮೆ ಇವೆ. ಎರಡು ಮೂರು

ಪದಗಳ ವಾಕ್ಯಗಳೂ ಸಹ ಬಹುಸಂಖ್ಯೆಯಲ್ಲಿ ದೊರೆಯುತ್ತವೆ. "ಬ್ರಾಹ್ಮಣ ಗ್ರಂಥ ಸಮುದಾಯದಲ್ಲಿ ಈ ಬ್ರಾಹ್ಮಣವೇ ಅತ್ಯಂತ ಪ್ರಾಚೀನವಾದು"ದೆಂದು ಇಂದಿನ ವಿಮರ್ಶಕರು ಊಹಿಸುತ್ತಾರೆ.

ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟ ಮೂರು ಬ್ರಾಹ್ಮಣಗಳು ಈಗ ಉಪಲಬ್ಧವಾಗಿವೆ. ತೈತ್ತಿರೀಯ, ಕಾಠಕೀಯ, ಮತ್ತು ಮೈತ್ರಾಯಣೀಯ ವೆಂಬ ಮೂರು ಬ್ರಾಹ್ಮಣ ಗ್ರಂಥಗಳು ದೊರೆಯುತ್ತವೆ. ಇವುಗಳಲ್ಲಿ ಕೊನೆಯವೆರಡು ತಮ್ಮ ತಮ್ಮ ಸಂಹಿತೆಗಳೊಳಗೇ ಸೇರಿಸಲ್ಪಟ್ಟು, ಪ್ರತ್ಯೇಕವಾದ ಗ್ರಂಥರೂಪವಾಗಿ ಕಾಣಿಸಿಕೊಳ್ಳದಿದ್ದರೂ, ತಮ್ಮ ಅಸ್ತಿತ್ವವನ್ನು ಸಂಹಿತೆಯ ಜೊತೆಗೆ ಕಾಣಿಸಿಕೊಳ್ಳುತ್ತಿವೆ.

ತೈತ್ತಿರೀಯ ಬ್ರಾಹ್ಮಣವು ಮಾತ್ರ ಪ್ರತ್ಯೇಕವಾದ ಗ್ರಂಥವಾಗಿಯೇ ಉಳಿದು ವ್ಯವಹಾರದಲ್ಲಿ ಬಳಕೆಯಾಗುತ್ತಿದೆ. ಇದರಲ್ಲಿ ಮೂರು ಖಂಡಗಳಿದ್ದು ಇವೆಲ್ಲವೂ ಸಾಮಾನ್ಯವಾಗಿ ಮಂತ್ರಮಯವಾಗಿವೆ. ಪ್ರತಿಯೊಂದು ಖಂಡದಲ್ಲಿಯೂ ಎಂಟೆಂಟು ಪ್ರಶ್ನೆಗಳಿವೆ. ಆದ್ದರಿಂದ ಈ ಬ್ರಾಹ್ಮಣದ ಖಂಡಗಳಿಗೆ ಅಷ್ಟಕವೆಂದು ಕರೆಯುತ್ತಾರೆ. ಇದರಲ್ಲಿ ಒಟ್ಟು ೨೨೬ ಅನುವಾಕಗಳೂ, ೧೫೭೦ ಹನಸುಗಳೂ ಇರುತ್ತವೆ. ಇವನ್ನು ಸಾಮಾನ್ಯವಾಗಿ ಹತ್ತು ವಾಕ್ಯಗಳಿಗೆ ಒಂದು ಹನಸು ಮಾಡಿ ಓದುವ ಪದ್ಧತಿ ಇದೆ.

## ಶುಕ್ಲಯಜುರ್ವೇದ ಬ್ರಾಹ್ಮಣಗಳು

ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟಂತೆ ಶತಪಥ ಬ್ರಾಹ್ಮಣವು ಮಾತ್ರ ಈವರೆಗೆ ಉಪಲಬ್ಧವಾಗಿದೆ. ಇದರಲ್ಲಿ ೧೦೦ ಅಧ್ಯಾಯಗಳಿದ್ದು ನೂರು ದಿಕ್ಕು-ವಿಷಯ-ಗಳನ್ನು ವಿವರಿಸುವುದರಿಂದ ಇದಕ್ಕೆ ಶತಪಥ ಬ್ರಾಹ್ಮಣವೆಂಬ ಹೆಸರು ಸಾರ್ಥಕವಾಗಿ ಬಂದಿದೆ. ವೈದಿಕವಾಙ್ಮಯದಲ್ಲಿ ಋಗ್ವೇದದನಂತರ ಎರಡನೆಯ ಸ್ಥಾನವು ಶತಪಥ ಬಾಹ್ಮಣಕ್ಕೆ ದೊರೆಯುತ್ತದೆ. ಋಗ್ವೇದಕ್ಕೆ ಅಪೂರ್ವವಾದ ವಿಷಯಗಳನ್ನು ಹೇಳಿರುವ ದೃಷ್ಟಿಯಿಂದ, ವಿವಿಧ ವಿಷಯಗಳನ್ನು ತಿಳಿಸುವ ದೃಷ್ಟಿಯಿಂದ, ಗೌರವವನ್ನು ಕೊಡುವಂತೆ ಇಲ್ಲಿ ಹೇಳಿರುವ ವಿಷಯಗಳನ್ನು ಮಧುರವಾಗಿ, ವಿವರವಾಗಿ

ಸುಲಲಿತ ಪದಾವಳಿಗಳಿಂದ ಚಿತ್ರಿಸಿರುವ ದೃಷ್ಟಿಯಿಂದ ಇದಕ್ಕೆ ಎರಡ ನೆಯ ಗೌರವವು ದೊರೆಯುತ್ತದೆ. ಬ್ರಾಹ್ಮಣ ಗ್ರಂಥಗಳ ಸಮುದಾ ಯದಲ್ಲಿ ಋಗ್ವೇದ ಕೃಷ್ಣಯಜುಸ್ಸಾಮವೇದಗಳ ಬ್ರಾಹ್ಮಣ ಗಳಿಗಿಂತ ಇದೇ ಅತ್ಯಂತ ನವೀನವಾದುದೆಂದು ವಿಮರ್ಶಕರು ಹೇಳುತ್ತಾರೆ.

ಶತಪಥ ಬ್ರಾಹ್ಮಣವು ಸಹೃದಯರಿಗೆ ರಸದ ಊಟಗಳನ್ನು ಸತತವಾಗಿ ಬಡಿಸುವಂತಿದೆ. ಇದರಲ್ಲಿ ಅತ್ಯುತ್ತಮವಾದ ಅನೇಕ ಪ್ರಾಚೀನ ಆಖ್ಯಾಯಿಕೆ, ಉಪಾಖ್ಯಾನಗಳು ಅಡಕವಾಗಿವೆ. ಕೃಷ್ಣ ಯಜುರ್ವೇದದ ಬ್ರಾಹ್ಮಣವಲ್ಲಿ ಪ್ರತಿಪಾದಿಸಿರುವ ವಿಷಯಗಳನ್ನೇ ಇದ ರಲ್ಲಿ ಸ್ಪಷ್ಟವಾಗಿ, ವಿವರವಾಗಿ ವಿವರಿಸಲಾಗಿದೆ. ಇದರ ಭಾಷಾಶೈಲಿ ಯೂ ಸಹ ಅತ್ಯಂತ ಸರಳವಾಗಿದ್ದು ಅಷ್ಟೇ ಹೃದ್ಯವಾಗಿಯೂ ಇದೆ. ಇದರಲ್ಲಿ ಅನೇಕ ಗೋತ್ರಗಳ ಋಷಿಗಳ ವಂಶಾವಳಿಯ ಪಟ್ಟಿಯೂ ದೊರೆಯುತ್ತದೆ. ಋಷಿವಂಶಾವಳಿಯ ಮಧ್ಯದಲ್ಲಿ ಆಸುರಿ ಎಂಬ ಒಬ್ಬ ಆಚಾರ್ಯನ ಹೆಸರು ಬರುತ್ತದೆ. ಸಾಂಖ್ಯಮತ ಪ್ರವರ್ತಕಾಚಾರ್ಯನು ಆಸುರ್ಯಾಚಾರ್ಯರೆಂಬ ಸಾಂಪ್ರದಾಯಿಕವಾಗಿ ಪ್ರಸಿದ್ಧವಾದ ಪ್ರತೀತಿ ಯಿದೆ. ಇದರಲ್ಲಿ ಸಾಂಖ್ಯಮತದ ತತ್ವವಿಚಾರಗಳು ಸೂಕ್ಷ್ಮವಾಗಿ ಬರು ವುದರಿಂದ ಇದಕ್ಕಿಂತ ಪೂರ್ವದಲ್ಲಿ ಸಾಂಖ್ಯಮತವು ಪ್ರಸಿದ್ಧವಾಗಿದ್ದಿತೆಂದು ಹೇಳಲು ಅಡ್ಡಿ ಇಲ್ಲ. ಆದ್ದರಿಂದ ಇದರಲ್ಲಿ ಹೆಸರಿಸಿರುವ ಆಸುರ್ಯಾಚಾರ್ಯನೇ ಸಾಂಖ್ಯಮತದ ಪ್ರವರ್ತಕನೆಂಬ ಸಾಂಪ್ರದಾಯಿಕವಾದ ಸಿದ್ಧಾಂತಕ್ಕೆ ಪುಷ್ಟಿಯು ದೊರೆಯುತ್ತದೆ. ಮುಂದೆ ಸಾಂಖ್ಯಮತವು ಪ್ರಚಾರಕ್ಕೆ ಬರುವು ದಕ್ಕೆ ಮತ್ತು ವಿಸ್ತಾರವಾಗಿ ಬೆಳೆಯುವುದಕ್ಕೆ ಶತಪಥ ಬ್ರಾಹ್ಮಣವೇ ಆಧಾ ರವಾಗಿದ್ದು ಪ್ರಚೋದಿಸಿರಬೇಕೆಂದು ತೋರುತ್ತದೆ.

ಪುರಾಣಗಳಲ್ಲಿ ವರ್ಣಿತವಾದ ಅನೇಕ ಕಥೆಗಳಿಗೆ ಮೂಲವಸ್ತು ಗಳು ಇದರಲ್ಲಿ ವರ್ಣಿತವಾಗಿವೆ. ಮಹಾಭಾರತದಲ್ಲಿ ವರ್ಣಿತವಾಗಿರುವ ಊರ್ವಶಿ ಪುರೂರವರ ಕಥೆಯು ಇದರಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಸೂರ್ಯವಂಶದ ರಿಷ್ಟರಾಜನ ಮಗನಾದ ಜನಮೇಜಯರಾಜನ ಕಥೆಯೂ,

ವಿದೇಹಾಧಿಪತಿಯಾದ ಜನಕರಾಜನ ಕಥೆಯೂ ಸಹ ಇದರಲ್ಲಿ ಬಂದಿವೆ. ದುಷ್ಯಂತ ರಾಜನ ಕಥೆಯೂ, ನಳಚರಿತ್ರೆಯೂ ಸಹ ಇದರಲ್ಲಿ ವರ್ಣಿತವಾಗಿವೆ.

ಇವರಲ್ಲಿ ವಿಶ್ವೈಕತ್ವ ವಿಚಾರವನ್ನೂ ಸಹ ಉಲ್ಲೇಖಿಸಿದ್ದಾರೆ. ಇವರಲ್ಲಿ ಉಲ್ಲೇಖಿಸಿರುವ ತತ್ವವಿಚಾರ ಸರಣಿಯನ್ನು ನೋಡಿದರೆ ವಿಶ್ವೈಕತ್ವ ವಿಚಾರವನ್ನು ಒಂದು ನವೀನವಾದ ಅಭಿಪ್ರಾಯದಿಂದ ವಿಶಿಷ್ಟವಾದ ರೀತಿಯಲ್ಲಿ ವಿವೇಚನೆ ಮಾಡಿರುವರೆಂಬುದನ್ನು ಸಹಜವಾಗಿ ತಿಳಿಯುವಂತಿದೆ.

ಶತಪಥ ಬ್ರಾಹ್ಮಣದಲ್ಲಿ ಮಾಧ್ಯಂದಿನ, ಕಣ್ವ ಎಂಬ ಎರಡು ವಿಧವಾದ ಪಾಠಕ್ರಮವಿದೆ. ಈ ಪಾಠಕ್ರಮಗಳಲ್ಲಿ ಸಾಂಪ್ರದಾಯಿಕವಾದ ಎರಡು ಭೇದಗಳಿದ್ದರೂ ವಿಶೇಷವಾದ ಭೇದಗಳಿರುವುದು ಕಾಣುವುದಿಲ್ಲ. ಇದರಲ್ಲಿರುವ ನೂರು ಅಧ್ಯಾಯಗಳನ್ನು ಮಾಧ್ಯಂದಿನ ಪಾಠಕ್ರಮದಲ್ಲಿ ಹದಿನಾಲ್ಕು ಖಂಡಗಳಲ್ಲಿ ಅಡಕಮಾಡಲಾಗಿದೆ. ಇದನ್ನೇ ಕಣ್ವ ಪಾಠಕ್ರಮದಲ್ಲಿ ಹದಿನೇಳು ಖಂಡಗಳಲ್ಲಿ ಅಡಕವಾಗುವಂತೆ ವಿಭಾಗಮಾಡಿದ್ದಾರೆ.

## ಸಾಮ ಬ್ರಾಹ್ಮಣ

ಸಾಮ ವೇದಕ್ಕೆ ಸಂಬಂಧಪಟ್ಟ ಬ್ರಾಹ್ಮಣಗಳು ಏಳು ಇವೆಯೆಂದು ತಿಳಿದುಬಂದಿದೆ. ೧) ತಾಂಡ್ಯಾಯನ ಬ್ರಾಹ್ಮಣ ೨) ತಲವಕಾರಬ್ರಾಹ್ಮಣ ೩) ಛಾಂದೋಗ್ಯ ಬ್ರಾಹ್ಮಣ ೪) ಸಾಮವಿಧಾನ ಬ್ರಾಹ್ಮಣ ೫) ದೇವತಾಧ್ಯಾಯ ಬ್ರಾಹ್ಮಣ ೬) ವಂಶಬ್ರಾಹ್ಮಣ ೭) ಸಂಹಿತೋಪನಿಷದ್ಬ್ರಾಹ್ಮಣಗಳೆಂದು ಏಳು ಬ್ರಾಹ್ಮಣಗಳು ದೊರೆತಿವೆ. ಇವುಗಳಲ್ಲಿ ಪ್ರಧಾನವಾದವು ತಾಂಡ್ಯಾಯನ ಬ್ರಾಹ್ಮಣ ಮತ್ತು ತಲವಕಾರ ಬ್ರಾಹ್ಮಣಗಳು.

೧. **ತಾಂಡ್ಯಾಯನ ಬ್ರಾಹ್ಮಣ:—** ತಂಡಿ ಶಾಖೆಯ ಬ್ರಾಹ್ಮಣವನ್ನು ತಾಂಡ್ಯಾಯನ ಅಥವಾ ಪಂಚವಿಂಶ ಬ್ರಾಹ್ಮಣವೆಂದು ಕರೆಯುತ್ತಾರೆ. ಸಾಮ (ಗಾನ) ಪದ್ಧತಿಯನ್ನನುಸರಿಸಿ ಈ ಬ್ರಾಹ್ಮಣವನ್ನು ಇಪ್ಪತ್ತೈದು ಕಾಂಡಗಳಾಗಿ ವಿಭಾಗ ಮಾಡಿರುವುದರಿಂದ ಇದಕ್ಕೆ ಪಂಚವಿಂಶ ಬ್ರಾಹ್ಮಣವೆಂದು ಹೆಸರು ಬಂದಿದೆ. ಇದರಲ್ಲಿ ಸೋಮಯಾಗಕ್ಕೆ ಸಂಬಂಧಪಟ್ಟ ವಿಷಯಗಳನ್ನು ಹೆಚ್ಚಾಗಿ ವಿವರಿಸಿದ್ದಾರೆ.

**ಷಡ್ವಿಂಶ ಬ್ರಾಹ್ಮಣ:**— ತಾಂಡ್ಯಾಯನ ಶಾಖೆಗೆ ಸಂಬಂಧಪಟ್ಟ ಷಡ್ವಿಂಶ ಬ್ರಾಹ್ಮಣವೆಂಬ ಮತ್ತೊಂದು ಬ್ರಾಹ್ಮಣವಿದೆ. ಇದು ಹೆಸರಿನಿಂದ ಮಾತ್ರ ಅದಕ್ಕಿಂತ ಭಿನ್ನವಾಗಿದೆಯೇ ಹೊರತು ಮತ್ತಾವ ಪುನಸ್ಸೀಯುವಾದ ವಿಶೇಷ ಭೇದವೂ ಇವರಲ್ಲಿ ಕಾಣುವುದಿಲ್ಲ. ತಾಂಡ್ಯಾಯನ ಬ್ರಾಹ್ಮಣವನ್ನೇ ಮತ್ತೊಂದು ರೀತಿಯಿಂದ ಇಪ್ಪತ್ತಾರು ಖಂಡಗಳಾಗಿ ವಿಭಾಗಿಸಿದ್ದಾರೆ. ಇಪ್ಪತ್ತಾರು ಖಂಡಗಳಿರುವುದರಿಂದ ಇದಕ್ಕೆ ಷಡ್ವಿಂಶ ಬ್ರಾಹ್ಮಣವೆಂದು ಕರೆಯುವ ಪದ್ಧತಿಯೂ ಬಂದಿರಬೇಕೆಂದು ತೋರುತ್ತದೆ. ಇಪ್ಪತ್ತಾರು ಖಂಡಗಳನ್ನು ಆರು ಅಧ್ಯಾಯಗಳಲ್ಲಿ ಅಡಕ ಮಾಡಿದ್ದಾರೆ. ಅದರ ಕೊನೆಯ ಅಧ್ಯಾಯಕ್ಕೆ ಅದ್ಭುತ ಬ್ರಾಹ್ಮಣವೆಂದು ಹೆಸರು. ಈ ಅಧ್ಯಾಯದಲ್ಲಿ ದೇವತೆಗಳು ನಗುತ್ತಾ, ಅಳುತ್ತಾ, ಗಾನಮಾಡುತ್ತಾ, ಕುಣಿಯುತ್ತಾ, ಎಚ್ಚರತಪ್ಪಿ ಬೀಳುತ್ತಾ ಇರುವುದನ್ನೂ, ಇದಕ್ಕನುಸಾರವಾದ ಚೇಷ್ಟೆಗಳನ್ನು ಮಾಡುತ್ತಾ ಮಧುಮತ್ತರಾಗಿರುವುದನ್ನೂ ವರ್ಣಿಸಿದ್ದಾರೆ.



೨ **ತಲವಕಾರ ಬ್ರಾಹ್ಮಣ:**— ಇದರಲ್ಲಿ ಐದು ಖಂಡಗಳಿವೆ. ಅವುಗಳಲ್ಲಿ ಮೊದಲಿನ ಮೂರು ಖಂಡಗಳಲ್ಲಿ ವಿವಿಧವಾದ ಯಜ್ಞಕ್ರಿಯೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸಿದ್ದಾರೆ. ಇದರ ನಾಲ್ಕನೆಯ ಖಂಡದಲ್ಲಿ, ದಶೋಪನಿಷತ್ತುಗಳಲ್ಲಿ ಪ್ರಸಿದ್ಧವಾದ ಕೇನೋಪನಿಷತ್ತಿದೆ. ಅತ್ಯಂತ ಗಹನವಾದ ಪರಮಾತ್ಮನ ತತ್ವವಿಚಾರವು ಕೇನೋಪನಿಷತ್ತಿನಲ್ಲಿರುವುದರಿಂದ ಈ ಖಂಡಕ್ಕೆ ಉಪನಿಷತ್ಖಂಡವೆಂದು ಕರೆಯುತ್ತಾರೆ.

೩ **ಛಾಂದೋಗ್ಯ ಬ್ರಾಹ್ಮಣ:**— ಛಾಂದೋಗ್ಯವೆಂಬ ಮತ್ತೊಂದು ಬ್ರಾಹ್ಮಣವು ತಾಂಡ್ಯಾಯನ ಶಾಖೆಗೆ ಸಂಬಂಧಪಟ್ಟದ್ದಾಗಿದೆ. ಇದರ ಕೆಲವು ಭಾಗಗಳಲ್ಲಿ ಕರ್ಮಕಾಂಡಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸಿದ್ದಾರೆ. ದಶೋಪನಿಷತ್ತುಗಳಲ್ಲಿ ಪ್ರಸಿದ್ಧವಾದ ಛಾಂದೋಗ್ಯೋಪನಿಷತ್ತು ಛಾಂದೋಗ್ಯ ಬ್ರಾಹ್ಮಣದ ಕೊನೆಯಭಾಗವಾಗಿದೆ.

೪ **ಸಾಮವಿಧಾನ ಬ್ರಾಹ್ಮಣ:—** ಇದರಲ್ಲಿ ಸಾಮಗಾನದ ಪ್ರಕ್ರಿಯೆಗಳನ್ನೂ ಅವುಗಳ ಪ್ರಭೇದವನ್ನೂ ವರ್ಣಿಸಿದ್ದಾರೆ.

೫ **ದೇವತಾಧ್ಯಾಯ ಬ್ರಾಹ್ಮಣ:—** ಇದರಲ್ಲಿ ದೇವತೆಗಳ ನಾಮರೂಪ ಗುಣಕ್ರಿಯೆ ಮೊದಲಾದುವುಗಳನ್ನು ವರ್ಣಿಸಿದ್ದಾರೆ.

೬ **ವಂಶ ಬ್ರಾಹ್ಮಣ:—** ಇದರಲ್ಲಿ ಅನೇಕ ರಾಜರುಗಳ ಋಷಿಗಳ ವಂಶಾನುಕ್ರಮವನ್ನು ವಿವರಿಸಿದ್ದಾರೆ.

೭ **ಸಂಹಿತೋಪನಿಷದ್ಬ್ರಾಹ್ಮಣ:—** ಸಂಹಿತೆ ಮತ್ತು ಉಪನಿಷತ್ತುಗಳಿಗೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಇದರಲ್ಲಿ ವಿಂಗಡಿಸಿ ವಿವರಿಸಿದ್ದಾರೆ.

## ಅಥರ್ವಣ ವೇದ ಬ್ರಾಹ್ಮಣ

ಅಥರ್ವಣ ವೇದಕ್ಕೆ ಸಂಬಂಧಪಟ್ಟ ಬ್ರಾಹ್ಮಣವು "ಗೋಪಥ ಬ್ರಾಹ್ಮಣ" ವೆಂಬುದು. ಇದರಲ್ಲಿ ಹೊಸವಿಷಯಗಳು ಯಾವುದೂ ಕಾಣಬರುವುದಿಲ್ಲ. ಶತಪಥ, ತೈತ್ತೀರಿಯ, ಕೌಷೀತಕೀ ಬ್ರಾಹ್ಮಣಗಳಲ್ಲಿ ಮತ್ತು ಮೈತ್ರಾಯಣೀಯ ತೈತ್ತಿರೀಯ ಸಂಹಿತೆಗಳಲ್ಲಿ ಹೇಳಿರುವ ವಿಷಯಗಳನ್ನೇ ಮತ್ತೊಂದು ರೀತಿಯಿಂದ ಅಥವಾ ಹೊಸಭಾಷೆಯಿಂದ ಹೇಳಿದೆಯೆಂದು ಹೇಳಬಹುದು. ಇದರಲ್ಲಿ ಎರಡು ಖಂಡಗಳಿವೆ. ಮೊದಲನೆಯ ಖಂಡದಲ್ಲಿ ಐದು ಅಧ್ಯಾಯಗಳೂ, ಎರಡನೆಯ ಖಂಡದಲ್ಲಿ ಆರು ಅಧ್ಯಾಯಗಳೂ ಇರುತ್ತವೆ. "ಬ್ರಾಹ್ಮಣ ಗ್ರಂಥಗಳ ಸಮುದಾಯದಲ್ಲಿ ಅಥರ್ವಣ ಬ್ರಾಹ್ಮಣವೇ ಎಲ್ಲಕ್ಕಿಂತಲೂ ಆಧುನಿಕವಿರಬೇಕೆಂದು" ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.



# ೪. ಆರಣ್ಯಕಗಳು

ಶ್ರೀ



ಆರಣ್ಯಕಗಳೆಂದರೆ ಅಡವಿಗೆ ಸಂಬಂಧ ಪಟ್ಟದ್ದೆಂದು ಸಾಮಾನ್ಯವಾದ ಅರ್ಥವಾಗುತ್ತದೆ. ಇವುಗಳನ್ನು ಸಾಮಾನ್ಯವಾಗಿ ಮನೆಯೊಳಗೆ ಓದುವ ಪದ್ಧತಿ ಇಲ್ಲ, ಅಶ್ವತ್ಥ ವೃಕ್ಷಗಳ ಕೆಳಗೆ ಅಥವ ದೇವಸ್ಥಾನಗಳಲ್ಲಿ ಕುಳಿತು ಇವುಗಳ ಪಾರಾಯಣ ಮಾಡುವ ಪದ್ಧತಿಯನ್ನು ಇಂದೂ ಸಹ ನಾವು ಕಾಣಬಹುದು. ಇವುಗಳಲ್ಲಿ ವಾನಪ್ರಸ್ಥಾಶ್ರಮಕ್ಕೆ ಸಂಬಂಧಪಟ್ಟ ವಿಷಯಗಳನ್ನೇ ಹೆಚ್ಚಾಗಿ ವಿವರಿಸಿದ್ದಾರೆ. ಇದರಿಂದಲೇ ಇದಕ್ಕೆ ಆರಣ್ಯಕಗಳೆಂದು ಹೆಸರು ಬಂದಿರಬೇಕೆಂದು ತೋರುತ್ತದೆ. ಇವುಗಳ ಭಾಷಾಶೈಲಿಯು ಸಂಹಿತಾ ಬ್ರಾಹ್ಮಣ ಗ್ರಂಥಗಳ ಭಾಷೆಗಿಂತ ಲೌಕಿಕವಾಗಿದೆ. ಇವುಗಳಲ್ಲಿ 'ವೈದಿಕ ಶಬ್ದಗಳಿಗಿಂತ ಲೌಕಿಕ ಸಂಸ್ಕೃತ ಶಬ್ದಗಳು ವಿಫುಲವಾಗಿ ಉಪಯೋಗಿಸಲ್ಪಟ್ಟಿವೆ' ಎಂದು ಸಹಜವಾಗಿ ತಿಳಿಯುವಂತಿದೆ. ಈ ಆರಣ್ಯಕಗಳು ಪ್ರತಿಯೊಂದು ವೇದಗಳ ಪ್ರತಿಯೊಂದು ಶಾಖೆಗಳಿಗೂ ಪ್ರತ್ಯೇಕವಾಗಿವೆ. ಇವು ಆಯಾ ಶಾಖೆಗಳ ಬ್ರಾಹ್ಮಣ ಗಂಥಗಳ ಒಂದೊಂದು ಭಾಗವೆಂದು ಸಾಮಾನ್ಯವಾಗಿ ಹೇಳುವಂತಿವೆ.

ಋಗ್ವೇದಕ್ಕೆ ಸಂಬಂಧಪಟ್ಟ ಆರಣ್ಯಕಗಳು ಪ್ರಧಾನವಾಗಿ ಐತರೇಯ, ಕೌಷೀತಕೀ ಎಂಬ ಎರಡು ಗ್ರಂಥಗಳಿವೆ. ಐತರೇಯ ಬ್ರಾಹ್ಮಣಕ್ಕೆ ಸಂಬಂಧಪಟ್ಟಂತೆ ಇರುವುದು ಐತರೇಯ ಆರಣ್ಯಕ, ಇವರಲ್ಲಿ ಐದು ಕಾಂಡಗಳೂ ಹದಿನೆಂಟು ಅಧ್ಯಾಯಗಳೂ ಇವೆ. ಇದರೊಳಗೆ ಎರಡನೆಯ ಕಾಂಡದ ನಾಲ್ಕನೆಯ ಅಧ್ಯಾಯದಿಂದ ಏಳನೆಯ ಅಧ್ಯಾಯದವರೆಗಿನ ನಾಲ್ಕು ಅಧ್ಯಾಯಗಳು ಐತರೇಯೋಪನಿಷತ್ತು.

ಇನ್ನೊಂದು ಕೌಷೀತಕೀ ಆರಣ್ಯಕ. ಇದು ಕೌಷೀತಕೀ ಬ್ರಾಹ್ಮಣಕ್ಕೆ ಸಂಬಂಧಪಟ್ಟಿದೆ. ಇದರಲ್ಲಿ ಹದಿನೈದು ಅಧ್ಯಾಯಗಳಿವೆ. ಇದರೊಳಗಿನ ಮೂರನೆಯ ಅಧ್ಯಾಯದಿಂದ ಆರನೆಯ ಅಧ್ಯಾಯ ಪರ್ಯಂತ ನಾಲ್ಕು ಅಧ್ಯಾಯಗಳು ಕೌಷೀತಕ್ಯುಪನಿಷತ್ತೆಂದು ಪ್ರಸಿದ್ಧಿಯಾಗಿವೆ.

ಕೃಷ್ಣ ಯಜುರ್ವೇದದ ಆರಣ್ಯಕಗಳಲ್ಲಿ ತೈತ್ತಿರೀಯಶಾಖೆಗೆ ಸಂಬಂಧಪಟ್ಟ ಆರಣ್ಯಕವೇ ಮುಖ್ಯವಾದುದು. ಇದರಲ್ಲಿ ಹತ್ತು ಅಧ್ಯಾಯಗಳಿವೆ. ಇದರೊಳಗಿನ ಮೂರರಿಂದ ಏಳು ಅಧ್ಯಾಯಗಳು ತೈತ್ತಿರೀಯೋಪನಿಷತ್ತು. ಕೊನೆಯ ಅಧ್ಯಾಯವು ಮಹಾನಾರಾಯಣೋಪನಿಷತ್ತು. ಮಹಾನಾರಾಯಣೋಪನಿಷತ್ತನ್ನೇ ಯಾಜ್ಞವಲ್ಕ್ಯೋಪನಿಷತ್ತೆಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ.

ಶುಕ್ಲಯಜುರ್ವೇದದ ಆರಣ್ಯಕವು ಮಾಧ್ಯಂದಿನ ಶಾಖೆಗೆ ಸಂಬಂಧಪಟ್ಟದ್ದಾದುದರಿಂದ 'ಮಾಧ್ಯಂದಿನಾರಣ್ಯಕ' ವೆಂದು ಕರೆಯುತ್ತಾರೆ. ಇದು ಶತಪಥ ಬ್ರಾಹ್ಮಣದ ಕೊನೆಯ ಕಾಂಡವಾಗಿದೆ. ಇದರ ಕೊನೆಯ ಭಾಗದ ಆರು ಅಧ್ಯಾಯಗಳು ಬೃಹದಾರಣ್ಯಕೋಪನಿಷತ್ತೆಂಬುದು. ಇದು ದಶೋಪನಿಷತ್ತುಗಳಲ್ಲಿ ಒಂದಾಗಿ ಪ್ರಸಿದ್ಧವಾಗಿದೆ.

ಸಾಮವೇದದ ಆರಣ್ಯಕವು ತಂಡಿ ಶಾಖೆಗೆ ಸಂಬಂಧಪಟ್ಟಿದ್ದರಿಂದ ತಾಂಡ್ಯಾಯನ ಆರಣ್ಯಕವೆಂದು ಕರೆಯುತ್ತಾರೆ. ಸಾಮವೇದಕ್ಕೆ ಸಂಬಂಧಪಟ್ಟ ಆರಣ್ಯಕಗಳು ಮತ್ತೆ ಕೆಲವು ಇರುವುವಾದರೂ ತಾಂಡ್ಯಾಯನ ಆರಣ್ಯಕವೇ ಮುಖ್ಯವಾದುದು.

ಅಥರ್ವಣ ವೇದದ ಆರಣ್ಯಕವು ಶೌನಕ ಶಾಖೆಗೆ ಸಂಬಂಧಪಟ್ಟ ಗೋಪಥಆರಣ್ಯಕವು. ಇದನ್ನು ಶೌನಕ ಆರಣ್ಯಕವೆಂದೂ ಕರೆಯುವರು.



# ೫. ಉಪನಿಷತ್ತುಗಳು



"ಮಾನವನ ಬಾಳಿಗೆ ಮೋಕ್ಷವೇ ಅತ್ಯಂತ ಕೊನೆಯಗುರಿಯು. ಈ ಗುರಿಯನ್ನು ಸಾಧಿಸುವುದಕ್ಕೆ ಕರ್ಮ, ಭಕ್ತಿ, ಜ್ಞಾನಮಾರ್ಗಗಳೆಂದು ಮೂರು ದಾರಿಗಳಿವೆ" ಎಂದು ನಮ್ಮ ಪ್ರಾಚೀನರು ಸ್ವಾನುಭವದಿಂದ ಕಂಡು ಹಿಡಿದಿದ್ದಾರೆ. ಇವುಗಳಲ್ಲಿ ಯಾವುದಾದರೊಂದು ಹಾದಿಯಿಂದಲಾದರೂ ಸ್ವಸ್ವರೂಪ-ಪರಮಾತ್ಮಸ್ವರೂಪಗಳ ಸಮ್ಯಕ್‌ಜ್ಞಾನದಿಂದ ಜನನಮರಣರೂಪವಾದ ಬಂಧನದಿಂದ ಮತ್ತು ಈ ಬಂಧನದಿಂದ ಸಂಭವಿಸಬಹುದಾದ ಕಷ್ಟಕಾರ್ಪಣ್ಯಗಳಿಂದ ಮೋಕ್ಷವನ್ನು [ಬಿಡುಗಡೆ-ತಿರುಗಿ ಯಾವಾಗಲೂ ಅಂತಹ ಬಂಧನಕ್ಕೆ ಸಿಲುಕದಂತಹ ಕೊನೆಯ ಬಿಡುಗಡೆಯನ್ನು] ಪಡೆಯುತ್ತಾನೆ. ಇಂತಹ ಬಿಡುಗಡೆಯನ್ನು ಹೊಂದುವುದಕ್ಕೆ ಕಾರಣವಾದ ಜ್ಞಾನಕ್ಕೆ "ಬ್ರಹ್ಮವಿದ್ಯೆ" ಎಂದು ಹೆಸರು. ಈ ಬ್ರಹ್ಮವಿದ್ಯೆಯನ್ನೇ ಉಪನಿಷತ್ ಎಂದು ಕರೆಯುತ್ತಾರೆ. ಉಪನಿಷತ್ ಎಂಬ ಪದವು ಉಪ, ನಿ-ಎಂಬ ಎರಡು ಉಪಸರ್ಗಗಳಿಂದ ಕೂಡಿದ 'ಷದ್' ಧಾತುವಿನಿಂದ ನಿಷ್ಪನ್ನವಾಗಿದೆ. 'ಷದ್' ಧಾತುವಿಗೆ ವಿಶರಣ, ಗತಿ, ಅವಸಾದನಗಳೆಂದು ಮೂರು ಅರ್ಥಗಳಿವೆ ಎಂದು [ಷದಲೃ - ವಿಶರಣಗತ್ಯವಸಾದನೇಷು] ಪ್ರಾಚೀನ ಶಬ್ದಶಾಸ್ತ್ರಜ್ಞರು ಹೇಳಿದ್ದಾರೆ. ವಿಶರಣವೆಂದರೆ ವಿನಾಶ (ಅವಿದ್ಯಾನಾಶ), ಗತಿ ಎಂದರೆ ಪ್ರಾಪ್ತಿ (ಬ್ರಹ್ಮಾವಾಪ್ತಿ). ಅವಸಾದನವೆಂದರೆ ಶಿಥಿಲೀಕರಣ (ಬಂಧವಿಮೋಚನೆ) ಎಂದು ಅರ್ಥಮಾಡಿಕೊಂಡಿದ್ದಾರೆ. ಅಂದರೆ ಬ್ರಹ್ಮವಿದ್ಯೆಯನ್ನು ಪಡೆ

ಪ್ರಾಚೀನಮತಾಚಾರ್ಯರೆಲ್ಲರೂ ಒಪ್ಪಿಕೊಂಡಿದ್ದಾರೆ.

ಈ ಉಪನಿಷತ್ತುಗಳು ವೇದಗಳ ಕೊನೆಯ ಭಾಗವಾದುದರಿಂದಲೂ ವೇದಗಳಲ್ಲಿ ಪ್ರತಿಪಾದಿತವಾದ ವಿಷಯಗಳಲ್ಲಿ ಕೊನೆಯ ಸಿದ್ಧಾಂತವಾದ ವಿಷಯಗಳನ್ನು ಪ್ರತಿಪಾದಿಸುವುದರಿಂದಲೂ ಉಪನಿಷದ್ಗ್ರಂಥಗಳನ್ನು "ವೇದಾಂತ ಗ್ರಂಥಗಳೆಂದು" ಕರೆಯುತ್ತಾರೆ

ನಿರ್ಣಯ ಸಾಗರದ ಮುದ್ರಣಾಲಯದಲ್ಲಿ ಪ್ರಕಟವಾದ "ಅಷ್ಟೋತ್ತರ ಶತೋಪನಿಷದಃ" ಎಂಬ ಪುಸ್ತಕದ ಕೊನೆಯಲ್ಲಿ "ಮುಕ್ತಿಕೋಪನಿಷತ್" ಎಂಬ ಒಂದು ಉಪನಿಷತ್ತು ಇದೆ. ಅದರಲ್ಲಿ ಉಪನಿಷತ್ತುಗಳ ಬಗ್ಗೆ ಶ್ರೀ ರಾಮಚಂದ್ರನು ತನ್ನ ಪರಮ ಭಕ್ತನಾದ ಮಾರುತಿಗೆ ಹೇಳಿದನೆಂದು ಹೇಳಿದ ಕೆಲವು ವಿಷಯಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ. ಅದರಲ್ಲಿ "ವೇದಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳೆಂದು ನಾಲ್ಕು ಇವೆ. ಒಂದೊಂದು ವೇದಕ್ಕೂ ಅನೇಕ ಶಾಖೆಗಳಿವೆ. ಅವುಗಳಲ್ಲಿ ಋಗ್ವೇದಕ್ಕೆ ೨೧ ಶಾಖೆಗಳೂ, ಯಜುರ್ವೇದಕ್ಕೆ ೧೦೯ ಶಾಖೆಗಳೂ, ಸಾಮವೇದಕ್ಕೆ ೧೦೦೦ ಶಾಖೆಗಳೂ, ಅಥರ್ವಣವೇದಕ್ಕೆ ೫೦ ಶಾಖೆಗಳೂ ಇವೆ. ನಾಲ್ಕು ವೇದಗಳ ಒಟ್ಟು ಶಾಖೆಗಳು ೧೧೮೦ ಇದ್ದು ಪ್ರತಿಯೊಂದು ಶಾಖೆಗೆ ಒಂದೊಂದು ಉಪನಿಷತ್ತಿನಂತೆ ಉಪನಿಷತ್ತುಗಳೂ ಸಹ ೧೧೮೦ ಇವೆ. ಮನುಷ್ಯನಿಗೆ ಚರಮ ಗುರಿಯು ಕೈವಲ್ಯ ಮುಕ್ತಿಯನ್ನು ಪಡೆಯುವುದಾಗಿದೆ. ಅದನ್ನು ಪಡೆಯಲು ಸರಿಯಾದ ಅಧಿಕಾರಿಯಾಗಿದ್ದರೆ, ಅವನಿಗೆ ಮಾಂಡೂಕ್ಯೋಪನಿಷತ್ತು ಒಂದೇ ಒದಗಿಸಿ ಕೊಡಲು ಸಮರ್ಥವಿದೆ. ಇದೊಂದರಿಂದ ಸಿದ್ಧಿಯಾಗದಿದ್ದರೆ ದಶೋಪನಿಷತ್ತುಗಳನ್ನು ಅಭ್ಯಾಸ ಮಾಡಬೇಕು. ಅದರಿಂದಲೂ ಆಗದಿದ್ದರೆ, ಅಷ್ಟೋತ್ತರಶತೋಪನಿಷತ್ತುಗಳನ್ನು (೧೦೮) ಅಭ್ಯಸಿಸಬೇಕು. ಇವುಗಳನ್ನು ಸರಿಯಾಗಿ ಅಭ್ಯಾಸ ಮಾಡಿದರೆ, ವಿದೇಹ ಮುಕ್ತಿಯನ್ನು (ಸಾಯುಜ್ಯ ಮುಕ್ತಿಯನ್ನು ವಿದೇಹ, ಕೈವಲ್ಯಗಳೆಂಬ ಮತ್ತೆರಡು ಹೆಸರುಗಳಿಂದ ಕರೆಯುತ್ತಾರೆ) ಪಡೆಯುತ್ತಾನೆ. ಎಲ್ಲಾ ಉಪನಿಷತ್ತುಗಳ ಸಾರಭೂತವಾಗಿ ಈ ಅಷ್ಟೋತ್ತರ ಶತೋಪನಿಷತ್ತುಗಳಿವೆ.." ಎಂದು ವಿವರಿಸಿದೆ.

ಈ ಅಷ್ಟೋತ್ತರಶತೋಪನಿಷತ್ತುಗಳಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಉಪನಿಷತ್ತುಗಳು ಹತ್ತು, ಕೃಷ್ಣಯಜುರ್ವೇದದ ಉಪನಿಷತ್ತುಗಳು ಮೂವತ್ತೆರಡು, ಶುಕ್ಲಯಜುರ್ವೇದದ ಉಪನಿಷತ್ತುಗಳು ಹತ್ತೊಂಭತ್ತು, (ಒಟ್ಟು ಯಜುರ್ವೇದದ ಉಪನಿಷತ್ತುಗಳು ಐವತ್ತೊಂದು.) ಇವೆ. ಸಾಮವೇದೀಯ ಉಪನಿಷತ್ತುಗಳು ಹದಿನಾರು. ಅಥರ್ವಣ ವೇದಕ್ಕೆ ಸಂಬಂಧಪಟ್ಟ ಉಪನಿಷತ್ತುಗಳು ಮೂವತ್ತೊಂದು. ಹೀಗೆ ನೂರಾಎಂಟು ಉಪನಿಷತ್ತುಗಳನ್ನು ಸರ್ವೋಪನಿಷತ್ತುಗಳ ಸಾರವೆಂದು ಶ್ರೀರಾಮನು ಹನುಮಂತನಿಗೆ ಉಪದೇಶ ಮಾಡಿದನೆಂದು ಮುಕ್ತಿಕೋಪನಿಷತ್ತಿನಲ್ಲಿ ಹೇಳಿದೆ.

ಮೇಲಿನ ಅಷ್ಟೋತ್ತರ ಶತೋಪನಿಷತ್ತುಗಳಲ್ಲಿ ಹನ್ನೊಂದು ಉಪನಿಷತ್ತುಗಳು ಅತ್ಯಂತ ಪ್ರಸಿದ್ಧವಾಗಿವೆ. ೧) ಈಶ, ೨) ಕೇನ, ೩) ಕಠ, ೪) ಪ್ರಶ್ನ, ೫) ಮುಂಡಕ, ೬) ಮಾಂಡೂಕ್ಯ, ೭) ತೈತ್ತಿರೀಯ ೮) ಐತರೇಯ, ೯) ಛಾಂದೋಗ್ಯ, ೧೦) ಬೃಹದ ರಣ್ಯಕ, ೧೧) ಶ್ವೇತಾಶ್ವತರಗಳೆಂದು, ಇವುಗಳಿಗೆ ಎಲ್ಲಾ ವೇದಾಂತಾಚಾರ್ಯರುಗಳೂ ತಮ್ಮ ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟೀಕರಿಸಿ ಭಾಷ್ಯಗಳಲ್ಲಿ ತಮ್ಮ ತಮ್ಮ ಮತಗಳನ್ನು ಪ್ರತಿಪಾದಿಸಿದ್ದಾರೆ. ಇವುಗಳಲ್ಲಿ ಕೊನೆಯದಾದ ಶ್ವೇತಾಶ್ವತರೋಪನಿಷತ್ತು ಒಂದನ್ನು ಬಿಟ್ಟು ಮೊದಲಿನ ಹತ್ತು ಉಪನಿಷತ್ತುಗಳಿಗೆ "ದಶೋಪನಿಷತ್ತು" ಗಳೆಂದು ವ್ಯವಹಾರವಿದೆ. ಇಂದಿನ ವೇದಾಂತಾಭ್ಯಾಸಕ್ರಮದಲ್ಲಿ ಪ್ರಸ್ಥಾನ ತ್ರಯ ಪಾಠಪ್ರವಚನಗಳು ನಡೆಯುತ್ತವೆ. ಆ ಪ್ರಸ್ಥಾನ ತ್ರಯದಲ್ಲಿ ಸೂತ್ರಭಾಷ್ಯ, ಗೀತಾಭಾಷ್ಯಗಳೊಂದಿಗೆ ಈ ದಶೋಪನಿಷತ್ತುಗಳ ಪಾಠವೂ ನಡೆದರೆ ಪ್ರಸ್ಥಾನತ್ರಯ ಪಾಠವಾಯಿತೆಂದೂ, ಓದುವವರಿಗೆ ವೇದಾಂತದ ಸರಿಯಾದ ದಿಗ್ದರ್ಶನವಾಯಿತೆಂದೂ ತಿಳಿಯುತ್ತಾರೆ.

ಇದಲ್ಲದೆ ಮದರಾಸಿನ ಅಡಿಯಾರ್ ಲೈಬ್ರರಿಯವರು ಮುದ್ರಿಸಿರುವ ಉಪನಿಷತ್ತುಗಳ ಸಂಗ್ರಹದಲ್ಲಿ ೧೭೯ ಉಪನಿಷತ್ತುಗಳನ್ನು ಪ್ರಕಟಿಸಿದ್ದಾರೆ. ಬೊಂಬಾಯಿಯಲ್ಲಿರುವ ಗುಜರಾಥಿ ಪ್ರಕಟನಾಲಯದವರು "ಉಪನಿಷದಾಂ ವಾಕ್ಯ ಮಹಾಕೋಶ" ಎಂಬ ಪುಸ್ತಕದಲ್ಲಿ ೨೨೩ ಉಪನಿಷತ್ತುಗಳ ನಾಮಾವಳಿಯನ್ನು ಕೊಟ್ಟಿದ್ದಾರೆ. ಇವುಗಳಲ್ಲಿ ಉಪನಿಷತ್

ಸ್ತುತಿ ಮತ್ತು ದೇವ್ಯುಪನಿಷತ್ತುಗಳೆಂಬ ಎರಡು ಗ್ರಂಥಗಳು ದೊರೆತಿಲ್ಲವಾದರೂ ಅವುಗಳ ಹೆಸರುಗಳು ಶಿವರಹಸ್ಯ ಎಂಬ ಗ್ರಂಥದಲ್ಲಿ ಕಂಡುಬರುತ್ತವೆ. ಉಳಿದ ೨೨೧ ಉಪನಿಷತ್ತುಗಳ ಕೆಲಕೆಲವು ಉತ್ತಮವಾಕ್ಯಗಳನ್ನು ಉಪನಿಷದ್ವಾಕ್ಯಮಹಾಕೋಶದಲ್ಲಿ ಸಂಗ್ರಹಿಸಿದ್ದಾರೆ. ಆದರೆ ಇವರಲ್ಲಿ ಮಾಂಡೂಕ್ಯಕಾರಿಕೆಯ ನಾಲ್ಕು ಕಾಂಡಗಳ ವಾಕ್ಯಗಳನ್ನು ಪ್ರತ್ಯೇಕವಾಗಿ ಅಚ್ಚುಮಾಡಿ, ಅದರ ಹೆಸರನ್ನು ನಾಲ್ಕುಸಲ ಹಾಕಿದ್ದಾರೆ. ಇವು ನಾಲ್ಕನ್ನು ಸೇರಿಸಿ ಒಂದು ಎಂದು ಇಟ್ಟುಕೊಂಡರೆ ೨೧೮ ಉಪನಿಷತ್ತುಗಳಾಗುತ್ತವೆ. ಹಾಗೆಯೆ ಒಂದೇ ಹೆಸರಿನ ಎರಡು ಉಪನಿಷತ್ತುಗಳನ್ನು ಒಂದೇ ಸಂಖ್ಯೆಯಿಂದ ಮುದ್ರಿಸಿದ್ದಾರೆ. ಇವು ಪ್ರತ್ಯೇಕವಾದ ಗ್ರಂಥಗಳಾಗಿರುವುದರಿಂದ ಇವೆರಡನ್ನೂ ಸೇರಿಸಿದರೆ ಈ ವರೆಗೆ ಪ್ರಕಟವಾದ ಒಟ್ಟು ಉಪನಿಷತ್ತುಗಳು ೨೨೦ ಇರಬಹುದೆಂದು ಸಾಮಾನ್ಯವಾಗಿ ಹೇಳಬಹುದು. ಈವರೆಗೆ ಒಟ್ಟು ಪ್ರಕಟವಾದ ಉಪನಿಷತ್ತುಗಳ ಅಕಾರಾದಿ ಪಟ್ಟಿಯನ್ನು ಈ ಪುಸ್ತಕದ ಕೊನೆಗೆ ಪರಿಶಿಷ್ಟದಲ್ಲಿ ಕೊಟ್ಟಿದೆ.

ಉಪನಿಷತ್ತುಗಳ ರಚನಾಶೈಲಿ ಮತ್ತು ರೀತಿಗಳಲ್ಲಿ ಕೆಲವು ಭೇದಗಳು ಕಂಡುಬರುವಂತಿವೆ. ಇವುಗಳಲ್ಲಿ ಕೆಲವು ಕೇವಲ ಪದ್ಯಾತ್ಮಕವಾಗಿಯೂ, ಮತ್ತೆ ಕೆಲವು ಕೇವಲ ಗದ್ಯಾತ್ಮಕವಾಗಿಯೂ, ಇನ್ನು ಕೆಲವು ಗದ್ಯ ಪದ್ಯ ಮಿಶ್ರವಾಗಿಯೂ ಇವೆ. ಇವುಗಳ ರಚನಾ ಕಾಲದ ಬಗ್ಗೆ ಹಲವು ಜನ ವಿಮರ್ಶಕ ಪಂಡಿತರು ತಮಗೆ ತೋರಿದಂತೆ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇವುಗಳ ಕಾಲವು ಇದೇ ಎಂದು ಖಚಿತವಾಗಿ ನಿರ್ಣಯವಾಗಿರದಿದ್ದರೂ ಇವುಗಳಲ್ಲಿ ಹಲವು ಉಪನಿಷತ್ತುಗಳು ಬುದ್ಧಕಾಲಕ್ಕಿಂತ (ಕ್ರಿ. ಪೂ. ೫ ನೇ ಶತಮಾನ) ಅನೇಕ ಶತಮಾನಗಳ ಪೂರ್ವದಲ್ಲಿಯೇ ಬಳಕೆಯಲ್ಲಿದ್ದವೆಂಬುದು ನಿರ್ವಿವಾದವಾದ ವಿಷಯವಾಗಿದೆ.

ಉಪನಿಷತ್ತುಗಳ ಕಾಲಕ್ರಮವನ್ನು ಆಧುನಿಕವಿಮರ್ಶಕರು ನಾಲ್ಕೈದು ತರಹ ಭಾಗ ಮಾಡಿದ್ದಾರೆ

೧. ಉಪನಿಷತ್ತುಗಳಲ್ಲಿ ಬೃಹದಾರಣ್ಯಕ, ಛಾಂದೋಗ್ಯ, ತೈತ್ತಿರೀಯ, ಐತರೇಯ, ಕೌಷೀತಕೀ ಇವೈದು ಗ್ರಂಥಗಳು, ಉಪನಿಷದ್ಗ್ರಂಥಗಳ

ಸಮುದಾಯದಲ್ಲಿ ಅತ್ಯಂತ ಪ್ರಾಚೀನವಾದವುಗಳು. ಇವೆಲ್ಲವೂ ಸಾಮಾನ್ಯವಾಗಿ ಬ್ರಾಹ್ಮಣ ಗ್ರಂಥಗಳ ಭಾಷೆಯನ್ನೇ ಹೋಲುತ್ತವೆ, ಮತ್ತು ಒಂದು ವಿಜಾತೀಯವಾದ ಗದ್ಯ ಗ್ರಂಥಗಳಿಗೆ ಹೊಂದುವಂತಹ ಭಾಷಾಶೈಲಿಯನ್ನು ಹೊಂದಿಕೊಂಡಿವೆ.

೨. ಎರಡನೇ ಕಾಲದಲ್ಲಿ ಕೇನೋಪನಿಷತ್ತು ಆವಿರ್ಭವಿಸಿದೆ. ಇದರೊಳಗೆ ಕೆಲವು ಭಾಗ ಮಾತ್ರ ಪದ್ಯಮಯವಾಗಿವೆ.

೩. ಮೂರನೆಯ ಕಾಲದಲ್ಲಿ ಕವಿತಾ ಸೌಂದರ್ಯದಿಂದ ಸಹೃದಯಿಗಳ ಅಂತಃಕರಣಗಳನ್ನು ಸೂರೆಗೊಳ್ಳುವ ಪದ್ಯಮಯವಾದ ಕಾಠಕ, ಶ್ವೇತಾಶ್ವತರ, ಮುಂಡಕ, ಮಹಾನಾರಾಯಣೋಪನಿಷತ್ತುಗಳು ಆವಿರ್ಭವಿಸಿದವು.

೪. ಅನಂತರದ ಕಾಲದಲ್ಲಿ ಗದ್ಯ ಮಯವಾದ ಪ್ರಶ್ನ, ಮೈತ್ರಾಯಣೀಯ ಮಾಂಡೂಕ್ಯೋಪನಿಷತ್ತುಗಳು ಪ್ರಕಾಶಕ್ಕೆ ಬಂದವು.

೫. ಎಲ್ಲಕ್ಕಿಂತಲೂ ಕೊನೆಗೆ ನವೀನವಾದ ಅಥರ್ವಣ ವೇದಕ್ಕೆ ಸಂಬಂಧಿಸಿದ ಗದ್ಯ ಪದ್ಯ ಮಿಶ್ರವಾದ ಉಪನಿಷತ್ತುಗಳು ಆವಿರ್ಭವಿಸಿರಬೇಕೆಂದು ಕೆಲವು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.

ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ವಿಷಯಗಳ ದೃಷ್ಟಿಯಿಂದ ಇವುಗಳನ್ನು ಇನ್ನೊಂದು ತರಹ ವಿಭಾಗಮಾಡಿ ತಾತ್ವಿಕೋಪನಿಷತ್ತುಗಳು, ಯೌಗಿಕೋಪನಿಷತ್ತುಗಳು, ಔಪಾಸನಿಕೋಪನಿಷತ್ತುಗಳು ಎಂದು ಮೂರು ವಿಧವಾಗಿ ಹೆಸರಿಸಿ ಕರೆಯಬಹುದು.

೧) ತಾತ್ವಿಕೋಪನಿಷತ್ತುಗಳಲ್ಲಿ ವೇದಾಂತಕ್ಕೆ ಸಂಬಂಧಪಟ್ಟ ಜೀವ, ಈಶ್ವರ ಮತ್ತು ಜಗತ್ತು ಇವುಗಳ ಸ್ವರೂಪ ಮತ್ತು ಇವುಗಳ ಪರಸ್ಪರ ಸಂಬಂಧಾದಿಗಳನ್ನು ವಿವರಿಸಿದ್ದಾರೆ.

೨) ಯೌಗಿಕೋಪನಿಷತ್ತುಗಳಲ್ಲಿ ಯೋಗಶಾಸ್ತ್ರಕ್ಕೆ ಸಂಬಂಧಪಟ್ಟ ಇಂದ್ರಿಯನಿಗ್ರಹ, ಪ್ರಾಣಾಯಾಮ, ಧ್ಯಾನ ಮತ್ತು ಇವುಗಳ ಪ್ರಯೋಜನವೇ ಮೊದಲಾದ ವಿಷಯಗಳನ್ನು ವಿವರಿಸಿದ್ದಾರೆ.

೩) ಔಪಾಸನಿಕೋಪನಿಷತ್ತುಗಳಲ್ಲಿ ಬ್ರಹ್ಮ, ವಿಷ್ಣು, ಶಿವ ಮತ್ತು ಶಕ್ತಿ ಮೊದಲಾದ ದೇವತೆಗಳ ಉಪಾಸನೆಯ ಕ್ರಮವನ್ನೂ ಮತ್ತು ಮಹತ್ವವನ್ನು ವರ್ಣಿಸಿದ್ದಾರೆ. ಒಟ್ಟು ಉಪನಿಷತ್ತುಗಳಲ್ಲಿ ದೇವತೋಪಾಸನೆಗೆ ಸಂಬಂಧಪಟ್ಟ ಉಪನಿಷತ್ತುಗಳೇ ಹೆಚ್ಚಾಗಿವೆಯೆಂದು ಹೇಳಬಹುದು.

ವೈದಿಕ ವಾಙ್ಮಯದಲ್ಲಿ ಉಪನಿಷತ್ತುಗಳಿಗೆ ಅತ್ಯಂತ ಶ್ರೇಷ್ಠವಾದ ಸ್ಥಾನವಿದೆ. ಇವು ಭಾರತೀಯರ ಆಧ್ಯಾತ್ಮಿಕ ಶಾಸ್ತ್ರಗಳಲ್ಲಿ ದೇದೀಪ್ಯಮಾನವಾದ ರತ್ನಗಳಂತಿವೆ. ಇವುಗಳ ಮೇಲೆ ಕಾಲಕೃತವಾದ ಪ್ರಭಾವವು ಎಲ್ಲಿಯೂ ಬಿದ್ದಿರುವುದಿಲ್ಲ. ಇವುಗಳನ್ನು ಸೂಕ್ಷ್ಮವಾಗಿ, ಆಳವಾಗಿ ಅಭ್ಯಾಸ ಮಾಡುತ್ತಾ ಹೋದಂತೆ ಇವುಗಳಲ್ಲಿರುವ ಅಮೂಲ್ಯವಾದ ತತ್ವದ ತಿರುಳು ತಿಳಿಯುತ್ತಾ ಬರುತ್ತದೆ. ಭಾರತದ ಪ್ರಾಚೀನ ಋಷಿಗಳು ತಮ್ಮ ಅಂತಶ್ಚಕ್ಷುವಿಗೆ ಗೋಚರವಾದ ಆಧ್ಯಾತ್ಮಿಕ ತತ್ವ ಭಂಡಾರಗಳಿಗೆ ಪ್ರತಿರೂಪಕೊಟ್ಟು ಉಪನಿಷತ್ತುಗಳಲ್ಲಿ ಎರಕ ಹೊಯ್ದಿದ್ದಾರೆ. ಭಾರತೀಯ ಸಂಸ್ಕೃತಿಯ ಆಧ್ಯಾತ್ಮಿಕ ತೇಜಸ್ಸನ್ನು ಜಗತ್ತಿನ ಮೂಲೆ ಮೂಲೆಗಳಲ್ಲಿ ಹರಡುವ ಕೀರ್ತಿಯು, ಉಪದೇಶ ಮಾಡುವ ಗುರುಸ್ಥಾನವು, ಮೊದಲನೆಯದಾಗಿ ಉಪನಿಷತ್ತುಗಳಿಗೆ ಸಲ್ಲುತ್ತದೆ. ಇಂದಿಗೆ ಕೆಲವು ಶತಮಾನಗಳ ಪೂರ್ವದಲ್ಲಿಯೇ ಭಾರತೀಯ ಸಾಹಿತ್ಯ ಸಂಸ್ಕೃತಿಗಳ ಪರಿಶೀಲನೆ ಮಾಡುವುದಕ್ಕೆ ಅವಕಾಶವನ್ನು ಪಡೆದ ಹೊರದೇಶದ ವಿದ್ವಾಂಸರು ಈ ಉಪನಿಷತ್ತುಗಳನ್ನು ಬಹುಮುಖವಾಗಿ ಕೊಂಡಾಡಿದ್ದಾರೆ. ಕ್ರಿ.ಶ. ೧೭ ನೇ ಶತಮಾನದಲ್ಲಿ ಪಾರಸೀದೇಶದ ವಿದ್ವಾಂಸನಾದ "ದಾರಾಶಿಕೋಹ್" ಎಂಬುವನು ಪಾರಸೀ ಭಾಷೆಯಲ್ಲಿ ೫೦ ಉಪನಿಷತ್ತುಗಳನ್ನು ಅನುವಾದಿಸಿರುವನು. ಫ್ರೆಂಚ್ ದೇಶದ ಪಂಡಿತನಾದ 'ಅಕೇತ್ವಿಲ್ ದೂಪೇರ್' ಎಂಬುವನು ಫಾರಸೀ ಭಾಷೆಯಲ್ಲಿರುವ ಮೇಲಿನ ಉಪನಿಷತ್ತುಗಳನ್ನು ಲ್ಯಾಟಿನ್ ಭಾಷೆಗೆ ತರ್ಜುಮೆ ಮಾಡಿದನು. ಈ ಭಾಷಾಂತರವಾದರೋ ತಪ್ಪುತಿಳುವಳಿಕೆಯಿಂದ ಬರೆದ ಅಪೂರ್ಣವಾದ ಅಶುದ್ಧ ಕ್ರಮದಲ್ಲಿದೆ. ಇಂತಹ ಅಪೂರ್ಣ ಅಶುದ್ಧ ಭಾಷಾಂತರವನ್ನು ನೋಡಿಯೇ ಜರ್ಮನೀದೇಶದ ದಾರ್ಶನಿಕನಾದ 'ಶೋಪನ್ ಹೋವರ್' ಎಂಬುವನು "ಉಪನಿಷತ್ತುಗಳು ಮಾನವನ ಬುದ್ಧಿಮತ್ತೆಯ ಸರ್ವಶ್ರೇಷ್ಠವಾದ ಪರಿ

ಪೂರ್ಣ ಗ್ರಂಥಗಳು. ಇವುಗಳನ್ನು ಓದಿ ನನ್ನ ಜೀವನದಲ್ಲಿ ನಿಜವಾದ ಶಾಂತಿಯನ್ನು ಪಡೆದೆನು" ಎಂದು ಹೇಳಿರುವನು. ಆದ್ದರಿಂದಲೇ ಈ ಜರ್ಮನೀ ಪಂಡಿತನು ಪಾಶ್ಚಾತ್ಯ ದೇಶಗಳ ತತ್ವಜ್ಞಾನಿಗಳಾದ ಪ್ಲೇಟೋ, ಕ್ಯಾಂಟರ್ ಇವರ ಜೊತೆಗೆ ಉಪನಿಷತ್ತುಗಳಿಗೂ ಶ್ರೇಷ್ಠವಾದ ಸ್ಥಾನವನ್ನು ಕೊಟ್ಟಿದ್ದಾನೆ. ಇವು ಮೂರನ್ನು ಪ್ರಪಂಚದ ಗುರುಗಳೆಂದು ಅವನು ಕರೆದಿದ್ದಾನೆ. ಇಂದು ಉಪನಿಷತ್ತುಗಳ ಪ್ರಭಾವವು, ತತ್ವವು ಹೊರದೇಶಗಳಲ್ಲಿ, ಅದರಲ್ಲೂ ಪಾಶ್ಚಿಮಾತ್ಯ ದೇಶಗಳಲ್ಲಿ ಬಹುಮುಖವಾಗಿ ಎದ್ದು ಹರಡಿವೆ. ಇಂದು ಪ್ರಗತಿಯ ಪಥದಲ್ಲಿರುವ ಎಲ್ಲಾ ಜೀವಂತ ಭಾಷೆಗಳಲ್ಲಿಯೂ, ಉಪನಿಷತ್ತುಗಳು ರೂಪಾಂತರ ಭಾಷಾಂತರಗಳನ್ನು ಹೊಂದಿ ಪ್ರಕಾಶಿಸುತ್ತಿವೆ. ಆಧ್ಯಾತ್ಮಿಕ ಜೀವಿಗಳಿಗೆ, ಜಿಜ್ಞಾಸುಗಳಿಗೆ ಶಾಶ್ವತವಾದ ಶಾಂತಿಯ ಅಮೃತ ಧಾರೆಯನ್ನು ಏಕಮೇವಾದ್ವಿತೀಯವಾದ ಉಪನಿಷತ್ತುಗಳೇ ಸುರಿಸುತ್ತಿವೆ.

ಉಪನಿಷತ್ತುಗಳು ಒಂದೇ ಕಾಲದಲ್ಲಿ ಪ್ರಕಾಶಕ್ಕೆ ಬರದೆ ಭಿನ್ನ ಭಿನ್ನ ಕಾಲಗಳಲ್ಲಿ ಅವಿರ್ಭವಿಸಿವೆ. ಆದ್ದರಿಂದ "ಇವುಗಳಲ್ಲಿ ಪರಸ್ಪರ ವಿರುದ್ಧವಾಗಿ ತೋರುವ ಸಿದ್ಧಾಂತಗಳು ಕೆಲವುಕಡೆ ಕಾಣಬಂದರೆ ಅವಕ್ಕೆ ಯಾರೂ ಆಶ್ಚರ್ಯ ಪಡಬೇಕಾದುದಿಲ್ಲ" ಎಂದು ಕೆಲವು ವಿಮರ್ಶಕರು ಹೇಳುತ್ತಾರೆ. ಆದರೆ ಹೀಗೆ ತೋರುವ ವಿರುದ್ಧವಾದ ಸಿದ್ಧಾಂತಗಳು ವಾಸ್ತವಿಕವಾಗಿ ತಾತ್ವಿಕವಾಗಿ ಉಪನಿಷತ್ತುಗಳಲ್ಲಿ ಪ್ರತಿಪಾದಿಸಿರುವುದಿ ಕಾಣುವ ವಿರುದ್ಧಸಿದ್ಧಾಂತಗಳು ಆಪಾತತಃ (ಮೇಲಿಂದ ಮೇಲೆ) ನೋಡಿದರೆ ಕಾಣುತ್ತವೆ. ಉಪನಿಷತ್ತುಗಳಲ್ಲಿ ಆಳವಾಗಿ ಪ್ರವೇಶಿಸಿ ಸತತ ಅಭ್ಯಾಸದಿಂದ ಪರಿಶೀಲಿಸಿದರೆ, ಇವುಗಳೆಲ್ಲವೂ ಯಾವುದೋಒಂದು ಮೂಲಭೂತವಾದ ತಾತ್ವಿಕ ತಳಹದಿಯಮೇಲೆ ನಿಂತಿವೆ ಎಂಬುದು ತಿಳಿದುಬರುತ್ತದೆ. "ಈ ಪ್ರಪಂಚದ ಮೂಲವು ಯಾವುದು ?" ಎಂಬ ಜಟಿಲವಾದ ಪ್ರಶ್ನೆಯನ್ನು ಸುಲಭವಾಗಿ, ಸ್ಪಷ್ಟವಾಗಿ, ತಿಳಿಸಿಕೊಡುವ ಮಾರ್ಗವನ್ನು ಈ ಉಪನಿಷತ್ತುಗಳು ತೋರಿಸುತ್ತವೆ. ಆರ್ಯಮಹರ್ಷಿಗಳು ತಮ್ಮ ತಮ್ಮ ಅನುಭವಕ್ಕೆ ಬಂದ ತತ್ವಗಳನ್ನು ಈ ಉಪನಿಷತ್ತುಗಳಲ್ಲಿ ಪ್ರತಿ

ಬಿಂಬಿಸಿ ವಿವಿಧ ರೂಪಗಳಿಂದ ಕೂಡಿದ ಪರಿವರ್ತನಶೀಲವಾದ ಈ ಜಗತ್ತಿನ ಮೂಲದಲ್ಲಿರುವ ಶಾಶ್ವತವಾದ, ಸತ್ಯಪದಾರ್ಥವನ್ನು ಕಂಡು ಹಿಡಿದಿದ್ದಾರೆ. ತಾವು ಕಂಡುಹಿಡಿದ ಸತ್ಯಶೋಧನೆಯನ್ನು ಪ್ರಪಂಚಕ್ಕೆ ಜಗತ್ತಿನ ಮಾನವವರ್ಗಕ್ಕೆ ಉಪನಿಷತ್ತುಗಳಿಂದ ಎಂದೂ ಮಂಕಾಗದಂತಹ ಬೆಳಕನ್ನು ನೀಡಿದ್ದಾರೆ. ಜಗತ್ತಿನ ಆಧಾರಭೂತವಾದ ಮೂಲವಸ್ತುವಿಗೆ ಬ್ರಹ್ಮ ಎಂಬ ಹೆಸರು ಕೊಟ್ಟು ಕರೆದಿರುತ್ತಾರೆ ಬ್ರಹ್ಮ ಈಶ್ವರ, ಮತ್ತು ಜೀವಗಳಲ್ಲಿ ತಾತ್ವಿಕವಾದ ಯಾವ ಭೇದವೂ ಇಲ್ಲ. ಇವೆರಡೂ ಒಂದೇ ತತ್ವದ ರೂಪಗಳು ಎಂದು ಅಭೇದತತ್ವದಮೇಲೆ ಅದ್ವೈತಸಿದ್ಧಾಂತವನ್ನು ಉಪನಿಷತ್ತುಗಳು ಸಂಪೂರ್ಣವಾಗಿ ಪ್ರತಿಪಾದಿಸುತ್ತವೆ. ವಿಶಿಷ್ಟಾದ್ವೈತಿಗಳು ಇವನ್ನೇ ಕೆಲವು ವಿಶಿಷ್ಟವಾದ ಭೇದಗಳನ್ನು ಅಂಗೀಕರಿಸಿಯೂ ದ್ವೈತಿಗಳು ಐದು ವಿಧವಾದ, ನಿತ್ಯವಾದ, ಪೂರ್ಣ ಭೇದಗಳನ್ನು ಅಂಗೀಕರಿಸಿಯೂ, ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ.

ಆತ್ಮವು ನಿತ್ಯವಾದುದು. ಅದಕ್ಕೆ ಯಾವಾಗಲೂ ಸಾವಿಲ್ಲ. ಯಾವ ವಿಧವಾದ ಅವಸ್ಥಾಂತರಗಳಾಗಲೀ, ವಿಕಾರವಾಗಲೀ, ದೋಷಗಳಾಗಲೀ, ಯಾವುದೂ ಆತ್ಮಕ್ಕೆ ಇಲ್ಲ. ಈ ಆತ್ಮವಸ್ತುವು ಇಂದ್ರಿಯಗಳಲ್ಲ, ಮನೋಬುದ್ಧಿಗಳಲ್ಲ, ಅದು ಪ್ರಾಣಕ್ಕಿಂತಲೂ ಭಿನ್ನವಾಗಿದೆ. ಉಪನಿಷತ್ತುಗಳ ಸುಂದರ ಕಲ್ಪನೆಯಲ್ಲಿ ಶರೀರವು ರಥವಾಗಿದೆ, ಬುದ್ಧಿಯು ಸಾರಥಿಯಾಗಿದೆ, ಮನಸ್ಸು ಲಗಾಮಾಗಿದೆ. ವಿಷಯಗಳೆಂಬ ಮಾರ್ಗಗಳಲ್ಲಿ ಯಾವಾಗಲೂ ಓಡಲು ಹವಣಿಸುತ್ತಿರುವ ಇಂದ್ರಿಯಗಳೆಂಬ ಕುದುರೆಗಳನ್ನು ಹೂಡಿದ ಈ ಶರೀರವೆಂಬ ರಥದಮೇಲೆ ಕುಳಿತು ಪ್ರಯಾಣಮಾಡುವ ಯಜಮಾನನೇ ಈ ಆತ್ಮವು. ಈ ಆತ್ಮ ಮತ್ತು ಬ್ರಹ್ಮ ಇವುಗಳೆರಡೂ ತಾತ್ವಿಕವಾಗಿ ಒಂದೇ ಆಗಿವೆ.

ಬ್ರಹ್ಮನಿಗೆ ಸಗುಣ, ನಿರ್ಗುಣಗಳೆಂದು ಎರಡು ರೂಪಗಳಿವೆ. ಬ್ರಹ್ಮನು ತನ್ನ ಸಗುಣರೂಪದಲ್ಲಿ ಈ ಪ್ರಪಂಚವನ್ನು ಸೃಷ್ಟಿಸುತ್ತಾನೆ, ಮತ್ತು ಪ್ರಳಯಕಾಲದಲ್ಲಿ ಈ ಸಮಸ್ತ ಪ್ರಪಂಚವನ್ನೂ ತನ್ನಲ್ಲಿ ಲೀನ ಮಾಡಿಕೊಳ್ಳುತ್ತಾನೆ. ಬ್ರಹ್ಮನ ಸಗುಣ ರೂಪವು ಹೀಗಿದ್ದರೂ ಅವನ

ನಿರ್ಗುಣ ರೂಪವೇ ಸರ್ವ ಶ್ರೇಷ್ಠವಾದುದು. ನಿರ್ಗುಣ ಬ್ರಹ್ಮನ ಸ್ವರೂಪವನ್ನು ಚಿತ್ರಿಸಲು ಶಬ್ದಗಳಿಂದ ಸಾಧ್ಯವಿಲ್ಲ. ಅದನ್ನು ಅನುಭವಮಾತ್ರದಿಂದಲೇ ತಿಳಿಯಲು ಸಾಧ್ಯವಾದುದರಿಂದ ಉಪನಿಷತ್ತುಗಳು ನಿರ್ಗುಣ ಬ್ರಹ್ಮಸ್ವರೂಪವನ್ನು ನೇತಿ, ನೇತಿ, "ಅದಲ್ಲ ಇದಲ್ಲ, ಮತ್ತೊಂದಲ್ಲ, ನಾವು ಸಾಮಾನ್ಯವಾಗಿ ತಿಳಿಯುವ ಯಾವುದೂ ಅದಲ್ಲ" ಎಂದು ಹೇಳಿ "ಪ್ರಪಂಚದಲ್ಲಿ ಹೇಳಲು, ಕೇಳಲು ನೋಡಲು ಯಾವುದಕ್ಕೂ ಸಾಧ್ಯವಾಗದಂತಹ ವಸ್ತುವೇ ಬ್ರಹ್ಮ" ಎಂದು ಹೇಳುತ್ತವೆ. ಇಂತಹ ನಿರ್ಗುಣ ಬ್ರಹ್ಮ ವಸ್ತುವಿನ ಸಾಕ್ಷಾತ್ಕಾರ ಮಾಡಬೇಕೆಂಬುದೇ ಉಪನಿಷತ್ತುಗಳ ಚರಮ ಮತ್ತು ಪರಮ ಸಿದ್ಧಾಂತವಾಗಿದೆ ಎಂಬುದು ಅದ್ವೈತಮತದ ಸಿದ್ಧಾಂತವಾಗಿದೆ.

ಇಂತಹ ಉಪನಿಷತ್ತುಗಳು ಆಧ್ಯಾತ್ಮಿಕ ಮಾನಸ ಸರೋವರವಾಗಿವೆ. ಇವುಗಳಿಂದ ದೊರೆಯುವ ವಿವಿಧವಾದ ಜ್ಞಾನಪ್ರವಾಹಗಳು ಪವಿತ್ರ ಭೂಮಿಯಾದ ಈ ಭಾರತ ವರ್ಷದಲ್ಲಿ ವಾಸಿಸುವ ಮಾನವ ವರ್ಗಕ್ಕೆ ಐಹಿಕ ಜೀವನಕ್ಕೆ ಸಂಬಂಧಪಟ್ಟ ಸಾಂಸಾರಿಕ ಸುಖರೂಪವಾದ ಪ್ರೇಯಸ್ಸನ್ನೂ ಪಾರಲೌಕಿಕ ಕಲ್ಯಾಣರೂಪವಾದ ಶ್ರೇಯಸ್ಸನ್ನೂ, ಒದಗಿಸಿಕೊಡುವ ಪವಿತ್ರವಾದ ತೀರ್ಥಗಳಾಗಿವೆ. ಈ ತೀರ್ಥಗಳು ಒಣಗದೆ, ಕೊಳಚೆಗಟ್ಟದೆ. ಅಖಂಡವಾಗಿ ಅನಂತವಾಗಿ ಹರಿಯುತ್ತಾ ಮುಮುಕ್ಷುಗಳನ್ನು ಮುಕ್ತಿಗೊಳಿಸುತ್ತವೆ.

ಭಾರತೀಯವಾದ ಆಧ್ಯಾತ್ಮಿಕ ತತ್ವಗಳನ್ನು ಬೋಧಿಸುವ ವೇದಾಂತ ದರ್ಶನದಲ್ಲಿ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿರುವ ಪ್ರಸ್ಥಾನ ತ್ರಯವೆಂದು ಹೇಳುವ ಉಪನಿಷತ್ತು, ಬ್ರಹ್ಮಸೂತ್ರ, ಗೀತಾ ಇವು ಮೂರು ಗ್ರಂಥಗಳಲ್ಲಿ ವೇದಧರ್ಮದ ರೀತಿ, ಸ್ವರೂಪ ಮತ್ತು ಅದರ ಸಾಧನ ಸಂಪತ್ತುಗಳನ್ನು ಪ್ರತಿಪಾದಿಸಿದ್ದಾರೆ. ಈ ಪ್ರಸ್ಥಾನ ತ್ರಯದಲ್ಲಿ ಉಪನಿಷತ್ತುಗಳಿಗೆ ಮೊದಲನೆಯ ಸ್ಥಾನವನ್ನು ಕೊಟ್ಟಿದ್ದಾರೆ. ಎರಡನೆಯ ಸ್ಥಾನವು ಬಾದರಾಯಣರು ರಚಿಸಿದ ಬ್ರಹ್ಮಸೂತ್ರಕ್ಕೆ ದೊರಕಿದೆ. ಉಪನಿಷತ್ತುಗಳಲ್ಲಿ ವಿವರಿಸಿರುವ ವಿಷಯಗಳ ಬಗ್ಗೆ ಏಳುವ ಆಕ್ಷೇಪಣೆಗಳನ್ನೂ, ಇವುಗಳಲ್ಲಿ ವಿರೋಧವಾಗಿ ಕಾಣುವ ಅಭಿಪ್ರಾಯಗಳನ್ನು ಸಮನ್ವಯಮಾಡಿ, ಉಪನಿಷ

ತ್ತುಗಳ ತತ್ವಕ್ಕೆ ಏಕರೂಪತೆಯನ್ನು ಬ್ರಹ್ಮಸೂತ್ರಗಳು ಉಂಟು ಮಾಡಿವೆ. ಮೂರನೆಯ ಸ್ಥಾನವು ಭಗವದ್ಗೀತೆಗೆ ಪ್ರಾಪ್ತವಾಗಿದೆ. ಭಗವದ್ಗೀತೆಯು ಎಲ್ಲಾ ಉಪನಿಷತ್ತುಗಳ ಸಾರವು. ಈ ಉಪನಿಷತ್ತುಗಳೆಂಬ ಕಾಮಧೇನು ವನ್ನು ಶ್ರೀಕೃಷ್ಣನು ಪಾರ್ಥನೆಂಬ ಕರುವನ್ನು ಬಿಟ್ಟು ಸೊರೆಸಿ ಮುಮುಕ್ಷು ಗಳಿಗಾಗಿ ಗೀತಾರೂಪಿಯಾದ ಹಾಲನ್ನು ಕರೆದಿದ್ದಾನೆ.

ಸರ್ವೋಪನಿಷದೋ ಗಾವಃ ದೋಗ್ಧಾ ಗೋಪಾಲ ನಂದನಃ|
ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್||

ವೇದೋಪನಿಷತ್ತುಗಳಿಗೆ ಅಧಿಕಾರವಿಲ್ಲದ ತ್ರೈವರ್ಣಿಕ ರಲ್ಲದವರಿಗೂ ಸ್ತ್ರೀಯರಿಗೂ ಉಪಯೋಗವಾಗಲೆಂದು ಜನಸಾಮಾನ್ಯದ ಉಪಯೋಗ ಕ್ಕಾಗಿ ಗೀತೆಯು ಉದ್ಭವಿಸಿತು. ಹೀಗೆ ಪ್ರಸ್ಥಾನತ್ರಯಕ್ಕೆ ಪರಸ್ಪರ ಸಂಬಂ ಧವು ಘನೀಭೂತವಾಗಿರುವುದು. ಆದ್ದರಿಂದ ಉಪನಿಷತ್ತುಗಳು ಭಾರತೀಯ ದರ್ಶನಗಳಿಗೆ ಮೂಲ ಸ್ರೋತವಾಗಿವೆ ಎಂಬುದರಲ್ಲಿ ತಿಲಮಾತ್ರವೂ ಸಂದೇ ಹವಿಲ್ಲ. ಈ ಕಾರಣದಿಂದಲೇ ನವೀನ ಮತಗಳನ್ನು ಸ್ಥಾಪಿಸಲು ಹೊರಟ ಎಲ್ಲಾ ಆಚಾರ್ಯರೂ ತಮ್ಮ ತಮ್ಮ ಮತಗಳು ಪ್ರಾಮಾಣಿಕವೂ, ನಿರ್ದು ಷ್ಟವೂ ಆಗಬೇಕೆಂಬ ಉದ್ದೇಶದಿಂದ ಈ ಮೂರು ಗ್ರಂಥಗಳ ಅದರಲ್ಲಿಯೂ ವಿಶೇಷವಾಗಿ ಉಪನಿಷತ್ತುಗಳ ಆಧಾರಗಳ ಮೇಲೆ ತಮ್ಮ ತಮ್ಮ ಮತಗಳಿಗೆ ಅನುಕೂಲವಾದ ರೀತಿಯಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ.



# ೭. ಋಷ್ಯಾದಿಗಳು

ಶ್ರೀ



ವೇದೋಕ್ತವಾದ ಕರ್ಮಗಳ ಫಲಗಳನ್ನು ಸಂಪೂರ್ಣವಾಗಿ ಪಡೆಯಲಾಗಲೀ, ವೇದ ಪಠನದಿಂದ ಸರಿಯಾದ ಪ್ರಯೋಜನವನ್ನು ಹೊಂದಲಾಗಲೀ, ವೇದ ಮಂತ್ರಗಳ ಅರ್ಥಗಳನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕಾಗಲೀ, ವೇದಮಂತ್ರಗಳ ಋಷಿ, ದೇವತಾ, ಛಂದಸ್ಸು ಮತ್ತು ವಿನಿಯೋಗಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದು ಶಾಸ್ತ್ರಕಾರರು ನಿರ್ಣಯಮಾಡಿದ್ದಾರೆ. ಶೌನಕಾಚಾರ್ಯರು ಬರೆದ ಅನುಕ್ರಮಣಿಕಾ ಗ್ರಂಥದಲ್ಲಿ ಇವುಗಳನ್ನು ತಿಳಿಯದೆ ಮಾಡಿದ ಅಧ್ಯಯನ, ಅಧ್ಯಾಪನ, ಯಜನ ಯಾಜನಗಳೆಲ್ಲವೂ ನಿಷ್ಫಲವಾಗುವವೆಂದೂ, ಇವುಗಳನ್ನು ತಿಳಿದು ಮಾಡುವುದರಿಂದ ಇವುಗಳ ಸಂಪೂರ್ಣ ಫಲಗಳು ದೊರೆಯುತ್ತವೆಂದೂ ಹೇಳಿದೆ. ಇದಲ್ಲದೆ ಒಬ್ಬೊಬ್ಬ ಋಷಿಯೂ ಕಂಡುಹಿಡಿದ ಮಂತ್ರಗಳ ಭಾಷಾಶೈಲಿ ಪಾರಿಭಾಷಿಕ ಶಬ್ದಾದಿಗಳು ಒಂದೊಂದು ವಿಧವಾಗಿರುವುದರಿಂದ, ಪ್ರತಿಯೊಂದು ಸೂಕ್ತ, ಮಂತ್ರಗಳ ಋಷಿಗಳನ್ನು ತಿಳಿದಿದ್ದರೆ,ಅದರಿಂದ ಒಬ್ಬರು ಕಂಡುಹಿಡಿದ ಮಂತ್ರಗಳನ್ನು ತುಲನಾತ್ಮಕವಾಗಿ ಅಭ್ಯಾಸಮಾಡಿ, ಅರ್ಥ ನಿರ್ಣಯ ಮಾಡುವುದಕ್ಕೆ ತುಂಬಾ ಸಹಾಯವಾಗುತ್ತದೆ. ಈ ಅಭಿಪ್ರಾಯವನ್ನು ಯಾಜ್ಞವಲ್ಕ್ಯ, ವ್ಯಾಸ ಮೊದಲಾದವರೂ ಸಹ ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ವೇದಮಂತ್ರಗಳ ಋಷಿ, ದೇವತಾ, ಛಂದಸ್ಸು, ವಿನಿಯೋಗಗಳನ್ನು ಸ್ವಲ್ಪಮಟ್ಟಿಗಾದರೂ ಇಲ್ಲಿ ತಿಳಿದುಕೊಳ್ಳುವುದು ಕ್ರಮಪ್ರಾಪ್ತವಾಗುತ್ತದೆ.

## ಋಷಿಗಳು

"ಋಷಿರ್ದರ್ಶನಾತ್" "ವೇದಮಂತ್ರಗಳನ್ನು ಕಾಣುವುದರಿಂದ ಅಥವಾ ಸಾಕ್ಷಾತ್ಕರಿಸಿಕೊಳ್ಳುವುದರಿಂದ ಋಷಿಯೆಂದು ಹೇಳಿಸಿಕೊಳ್ಳುತ್ತಾನೆ" ಎಂದು ಯಾಸ್ಕಾಚಾರ್ಯರು ಹೇಳಿರುವರು. ಕಾತ್ಯಾಯನಾಚಾರ್ಯರು ಸರ್ವಾನುಕ್ರಮಣಿಕೆಯಲ್ಲಿ "ಸ್ಮರ್ತಾ ದ್ರಷ್ಟಾ ವಾ ಋಷಿಃ" ಎಂದು ಹೇಳಿರುವರು. ಹಾಗೆಯೇ "ಋಷಯೋ ಮಂತ್ರದ್ರಷ್ಟಾರಃ" (ಮಂತ್ರಗಳನ್ನು ಕಂಡುಹಿಡಿದವರು ಋಷಿಗಳು) ಎಂದು ಸ್ಮೃತಿಯಲ್ಲಿ ಹೇಳಿದೆ. ಎಂದರೆ, "ತಮ್ಮ ತಪಸ್ಸಿನಿಂದ ವೇದಮಂತ್ರಗಳನ್ನು ಕಂಡುಹಿಡಿದಿರುವವರಿಗೆ, ಸಾಕ್ಷಾತ್ಕರಿಸಿಕೊಂಡವರಿಗೆ ಋಷಿಗಳು ಎಂದು ಹೆಸರು" ಎಂದು ನಮ್ಮವರು ಪ್ರಾಚೀನ ಕಾಲದಿಂದಲೂ ಹೇಳಿಕೊಂಡು ಬಂದಿದ್ದಾರೆ.

ಯಾವ ಋಷಿಯು ಯಾವ ಸೂಕ್ತ, ಮಂತ್ರಗಳನ್ನು ಕಂಡು ಹಿಡಿದಿರುವನೋ, ಸಾಕ್ಷಾತ್ಕರಿಸಿಕೊಂಡಿರುವನೋ, ಆ ಸೂಕ್ತ ಮಂತ್ರಗಳಿಗೆ ಅವನೇ ಋಷಿ ಎಂದು ಹೇಳಿಸಿಕೊಳ್ಳುತ್ತಾನೆ. ಈಗ ನಮಗೆ ವೇದಮಂತ್ರಗಳ ಋಷಿಗಳನ್ನು ತಿಳಿಯುವುದಕ್ಕೆ ಋಗ್ವೇದದ ಮಂತ್ರಗಳಿಗೆ ಮಾತ್ರ ಸುಲಭಸಾಧ್ಯವಾಗುವಂತಿದೆ. ಋಗ್ವೇದದ ಪಾಠಕ್ರಮದಲ್ಲಿ ಇಂದಿಗೂ ಸಹ ಋಷಿ ದೇವತೆಗಳನ್ನು ಹೇಳಿ ಸೂಕ್ತಪಠನಮಾಡುವ ಸಂಪ್ರದಾಯವು ಉಳಿದಿದೆ. ಆದರೆ ಉಳಿದ ವೇದಗಳ ಋಷಿಗಳನ್ನು ಕಂಡುಹಿಡಿಯಬೇಕಾದರೆ ಪರಿಶಿಷ್ಟಗ್ರಂಥಗಳೊಳಗೆ ಸೇರುವ ಅನುಕ್ರಮಣಿಕಾ ಗ್ರಂಥಗಳನ್ನು ನೋಡಿ ಶೋಧಿಸಿ ಹೇಳಬೇಕಾಗುತ್ತದೆ. ಅನುಕ್ರಮಣಿಕಾ ಗ್ರಂಥಗಳಲ್ಲಿಯೂ ಬಹುಭಾಗವು ಪ್ರಕಟವಾಗದೆ ಇರುವುದರಿಂದಲೂ, ಪ್ರಕಟವಾದ ಗ್ರಂಥಗಳು ದೊರಕದೆ ಇರುವುದರಿಂದಲೂ ನಮಗೆ ದೊರೆತ ಪ್ರಮಾಣಗ್ರಂಥಗಳ ಆಧಾರದಿಂದಲೇ ಪ್ರಕೃತದಲ್ಲಿ ಹೇಳಿ ತೃಪ್ತಿಪಡಬೇಕಾಗಿದೆ.

ವೇದಮಂತ್ರಗಳನ್ನು ಕಂಡುಹಿಡಿದವರು ಬ್ರಾಹ್ಮಣಋಷಿಗಳು ಕ್ಷತ್ರಿಯರು, ದೇವತೆಗಳು ಮತ್ತು ಅನೇಕ ಸ್ತ್ರೀಯರು ಸಹ ಇರುತ್ತಾರೆ. ಆದರೂ ವೇದದ ಬಹುಭಾಗಗಳನ್ನು ಕಂಡು ಹಿಡಿದವರು ಅನೇಕ ಋಷಿ

ವಂಶದ ಬ್ರಾಹ್ಮಣರೇ ಆಗಿರುವರು. ಮಂತ್ರದ್ರಷ್ಟಾರರು ಯಾವ ವರ್ಣದವರೇ ಆಗಿದ್ದರೂ ಅವರಿಗೆಲ್ಲಾ ಋಷಿಗಳೆಂದು ಕರೆದಿದ್ದಾರೆ. ಒಂದೇ ಹೆಸರಿನ ಅನೇಕ ಋಷಿಗಳನ್ನು ನಾವು ಕಾಣಬಹುದಾದರೂ, ಅವರೆಲ್ಲರೂ ಭಿನ್ನ ಭಿನ್ನ ಗೋತ್ರದವರಿರುವರೆಂಬುದನ್ನು ಮರೆಯಲಾಗದು. ವೇದಮಂತ್ರಗಳನ್ನು ಒಂದೊಂದೇ ಋಷಿವಂಶದ ಅನೇಕ ಋಷಿಗಳು ಕಂಡುಹಿಡಿದಿದ್ದಾರೆ. ಇವುಗಳಲ್ಲಿ ಅತ್ರಿವಂಶದ ಋಷಿಗಳು ಎಲ್ಲಕ್ಕಿಂತಲೂ ಬಹು ಸಂಖ್ಯೆಯಲ್ಲಿ ಕಾಣುತ್ತಾರೆ. ಎರಡನೆಯ ಸ್ಥಾನವು ಕಣ್ವ ವಂಶದವರಿಗೆ ದೊರೆಯುತ್ತದೆ. ಅನಂತರ ವಿಶ್ವಾಮಿತ್ರ ವಂಶದವರಿಗೆ ಮೂರನೆ ಸ್ಥಾನವು ದೊರೆಯುತ್ತದೆ. ಉಳಿದ ವಂಶದವರಲ್ಲಿಯೂ ಸಹ ಎಂಟು ಹತ್ತು, ಹದಿನೈದು ಋಷಿಗಳು ಮಂತ್ರದ್ರಷ್ಟಾರರಾಗಿರುವುದನ್ನು ಕಾಣಬಹುದು.

ಶಕ್ತಿಪುತ್ರನಾದ ಪರಾಶರನೆಂಬ ಮುನಿಯು ಋಗ್ವೇದದ ದಶಮ ಮಂಡಲದ ಅನೇಕ ಮಂತ್ರಗಳ ದ್ರಷ್ಟಾರನಾಗಿದ್ದಾನೆ. ಶಕ್ತಿಋಷಿಯು ವಸಿಷ್ಠ ಋಷಿಯ ಮಗನು. ಶಕ್ತಿಪುತ್ರನಾದ ಪರಾಶರನು ಕೃಷ್ಣದ್ವೈಪಾಯನವ್ಯಾಸನ ತಂದೆ ಎಂಬುದು ಪುರಾಣಗಳಲ್ಲಿ ಪ್ರಸಿದ್ಧಿಯಾಗಿದೆ. ವಸಿಷ್ಠನ ಪೌತ್ರನೂ (ಮೊಮ್ಮಗ), ಕೃಷ್ಣದ್ವೈಪಾಯನನ ತಂದೆಯೂ ಒಬ್ಬನೇ ಎಂದು ಪುರಾಣಗಳಲ್ಲಿ ವರ್ಣಿತವಾಗಿದೆ. ಆದರೆ ಪರಾಶರನ ಜೀವನ ಚರಿತ್ರೆಯು ಪುರಾಣದಲ್ಲಿ ಎರಡು ಭಾಗದಂತೆ ಖಂಡವಾಗಿ ಕಾಣುತ್ತದೆ. ಆದ್ದರಿಂದ ವಸಿಷ್ಠ ಪುತ್ರನಾದ ಶಕ್ತಿಋಷಿಯೂ ಪರಾಶರನ ತಂದೆಯಾದ ಶಕ್ತಿಋಷಿಯೂ ಒಬ್ಬನೇಯೋ, ಅಥವಾ ಬೇರೆಯೋ ಎಂಬುದು ವಿಮರ್ಶಕರಿಗೆ ವಿಚಾರಯೋಗ್ಯವಾಗಿದೆ ಎಂದು ಇಲ್ಲಿ ಸೂಚಿಸಬಹುದಾಗಿದೆ.

ಋಗ್ವೇದದ ಮಂತ್ರದ್ರಷ್ಟಾರರಾದ ಬಹುಸಂಖ್ಯೆಯ ಋಷಿಗಳೇ ಯಜುರ್ವೇದ ಮತ್ತು ಇತರ ವೇದಗಳ ಮಂತ್ರದ್ರಷ್ಟಾರರೂ ಆಗಿದ್ದಾರೆ. ಋಗ್ವೇದಕ್ಕೆ ಸಂಬಂಧಪಡದ ಋಷಿಗಳೂ ಸಹ ಇತರ ವೇದಗಳನ್ನು ಕಂಡು ಹಿಡಿದವರಲ್ಲಿ ಅನೇಕರಿದ್ದಾರೆ. ಇದನ್ನು ಋಗ್ವೇದದ ಹೊರತಾದ

ಸುಮಾರು ೪೦ ಋಷಿಗಳು ಯಜುರ್ವೇದದ ಮಂತ್ರದ್ರಷ್ಟಾರರಾಗಿರುವುದನ್ನು ನೋಡಿದರೆ ಹೇಳಬಹುದು.

ಈ ಗ್ರಂಥದ ಕೊನೆಯೊಳಗೆ ಒಂದು ಪರಿಶಿಷ್ಟದಲ್ಲಿ ಋಗ್ವೇದದ ಋಷಿಗಳನ್ನು ಮತ್ತು ಯಜುರ್ವೇದದ ಪ್ರಯೋಗದ ಉಪಾಕರ್ಮಕಾಂಡದಲ್ಲಿ ಋಷಿತರ್ಪಣದ ಅವಸರದಲ್ಲಿ ಎತ್ತಿರುವ ಋಷಿಗಳ ಹೆಸರನ್ನು ಸೇರಿಸಿ ಋಷಿಗಳ ಅಕಾರಾದಿಯಾದ ನಾಮಾವಳಿಯನ್ನು ಕೊಡಲು ಪ್ರಯತ್ನಿಸಿದ್ದೇನೆ.

ಮಂತ್ರದ್ರಷ್ಟಾರರಾದ ಋಷಿಗಳು ಸುಮಾರು ನಾಲ್ಕುನೂರರವರೆಗೆ ದೊರೆಯುತ್ತಾರೆ.

## ವೈದಿಕ ದೇವತೆಗಳು.

" ದೇವೋ ದಾನಾತ್ ದ್ಯೋತನಾತ್ ದೀಪನಾದ್ವಾ "

ವೈದಿಕ ದೇವತೆಗಳನ್ನು ನಮ್ಮಲ್ಲಿ ಸಾಮಾನ್ಯ ವ್ಯವಹಾರದಲ್ಲಿದ್ದ ರಾಮ, ಕೃಷ್ಣ, ಇಂದ್ರ ಮೊದಲಾದುವುಗಳಷ್ಟೇ ಎಂದು ತಿಳಿಯಕೂಡದು. ವೇದೋಕ್ತವಾದ ದೇವತಾ ಶಬ್ದಕ್ಕೆ ಇವಕ್ಕಿಂತಲೂ ವ್ಯಾಪಕವಾದ ಒಂದು ವಿಶಿಷ್ಟವಾದ ಅರ್ಥವಿರುತ್ತದೆ. " ದೇವತಾ " ಎಂಬ ಗ್ರಂಥದಲ್ಲಿ "ದೇವೋ ದಾನಾತ್ ದ್ಯೋತನಾತ್ ದೀಪನಾದ್ವಾ ", "ಪ್ರಪಂಚದಲ್ಲಿ ಸಂಚರಿಸುವ, ಪ್ರಕಾಶಿಸುವ, ಮತ್ತು ಎಲ್ಲಾ ವಿಧವಾದ ಭೋಜ್ಯವಸ್ತುಗಳನ್ನು ಕೊಡುವ ಶಕ್ತಿಗಳೆಲ್ಲವೂ ದೇವತೆಗಳು." ಎಂದು ಹೇಳಿದೆ. ಪೂರ್ವಮೀಮಾಂಸದಲ್ಲಿ " ಯಾ ತೇನೋಚ್ಯತೇ ಸಾ ದೇವತಾ" "ಯಾವ ಮಂತ್ರದಲ್ಲಿ ಯಾವ ವಿಷಯವು ಅಥವಾ ಯಾವುದನ್ನುದ್ದೇಶಿಸಿ ವರ್ಣಿತವಾಗಿರುತ್ತದೆಯೋ ಆ ಮಂತ್ರಕ್ಕೆ ಅದೇ ದೇವತೆಯು." ಎಂದು ಮೇಲಿನ ಅಭಿಪ್ರಾಯವನ್ನೇ ರೂಪಾಂತರದಿಂದ ಹೇಳಿದೆ. ಯಾವ ಸೂಕ್ತ ಅಥವಾ ಮಂತ್ರಗಳ ಮೇಲುಗಡೆ ಯಾವುದು ಋಷಿ, ದೇವತೆಗಳೆಂದು ಬರೆದಿರುವರೋ ಅಥವಾ ಸೂಕ್ತ ಮಂತ್ರಗಳನ್ನು ಹೇಳುವುದಕ್ಕೆ ಮುಂಚಿತವಾಗಿ ಹೇಳುತ್ತೇವೆಯೋ ಅವು ಆ ಸೂಕ್ತ ಮಂತ್ರಗಳ ದೇವತೆಗಳು. ಹಾಗೆ ಬರೆದಿರುವುದಾಗಲೀ, ಹೇಳುವ

ಕ್ರಮವಾಗಲೀ, ಋಗ್ವೇದದಲ್ಲಿ ಮಾತ್ರ ಸಂಪ್ರದಾಯ ಬದ್ಧವಾಗಿ ಉಳಿದಿದೆ. ಸೂಕ್ತ ಮಂತ್ರಗಳಮೇಲೆ ಬರೆದ ಅಥವಾ ಸೂಕ್ತ ಮಂತ್ರಗಳನ್ನು ಹೇಳು ವುದಕ್ಕೆ ಮುಂಚೆ ಹೇಳುವ ದೇವತೆಗಳೇ, ಆಯಾ ಸೂಕ್ತ ಮಂತ್ರಗಳ ಪ್ರತಿ ಪಾದನೀಯ ಸ್ತವನೀಯವಾದ ವಸ್ತುವಾಗಿರುತ್ತವೆ.

ವೇದಗಳಲ್ಲಿ ಪ್ರಧಾನವಾದ ದೇವತೆಗಳು ೩೩ ಇವೆಯೆಂದು ಹೇಳಿದೆ. ಋಗ್ವೇ ದದಲ್ಲಿ ಪೃಥ್ವೀಸ್ಥಾನೀಯವಾದ ೧೧ ದೇವತೆಗಳೂ, ಅಂತರಿಕ್ಷಸ್ಥಾನೀಯ ವಾದ ೧೧ ದೇವತೆಗಳೂ, ದ್ಯೌಸ್ಥಾನೀಯವಾದ ೧೧ ದೇವತೆಗಳೂ, ಒಟ್ಟು ಸೇರಿ ೩೩ ದೇವತೆಗಳೆಂದು ಹೇಳಿದೆ. ಅದರಂತೆಯೇ ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿಯೂ ದೇವತೆಗಳು ೩೩ ಎಂದು ಹೇಳಿದೆ. ಸಾಮ ವೇದ ವಿಷ್ಣುಪುರಾಣಗಳಲ್ಲಿ ವಸುಗಳು ೮, ರುದ್ರರು ೧೧, ಆದಿತ್ಯರು ೧೨ ಪ್ರಜಾಪತಿ ವಷಟ್ಕಾರಗಳು ೨ ಒಟ್ಟು ೩೩ ದೇವತೆಗಳೆಂದು ಹೇಳಿದೆ. ಐತರೇಯ ಬ್ರಾಹ್ಮಣದಲ್ಲಿ ಪ್ರಜಾಪತಿ ದೇವತೆಗಳು ೧೧, ಅನುಯಾಜಿ ದೇವತೆಗಳು ೧೧, ಉಪಯಾಜಿ ದೇವತೆಗಳು ೧೧ ಒಟ್ಟು ೩೩ ದೇವತೆಗಳೆಂದು ಹೇಳಿದೆ. ಹೀಗೆ ಹೆಸರುಗಳಲ್ಲಿ ಸ್ವಲ್ಪ ಸ್ವಲ್ಪ ಬದಲಾವಣೆಗಳಿದ್ದರೂ, ದೇವ ತಾ ಸಂಖ್ಯೆಗಳು ಎಲ್ಲಾ ವೇದಗಳಲ್ಲಿಯೂ ಒಂದೇ ಸಮನಾಗಿರುವವೆಂದು ಕಂಡು ಬರುತ್ತದೆ. ಇವಿಷ್ಟು ಪ್ರಧಾನವಾದ ದೇವತೆಗಳಾದರೂ, ಇನ್ನೂ ಅನೇಕಾನೇಕ ದೇವತೆಗಳು ವೇದಗಳಲ್ಲಿ ವರ್ಣಿತವಾಗಿವೆ. ಋಗ್ವೇದದ ಒಂದು ಕಡೆಯಲ್ಲಿ ದೇವತೆಗಳು ೩೩೩೯ ಇವೆ ಎಂದು ಹೇಳಿದೆ. ಸಾಯ ಣಾಚಾರ್ಯರು ಮಂತ್ರಾರ್ಥಗಳನ್ನು ಬರೆಯುವಾಗ ಪ್ರಧಾನವಾದ ದೇವ ತೆಗಳು ೩೩ ಎಂದೂ, ದೇವತೆಗಳ ಅಂಶಾಂಶಭೂತವಾದ ದೇವತೆಗಳು ೩೩೩೯ ಎಂದೂ, ಈ ಸಂಖ್ಯೆಯು ದೇವತೆಗಳ ವಿಶಾಲ ಮಹಿಮೆಯನ್ನು ತಿಳಿಸುತ್ತದೆ ಎಂದೂ ಬರೆದಿದ್ದಾರೆ.

ನಿರುಕ್ತಕಾರನಾದ ಯಾಸ್ಕನು ಸಹ ವೈದಿಕ ದೇವತೆಗಳನ್ನು ಪೃಥ್ವೀ, ಅಂತರಿಕ್ಷ, ದ್ಯೌ, ಸ್ಥಾನೀಯಗಳೆಂದು ದೇವತೆಗಳ ಆಶ್ರಯ ಸ್ಥಾನಗಳನ್ನನುಸರಿಸಿ ಮೂರು ವಿಧವಾಗಿ ವಿಭಾಗಿಸಿದ್ದಾನೆ

ಪೃಥ್ವೀಸ್ಥಾನೀಯವೆಂದರೆ, ಪೃಥ್ವಿಯಮೇಲೆ ವಾಸಮಾಡುವ ದೇವತೆಗಳು. ಇವರೊಳಗೆ ಅಗ್ನಿಗೆ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠವಾದ ಸ್ಥಾನವನ್ನು ಕೊಟ್ಟಿದ್ದಾರೆ. ಋಗ್ವೇದದಲ್ಲಿ ಎಲ್ಲಾ ದೇವತೆಗಳಿಗಿಂತಲೂ ಅಗ್ನಿದೇವತೆಗೆ ಸಂಬಂಧಿಸಿದ ಮಂತ್ರಗಳು ಹೆಚ್ಚಾಗಿವೆ.

ಅಂತರಿಕ್ಷಸ್ಥಾನೀಯವೆಂದರೆ, ಪೃಥ್ವೀ ಮತ್ತು ಸೂರ್ಯಾದಿಗ್ರಹ ನಕ್ಷತ್ರ ಮಂಡಲಗಳ ಮಧ್ಯದಲ್ಲಿರುವ ದೇವತೆಗಳು. ಇವುಗಳೊಳಗೆ ಇಂದ್ರನ ಸ್ಥಾನವು ಮೇಲಿನದಾಗಿದೆ.

ದ್ಯುಸ್ಥಾನೀಯ ವೆಂದರೆ, ಸೂರ್ಯಾದಿಗ್ರಹನಕ್ಷತ್ರಗಳ ಲೋಕಗಳಲ್ಲಿ ವಾಸಮಾಡುವ ದೇವತೆಗಳು. ಇವರಲ್ಲಿ ಸೂರ್ಯ, ಸವಿತೃ ಅಥವಾ ವಿಷ್ಣು ಮೊದಲಾದ ದೇವತೆಗಳ ಸ್ಥಾನವು ಮಹತ್ವಪೂರ್ಣವಾಗಿದೆ.

ಇವುಗಳಂತೆಯೇ ವರುಣದೇವತೆಯ ಸ್ಥಾನವು ಸಹ ವೇದಗಳಲ್ಲಿ ಅತ್ಯಂತ ಘನತೆಯಿಂದ ಕೂಡಿದೆ. ಈ ಪ್ರಪಂಚದಲ್ಲಿ ನಿಯಮ ನಿಬಂಧನೆಗಳು ಸರಿಯಾಗಿ ನಡೆದುಕೊಂಡು ಬರುವಂತೆ ನೋಡಿಕೊಂಡು ಬರುವ ಜವಾಬ್ದಾರಿಯು ವರುಣನದಾಗಿದೆ. ವರುಣನು ಸಮಸ್ತ ಪ್ರಾಣಿಗಳ ಶುಭಾಶುಭವಾದ ಕರ್ಮಗಳನ್ನು ನೋಡಿಕೊಂಡು ಅವಕ್ಕೆ ತಕ್ಕ ಫಲದಾತೃವೂ, ಜ್ಞಾನಿಯೂ ಆಗಿದ್ದಾನೆ. ಇಂದ್ರನು ಆರ್ಯರಿಗೆ ಜಯವನ್ನು ಸಂಪಾದಿಸಿಕೊಡುವ ದೇವನಾಗಿದ್ದಾನೆ ಇಂದ್ರನು ಯಾವಾಗಲೂ ಕೈಯಲ್ಲಿ ವಜ್ರಾಯುಧವನ್ನು ಧರಿಸಿ ಅದರಿಂದ ವೃತ್ರ ಮೊದಲಾದ ದಾನವರನ್ನು ಸಂಹಾರ ಮಾಡುವನು. ಶತ್ರುಗಳನ್ನು ಛಿನ್ನ ವಿಚ್ಛಿನ್ನಗೊಳಿಸಿ ಸಮಸ್ತ ಲೋಕವನ್ನು ರಕ್ಷಿಸುವನು, ಮತ್ತು ಇವನು ವೃಷ್ಟಿಯ ಅಧೀಶನಾದುದರಿಂದ ಪ್ರಪಂಚವನ್ನು ಪೋಷಿಸುವನು.

ವಿಷ್ಣುವು ಸೂರ್ಯದೇವತೆಯ ಪ್ರತಿನಿಧಿಯಾಗಿದ್ದಾನೆ ಅನ್ಯರಿಂದ ವಿಷ್ಣುವಿಗೆ ಬಿಡುವಿಲ್ಲದಷ್ಟು ಕೆಲಸವಿರುತ್ತದೆ. ಈ ವಿಷ್ಣುವಿಗೆ ಮೂರು ಪಾದಗಳಿವೆ. ತನ್ನ ಮೂರುಪಾದಗಳಿಂದ ವಿಷ್ಣುವು ಪ್ರಪಂಚವನ್ನೆಲ್ಲಾ ಅಳೆದಿದ್ದಾನೆ. ಇದರಿಂದ ವಿಷ್ಣುವಿಗೆ 'ತ್ರಿವಿಕ್ರಮ' ನೆಂಬ ಹೆಸರು ಬಂದಿದೆ. ವೇದದೊಳಗಿನ ಸ್ತ್ರೀದೇವತೆಗಳಲ್ಲಿ ಉಷಾದೇವತೆಯ ಕಲ್ಪನೆಯು ಅತ್ಯಂತ

ಮಹತ್ವಪೂರ್ಣವಾಗಿದೆ- ಭಂಗಾರದ ರಥದಮೇಲೆ ಕುಳಿತು ಹೊಳೆಯುತ್ತಾ ಹೊರಡುವ ಉಷಾದೇವಿಯ ವರ್ಣನೆಯು ಅತ್ಯಂತ ಉಚ್ಚ ತರಗತಿಯ ಪ್ರತಿಭೆಯ ನಿದರ್ಶನವಾಗಿದೆ. ವೇದಗಳಲ್ಲಿ ಈ ಉಷಾದೇವಿಗೂ ಅತ್ಯಂತ ಉನ್ನತವಾದ ಸ್ಥಾನವಿದೆ.

ಪ್ರಕೃತಿಯ ಸಹಜ ರಮಣೀಯವಾದ ದೃಶ್ಯವನ್ನು ನೋಡಿದ ಆರ್ಯ ಋಷಿಗಳ ಹೃದಯದಲ್ಲಿ ಕಾವ್ಯದ ಬುಗ್ಗೆಯು ಝಲ್ಲೆಂದು ಚಿಮ್ಮಿತು. ಆದ್ದರಿಂದ ಋಷಿಗಳು ಪ್ರಕೃತಿಯನ್ನು ಸಹ ಒಂದು ದೇವತೆಯನ್ನಾಗಿ ಕಂಡು ವರ್ಣಿಸಿದ್ದಾರೆ. ಮನಸನ್ನು ಸೆಳೆಯುವ ಪ್ರಕೃತಿಯು, ಪರಿಶುದ್ಧ ಭಾವನೆಯನ್ನುಂಟುಮಾಡುವ ಪ್ರಕೃತಿಯು ಆರ್ಯರಿಗೆ ದೇವತೆಗಳ ಪ್ರತಿನಿಧಿಯಾಗಿ ಕಂಡಿತು. ಅದರಂತೆಯೇ ಪ್ರಕೃತಿಯು ಒಂದು ದೇವತೆ ಎಂದು ವಿವಿಧವಾಗಿ ಕೊಂಡಾಡಿದ್ದಾರೆ. ವೇದಕಾಲದ ಋಷಿಗಳು ಪ್ರಪಂಚದಲ್ಲಿ ನಾನಾ ರೂಪದಿಂದ ವಿರಾಜಿಸುತ್ತಿರುವ, ಬಾಗಿ, ಬಗ್ಗಿ, ಕುಣಿಯುತ್ತಿರುವ ಪ್ರಕೃತಿಯಲ್ಲಿ ಸರ್ವತ್ರ ವ್ಯಾಪಿಸಿಕೊಂಡಿರುವ ಒಂದೇ ಒಂದು ವಸ್ತುವು ಇವಕ್ಕೆಲ್ಲಾ ಕಾರಣವೆಂದು ಅತ್ಯಂತ ಪ್ರಾಚೀನಕಾಲದಲ್ಲಿಯೇ ಕಂಡುಹಿಡಿದರು. ಆ ಮೂಲವಸ್ತುವಿಗೆ ಆತ್ಮ ಅಥವಾ ಈಶ್ವರ ಎಂದು ಹೆಸರುಕೊಟ್ಟು ಕರೆದಿದ್ದಾರೆ. ಸಮಸ್ತ ಪ್ರಪಂಚದ ದೇವತೆಗಳಿಗೆಲ್ಲಾ ಈ ಆತ್ಮವಸ್ತುವೇ ಮೂಲವು. ಈ ಆತ್ಮವಸ್ತುವಿನ ವಿಭಿನ್ನ ಪ್ರತೀಕಗಳೇ ಪ್ರಪಂಚದ ಎಲ್ಲಾ ದೇವತೆಗಳು ಎಂದು ನಮ್ಮ ಆರ್ಯ ಋಷಿಗಳು ತಿಳಿದರು; ತಿಳಿದಿದ್ದನ್ನು ಕಂಡರು; ಕಂಡದ್ದನ್ನು ಹೊಗಳಿ ಹೇಳಿರುವರು.

ಆರ್ಯ ಋಷಿಗಳು "ಮಾನವನ ಜೀವನಕ್ಕೆ ಆವಶ್ಯಕವಾದ ಪದಾರ್ಥಗಳನ್ನು ಅಥವಾ ಜೀವನಾವಶ್ಯಕವಾದ ಪದಾರ್ಥಗಳಿಗೊಂದೊಂದು ಅಧಿದೇವತೆಗಳಿವೆ" ಎಂದು ಹೇಳಿ ಅವುಗಳನ್ನು ಪ್ರಾರ್ಥಿಸಿದಂತೆಯೇ ಜೀವನಕ್ಕೆ ಪ್ರತಿಬಂಧಕವಾದ ಪದಾರ್ಥಗಳನ್ನೂ, ತೊಂದರೆಕೊಡುವ ಶಕ್ತಿಗಳನ್ನೂ ಸಹ ದೇವತೆಗಳೆಂದು ಹೇಳಿ, ಅಥವಾ ಅವುಗಳಲ್ಲಿಯೂ ಒಂದೊಂದು ಅಧಿದೇವತೆಗಳನ್ನು ಕಂಡು ಅವುಗಳನ್ನೂ ಸಹ ಹಾಡಿ ಹೊಗಳಿದ್ದಾರೆ. ಆದ್ದರಿಂದ ಒನಕೆ, ಒರಳು ಮೊದಲಾದ ನಿತ್ಯಜೀವನಕ್ಕೆ ಅವ

# ೭. ಕೆಲವು ಗಣನೀಯ ವಿಷಯಗಳು.



ವೇದಗಳಿಗೆ ನೇರವಾಗಿ ಅಥವಾ ಪರಂಪರೆಯಾಗಿ ಸಂಬಂಧಪಟ್ಟ ಅನೇಕ ವಿಷಯಗಳಿವೆ. ವೇದಮಂತ್ರಗಳಿಗೆ ಹಚ್ಚುವ ಸ್ವರ, ವೇದವಿಹಿತವಾದ ಯಜ್ಞ, ವೇದದಲ್ಲಿ ಮೂರ್ತಿಪೂಜೆ, ಶಕ್ತಿಯುಪಾಸನೆ, ವೇದದೊಳಗೆ ವರ್ಣಿತವಾದ ರಾಜ್ಯಶಾಸನಕ್ರಮ, ವೇದಾಭ್ಯಾಸಕ್ಕೆ ಅಧಿಕಾರಿಗಳು, ವೇದಕಾಲದ ಸಮಾಜರೀತಿ, ಸ್ತ್ರೀಯರಸ್ಥಾನ, ವರ್ಣವ್ಯವಸ್ಥೆ, ಇತಿಹಾಸ ಭೂಗೋಳಾದಿಗಳು ಮೊದಲಾದ ಅನೇಕವಿಷಯಗಳು ಅವಶ್ಯವಾಗಿ ವಿವೇಚಿಸಲು ಯೋಗ್ಯವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಲು ಪ್ರಯತ್ನಿಸಿದ್ದೇನೆ.

## ವೇದದ ಸ್ವರಗಳು

ವೇದಮಂತ್ರಗಳನ್ನು ಪಾರಾಯಣ ಮಾಡುವಾಗಲೂ ಮತ್ತು ಅವುಗಳನ್ನು ಕರ್ಮಗಳಲ್ಲಿ ಉಪಯೋಗಿಸಿಕೊಳ್ಳುವಾಗಲೂ ಸಹ ಮಂತ್ರಗಳ ಶಬ್ದಪರಿಶುದ್ಧತೆಯಷ್ಟೇ ಮಹತ್ವವನ್ನು ಮಂತ್ರಗಳ ಉದಾತ್ತಾನುದಾತ್ತಾದಿ ಸ್ವರಗಳೂ ಹೊಂದಿರುತ್ತವೆ. ವೇದಮಂತ್ರಗಳನ್ನು ಸ್ವರಬದ್ಧವಾಗಿ ಹೇಳಿದರೆ, ಅವು ಪದ್ಯಗಳಂತೆ ಹೇಳುವುದಕ್ಕೆ ಸುಲಭವೂ, ಕೇಳುವುದಕ್ಕೆ

ಚಿತವೂ ಆಗಿರುತ್ತವೆ. ಸ್ವರಗಳನ್ನು ಬಿಟ್ಟು ಅಥವಾ ತಪ್ಪುತಪ್ಪಾಗಿ ಸ್ವರಗಳನ್ನು ಸೇರಿಸಿ ಮಂತ್ರಗಳನ್ನು ಹೇಳಿದರೆ ಅವು ಅಸಂಬದ್ಧವಾಗಿ, ಕೇಳುವುದಕ್ಕೆ ಕರ್ಣಕಠೋರವಾಗಿ ಪರಿಣಮಿಸುತ್ತವೆ. ಹೇಳುವುದಕ್ಕೂ ಸಹ ಸರಿಯಾಗಿ ಬರದೆ ಗಡಿಬಿಡಿಯಾಗಿ ಅವು ಛಂದಸ್ಸಿನಂತೆಯೇ ತೋರುವುದಿಲ್ಲ. ಮಂತ್ರಗಳನ್ನು ಅಪಸ್ವರವಾಗಿ ಹೇಳಿದರೆ ಮಂತ್ರಗಳ ಅರ್ಥವನ್ನೂ ಸರಿಯಾಗಿ ತಿಳಿದುಕೊಳ್ಳಲು ಬರುವುದಿಲ್ಲ. ಮತ್ತು ಹಾಗೆ ತಪ್ಪಾಗಿ ಹೇಳುವುದರಿಂದ ಮಂತ್ರಗಳಿಗೆ ಅಪಾರ್ಥ ವಿಪರೀತಾರ್ಥಗಳು ಆಗುತ್ತವೆ.

ಮಂತ್ರೋ ಹೀನಃ ಸ್ವರತೋ ವರ್ಣತೋ ವಾ
ಮಿಥ್ಯಾ ಪ್ರಯುಕ್ತೋ ನ ತಮರ್ಥಮಾಹ॥
ಸ ವಾಗ್ವಜ್ರಂ ಯಜಮಾನಂ ಹಿನಸ್ತಿ
ಯಥೇಂದ್ರಶತ್ರುಃ ಸ್ವರತೋಽಪರಾಧಾತ್

"ಸ್ವರ ಮತ್ತು ವರ್ಣಗಳನ್ನು ತಪ್ಪು ತಪ್ಪಾಗಿ ಹೇಳುವುದರಿಂದ ಮಂತ್ರಗಳು ಹೀನವಾಗುತ್ತವೆ. ಹಾಗೆ ತಪ್ಪಾಗಿ ಹೇಳಲ್ಪಟ್ಟ ಮಂತ್ರಗಳು ಸರಿಯಾದ ಅರ್ಥವನ್ನೂ ಪ್ರಯೋಜನವನ್ನೂ ಕೊಡುವುದಿಲ್ಲ. ಇಂದ್ರಶತ್ರುವು ಸ್ವರಸ್ಖಾಲಿತ್ಯದಿಂದ ನಾಶಹೊಂದಿದಂತೆ ತಪ್ಪಾಗಿ ಹೇಳಲ್ಪಟ್ಟ ಮಂತ್ರಗಳು ವಾಗ್ವಜ್ರವಾಗಿ ಯಜಮಾನನನ್ನು ಹಾಳು ಮಾಡುತ್ತವೆ" ಎಂದು ಹೇಳಿದೆ. "ಇಂದ್ರಶತ್ರುಂ ವರ್ಧಸ್ವ" ಎಂಬ ಮಂತ್ರದಲ್ಲಿ ಸ್ವರ ವ್ಯತ್ಯಾಸವಾದ್ದರಿಂದಲೇ ಇಂದ್ರನ ಶತ್ರುವಾದ ವೃತ್ರಾಸುರನು ನಾಶಹೊಂದಿದನಂತೆ. ಆದ್ದರಿಂದ ವೇದಮಂತ್ರಗಳನ್ನು ಹೇಳುವಾಗ ಮಂತ್ರಗಳ ಶಬ್ದ ಅಕ್ಷರಗಳನ್ನಾಗಲೀ, ಸ್ವರಗಳನ್ನಾಗಲೀ ಸ್ವಲ್ಪ ವ್ಯತ್ಯಾಸಮಾಡಿದರೂ ಅಪರಾಧವಾಗುತ್ತದೆ.

ವೇದಮಂತ್ರಗಳಲ್ಲಿ ಹೇಳುವ ಸ್ವರಗಳಿಗೆ ಉದಾತ್ತ ಅನುದಾತ್ತ, ಸ್ವರಿತಗಳೆಂದು ಹೆಸರು. ಪಾಣಿನಿಯು ಇವುಗಳ ಲಕ್ಷಣವನ್ನು, ಉಚ್ಚೈರುದಾತ್ತಃ, ನೀಚೈರನುದಾತ್ತಃ, ಸಮಾಹಾರಃ ಸ್ವರಿತಃ ಅಂದರೆ ಮೇಲಕ್ಕೆ ಸ್ವರ ಮಾಡಿ ಹೇಳುವುದು ಉದಾತ್ತವೆಂದೂ, ಕೆಳಕ್ಕೆ ಸ್ವರಮಾಡಿ ಹೇಳುವುದು

ಮತ್ತು ಪತಿ, ಪತ್ನಿಯರು, ಋತ್ವಿಜರು, ದಕ್ಷಿಣೆ, ಸ್ನಾನ, ಯಾಗ, ಆತ್ಮ ಸ್ತುತಿ ಮೊದಲಾದವು ಸಹ ದೇವತೆಗಳಾಗಿವೆ. ವೇದದೊಳಗಿನ ದೇವತಾ ಶಬ್ದಕ್ಕೆ ಮಂತ್ರಗಳಲ್ಲಿ ಯಾವ ವಿಷಯವನ್ನು ಅಥವಾ ಯಾರನ್ನು ಉದ್ದೇಶಿಸಿ ವಿಷಯ ಪ್ರತಿಪಾದನೆಯು ಇರುವುದೋ ಆ ಮಂತ್ರಕ್ಕೆ ಅದೇ ದೇವತೆ ಎಂಬ ಹೆಸರನ್ನು ಕೊಟ್ಟಿದ್ದಾರೆಂದು ಸಾಮಾನ್ಯವಾಗಿ ಹೇಳಿರುವುದರಿಂದ ಇವೆಲ್ಲವೂ ದೇವತೆಗಳಾಗಿವೆ. ಋಕ್ ಮತ್ತು ಯಜುರ್ವೇದಗಳ ದೇವತೆಗಳ ಹೆಸರುಗಳನ್ನು ಸೇರಿಸಿ ಅಕಾರಾದಿಯಾದ ಅವುಗಳ ಪಟ್ಟಿಯನ್ನು ಸಹ ಕೊನೆಗೊಂದು ಪರಿಶಿಷ್ಟದಲ್ಲಿ ಕೊಟ್ಟಿದೆ.

ಋಗ್ವೇದದಲ್ಲಿರುವ ದೇವತೆಗಳೇ ಯಜುರ್ವೇದದಲ್ಲಿಯೂ ಮತ್ತಿತರ ವೇದಗಳಲ್ಲಿಯೂ ಸಾಮಾನ್ಯವಾಗಿ ವರ್ಣಿತವಾಗಿವೆ. ಆದರೆ ಋಗ್ವೇದದಲ್ಲಿ ಕಾಣದ ಕೆಲವು ದೇವತೆಗಳು ಯಜುರ್ವೇದದಲ್ಲಿ ಕಾಣಿಸುತ್ತವೆ. ಋಗ್ವೇದದಲ್ಲಿಲ್ಲದ ಸುಮಾರು ೬೦-೭೦ ದೇವತೆಗಳು ಯಜುರ್ವೇದದಲ್ಲಿವೆ ಎಂದು ಉಪಾಕರ್ಮ ಕಾಂಡದಲ್ಲಿ ದೇವತರ್ಪಣಾವಸರದಲ್ಲಿ ಉಲ್ಲೇಖಿಸಿದ ದೇವತೆಗಳ ಹೆಸರಿನಿಂದ ಹೇಳುವಂತಿದೆ. ಈ ದೃಷ್ಟಿಯಿಂದ ನಮಗೆ ಎಣಿಕೆಗೆ ಸಿಗುವ ಒಟ್ಟು ದೇವತೆಗಳ ಸಂಖ್ಯೆಯು ಸುಮಾರು ೩೦೦ ರಷ್ಟು ಕಾಣಬರುತ್ತದೆ.

## ಛಂದಸ್ಸು

ಛಂದಸ್ಸು ಎಂದರೆ ನಿಯಮಿತವಾದ ಅಕ್ಷರ ಮಾತ್ರಾಗಣಗಳಿಂದ ಕೂಡಿದ ವೃತ್ತವೆಂದು ಹೇಳಬಹುದು. ವೇದಗಳಲ್ಲಿ ಉಪಯುಕ್ತವಾದ ಛಂದಸ್ಸುಗಳು ಪ್ರಧಾನವಾಗಿ ಆರು ಇವೆ. ಈ ಆರು ಛಂದಸ್ಸುಗಳೇ ಸ್ವಲ್ಪ ಸ್ವಲ್ಪ ಬದಲಾವಣೆಯಾಗುತ್ತಾ ೨೧ ಛಂದಸ್ಸುಗಳಾಗಿವೆ. ಹಾಗೆಯೇ ಮತ್ತಿಷ್ಟು ಬದಲಾವಣೆಯಾಗುತ್ತಾ ನೂರಾರು ಛಂದಸ್ಸುಗಳಾಗಿ ಉಪಯುಕ್ತವಾಗಿವೆ. ಲೌಕಿಕ ಸಾಹಿತ್ಯದಲ್ಲಿ ಉಪಯೋಗಿಸುವ ಅನೇಕ ಛಂದಸ್ಸುಗಳು ವೇದಗಳಲ್ಲಿ ಉಪಯುಕ್ತವಾಗಿವೆ ಛಂದಸ್ಸುಗಳ ವಿಷಯವಾಗಿ ಮುಂದೆ ವೇದಾಂಗಗಳನ್ನು ತಿಳಿಸುವಾಗ ಹೆಚ್ಚು ಬರೆದಿದೆಯಾದ್ದರಿಂದ ಇಲ್ಲಿ ಹೆಚ್ಚಿನದೇನೂ ಹೇಳಬೇಕಾದ ಅವಶ್ಯಕತೆ ಕಾಣಬರುವುದಿಲ್ಲ.

# ವಿನಿಯೋಗ

ವೇದಮಂತ್ರಗಳನ್ನು ಯಾವ ಕರ್ಮಕ್ಕೆ ಉಪಯೋಗಿಸಿಕೊಳ್ಳುತ್ತೇವೆಯೋ, ಮತ್ತು ಯಾವ ಕಾಮನೆಯಿಂದ ಕರ್ಮವನ್ನು ಮಾಡುತ್ತೇವೆಯೋ ಆ ಮಂತ್ರಕ್ಕೆ ಅದೇ ವಿನಿಯೋಗವೆಂದು ಹೇಳಿಸಿಕೊಳ್ಳುತ್ತದೆ. ಐಹಿಕಾಮುಷ್ಮಿಕವಾದ ಫಲಗಳಿಗಾಗಿ ಮಾಡುವ ಎಲ್ಲಾ ಕರ್ಮಗಳಿಗೂ ವೇದಮಂತ್ರಗಳನ್ನು ಉಪಯೋಗಿಸಿಕೊಂಡೇ ಮಾಡಲಾಗುತ್ತಿದೆ. ಆದ್ದರಿಂದ ವಿನಿಯೋಗಗಳು ಇಷ್ಟೇ ಇವೆಯೆಂದು ಹೇಳಲು ಬರುವಂತಿಲ್ಲ. ಅಗ್ನಿಷ್ಟೋಮ, ಚಯನ, ಶ್ರೌತಯಾಗಗಳಲ್ಲಿಯೂ, ಶತ್ರುಪ್ರಶಮನ, ಸವತಿನಾಶನ ಯಕ್ಷ್ಮಪರಿಹಾರ, ವೃಷ್ಟಿ, ಮೊದಲಾದವುಗಳನ್ನು ಒದಗಿಸುವ ಕರ್ಮಗಳಲ್ಲಿ ಮಂತ್ರಗಳನ್ನು ಉಪಯೋಗಿಸುವುದರಿಂದ ಆಯಾ ಸೂಕ್ತ ಮಂತ್ರಗಳಿಗೆ ಅವನ್ನು ಉಪಯೋಗಿಸುವ ಕರ್ಮಗಳೇ ವಿನಿಯೋಗವಿರುತ್ತವೆ. ಆದ್ದರಿಂದ ವಿನಿಯೋಗವೆಂದರೆ ಕರ್ಮದಲ್ಲಿ ಉಪಯೋಗವೆಂದು ಸಾಮಾನ್ಯವಾಗಿ ಹೇಳಬಹುದು.

ಮಂತ್ರಗಳ ಅರ್ಥ ಮತ್ತು ಅವುಗಳಲ್ಲಿನ ವಿಷಯಗಳು ಒಂದಾಗಿದ್ದರೂ, ಬೇರೊಂದು ವಿಷಯಕ್ಕೆ ಸಂಬಂಧಪಟ್ಟ ಕರ್ಮದಲ್ಲಿ ಅವನ್ನು ವಿನಿಯೋಗಿಸಲಾಗುತ್ತದೆ. ಅರ್ಥಾಂತರವನ್ನುಹೊಂದಿದ ಒಂದು ಮಂತ್ರವು ವಿನಿಯೋಗದ ಮಹಿಮೆಯಿಂದ, ಶಾಬ್ದಿಕ ಮಹಿಮೆಯಿಂದ ಕರ್ಮಗಳ ಸಂಪೂರ್ಣ ಫಲಗಳನ್ನು ಕೊಡಿಸಲು ಸಮರ್ಥವಾಗುತ್ತವೆಯೆಂದು ನಮ್ಮ ಪ್ರಾಚೀನ ಆಚಾರ್ಯರು ಧೃಢ ವಿಶ್ವಾಸದಿಂದ ವಿನಿಯೋಗಿಸುತ್ತಾ ಬಂದಿದ್ದಾರೆ. ಆದ್ದರಿಂದ ವೇದಮಂತ್ರಗಳ ಶಬ್ದ ಅರ್ಥಗಳಿಗಿಂತಲೂ ಕರ್ಮಗಳಲ್ಲಿ ವಿನಿಯೋಗವು ಅತ್ಯಂತ ಮಹತ್ವವನ್ನು ಹೊಂದಿರುತ್ತದೆ. ಎಂದ ಮೇಲೆ ಮಂತ್ರಗಳ ಶಬ್ದಾರ್ಥಗಳು ಒಂದಾಗಿದ್ದು, ಬೇರೊಂದು ಕರ್ಮದಲ್ಲಿ ಆ ಮಂತ್ರಗಳನ್ನು ಬಳಸಿಕೊಳ್ಳುವ ನಮ್ಮ ಪ್ರಾಚೀನ ಸಂಪ್ರದಾಯಕ್ಕೆ ಆಶ್ಚರ್ಯ ಪಡಬೇಕಾದ ಪ್ರಮೇಯವೇನೂ ಇಲ್ಲ.

ಕ್ಯಕವಾದ ಪದಾರ್ಥಗಳಿಂದ ಮೊದಲುಗೊಂಡು ರಥ, ತುರಗ, ಗೋವು, ದಧಿ, ತುಪ್ಪ, ಬೆಂಕಿ, ನೀರು, ಬೆಳಕು, ಸೂರ್ಯ, ಮೋಡ, ಮಳೆ ಮೊದಲಾದ ಪದಾರ್ಥಗಳಂತೆಯೇ ಸರ್ಪ, ವ್ಯಾಘ್ರ, ದಸ್ಯು, ರಾಕ್ಷಸ ಮೊದಲಾದ ಮಾನವನಿಗೆ ತೊಂದರೆಯನ್ನು ಕೊಡುವ ಪ್ರಾಣಿಗಳನ್ನೂ ಸಹ ದೇವತೆಗಳೆಂದು ಆರ್ಯ ಋಷಿಗಳು ವೇದಗಳಲ್ಲಿ ಭಯ ಭಕ್ತಿಗಳಿಂದ ಸ್ತೋತ್ರ ಮಾಡಿದ್ದಾರೆ. ಇಷ್ಟೆಲ್ಲಾ ವಿವಿಧ ಮುಖವಾದ ದೇವತೆಗಳಿದ್ದರೂ ಅವೆಲ್ಲವೂ ಪ್ರಧಾನವಾಗಿ ಪೃಥಿವೀ, ಅಂತರಿಕ್ಷ ದ್ಯುಸ್ಥಾನೀಯವಾದ ಮೂರು ಬಗೆಯ ದೇವತೆಗಳ ವಿಭೂತಿಗಳು ಅಥವಾ ಅಂಶಗಳಾಗಿರುತ್ತವೆ. ಅಸಂತವಾದ ಕರ್ಮಗಳನ್ನು, ಕಾಮನೆಗಳನ್ನು ಅನುಸರಿಸಿ ಆ ಮೂರು ಬಗೆಯ ದೇವತೆಗಳನ್ನೇ ಅನೇಕ ಹೆಸರುಗಳಿಂದ ವರ್ಣಿಸಿದ್ದಾರೆ. ಈ ಮೂರು ವಿಧವಾದ ದೇವತೆಗಳ ಶಬ್ದಪ್ರತೀಕಗಳು ಮಹಾವ್ಯಾಹೃತಿಗಳಾದ ಭೂಃ ಭುವಃ, ಸುವಃ ಎಂಬ ಮೂರು ಮಹಾ ವ್ಯಾಹೃತಿಗಳಾಗಿವೆ. ಇವಕ್ಕೆ ಮೂಲವಾದ ದೇವತೆಯು ಪ್ರಜಾಪತಿಯು. ಅವು ಪ್ರಜಾಪತಿದೇವತೆಯ ಮೂರು ರೂಪಗಳು, ಪ್ರಜಾಪತಿ ದೇವತೆಯ ಶಾಬ್ದಿಕ ಪ್ರತೀಕವು ಓಂಕಾರವು, ಇದರ ಮೂಲರೂಪವೇ ಬ್ರಹ್ಮವಸ್ತುವು. ಈ ಬ್ರಹ್ಮವಸ್ತುವೇ ಆತ್ಮವೆಂದು ದೇವತೆಗಳ ವ್ಯಕ್ತ ಅವ್ಯಕ್ತ ರೂಪಗಳನ್ನು ಅಥವಾ ಸಂಕೋಚ ವಿಕಾಸ ರೂಪಗಳನ್ನು ಆರ್ಯ ಋಷಿಗಳು ವೇದದಲ್ಲಿ ವರ್ಣಿಸಿದ್ದಾರೆ.

ಯಜುರ್ವೇದಕ್ಕೆ ಸಂಬಂಧಪಟ್ಟ ಸೂತ್ರ ಗ್ರಂಥಗಳಲ್ಲಿಯೂ ಸಹ ಇತರ ಗ್ರಂಥಗಳಲ್ಲಿ ದೇವತೆಗಳನ್ನು ವಿಭಾಗಿಸಿದಂತೆಯೇ ಪೃಥಿವೀ ಅಂತರಿಕ್ಷ, ದ್ಯು, ಸ್ಥಾನೀಯಗಳೆಂದು ಮೂರು ತರಹ ವಿಭಾಗಿಸಿದ್ದರೂ ಈ ದೇವತೆಗಳ ಗುಂಪನ್ನು ಮತ್ತೊಂದು ರೀತಿಯಿಂದ ನಾಲ್ಕು ತರಹ ವಿಭಾಗ ಮಾಡಿದ್ದಾರೆ. ವೇದಗಳಲ್ಲಿ ವರ್ಣಿತವಾದ ಎಲ್ಲಾ ದೇವತೆಗಳನ್ನೂ, ಪೂರ್ವ ದ್ವಾರೀಯ, ದಕ್ಷಿಣದ್ವಾರೀಯ, ಪಶ್ಚಿಮ ದ್ವಾರೀಯ, ಉತ್ತರ ದ್ವಾರೀಯಗಳೆಂದು ನಾಲ್ಕು ತರಹ ವಿಭಾಗವಾಡಿ ಯಾವ ಯಾವ ದಿಕ್ಕುಗಳಿಗೆ ಸಂಬಂಧಿಸಿದ ದೇವತೆಗಳು ಯಾವ ಯಾವ ದೇವತೆಗಳು ಎಂಬುದನ್ನು ಸಹ ಒಂದು ರೀತಿಯಿಂದ ಹೇಳಿದ್ದಾರೆ.

೧ ಪ್ರಾಗ್ದ್ವಾರೀಯ ದೇವತೆಗಳು:—೧) ಅಗ್ನಿ, ೨) ಪ್ರಜಾಪತಿ, ೩) ಸೋಮ, ೪) ರುದ್ರ, ೫) ಅದಿತಿ, ೬) ಬೃಹಸ್ಪತಿ, ೭) ಸರ್ಪಗಳು ೮) ಅಷ್ಟವಸುಗಳು, ಇವೆಂಟು ಪೂರ್ವದಿಕ್ಕಿನ ಬಾಗಿಲಿನ ದೇವತೆಗಳು.

೨ದಕ್ಷಿಣದ್ವಾರೀಯ:—೧) ಪಿತೃಗಳು, ೨) ಅರ್ಯಮಾ, ೩) ಭಗ ೪) ಸವಿತಾ, ೫) ತ್ವಷ್ಟೃ, ೬) ವಾಯು, ೭) ಇಂದ್ರ, ೮) ಅಗ್ನಿ, ೯) ರುದ್ರರು, ಈ ಒಂಬತ್ತು ದಕ್ಷಿಣದಿಕ್ಕಿನ ಬಾಗಿಲಿನ ದೇವತೆಗಳು.

೩ ಪಶ್ಚಿಮದ್ವಾರೀಯ:—೧)ಮಿತ್ರ ೨)ಇಂದ್ರ ೩) ಮಹಾಪಿತರ ೪) ಆಪಃ ೫) ವಿಶ್ವೇದೇವಾಃ ೬) ಬ್ರಹ್ಮಾ ೭) ವಿಷ್ಣು ೮) ಆದಿತ್ಯರು ಇವೆಂಟು ದೇವತೆಗಳು ಪಶ್ಚಿಮದಿಕ್ಕಿನವುಗಳು.

೪ ಉತ್ತರದ್ವಾರೀಯ:—೧)ಸವ ೨) ವರುಣ ೩) ಭಗ ೪) ಏಕಪಾತ್ ೫) ಅಹಿರ್ಬುಧ್ನ್ಯಗಳು ೬)ಪೂಷಾ ೭) ಅಶ್ವಿನಿ ದೇವತೆಗಳು ೮) ಯಮ ೯) ಸಾಧ್ಯರು ಇವೊಂಬತ್ತು ಉತ್ತರದ್ವಾರದ ದೇವತೆಗಳು.

ಈ ವಿಭಾಗದ ರೀತಿಯಲ್ಲಿ ಕೆಲವು ದೇವತೆಗಳ ಹೆಸರುಗಳು ಎರಡು ಕಡೆಗಳಲ್ಲಿ ಬಂದಿವೆ. ಹೀಗೆ ಎರಡುಕಡೆ ಬಂದ ಒಂದೇ ದೇವತೆಯ ಹೆಸರನ್ನು ಪ್ರತ್ಯೇಕವಾಗಿ ತೆಗೆದುಕೊಂಡರೆ ಇವು ಸಹ ಮೂವತ್ತು ಮೂರು ದೇವತೆಗಳಾಗುತ್ತವೆ. ಇವುಗಳಲ್ಲಿ ಇಂದ್ರ, ಅಗ್ನಿ, ಭಗ ಇವುಮೂರು ದೇವತೆಗಳ ಹೆಸರು ಎರಡುಸಲ ಬಂದಿರುವುದರಿಂದ ಅವು ಆರಕ್ಕೆ ಮೂರು ಎಂದು ಇಟ್ಟುಕೊಂಡರೆ ಒಟ್ಟು ಈ ವಿಭಾಗ ಕ್ರಮದಲ್ಲಿ ಮೂವತ್ತು ದೇವತೆಗಳಾಗುವರು. ಇವು ಮೂರು ದೇವತೆಗಳ ಹೆಸರನ್ನು ಪ್ರತ್ಯೇಕವಾಗಿ ಹೇಳಿರುವುದಕ್ಕೆ ಇವು ಪ್ರತ್ಯೇಕವಾಗಿ ಎರಡು ದೇವತೆಗಳೇ ಇವೆಯೋ ಅಥವಾ ಬೇರೆ ಕಾರಣಗಳಿಂದ ಹೇಳಿರುವರೋ ತಿಳಿಯದು.

ನಮಗೆ ದೇವತೆಗಳ ಸಂಖ್ಯೆಯು ಅನಂತವಾಗಿ ಕಾಣಬರುವಂತೆ ಇದ್ದರೂ ವೇದಗಳಲ್ಲಿ ಹೆಸರಿಸಿರುವ ದೇವತೆಗಳ ಸಂಖ್ಯೆಯು ಸುಮಾರು ೨೦೦ ಇವೆ ಎಂದು ಹೇಳಬಹುದು. ಅನೇಕ ಮಂತ್ರಗಳಿಗೆ ಋಷಿಗಳು ಸಹ ದೇವತೆಗಳಾಗಿದ್ದಾರೆ. ಅದರಂತೆಯೇ ಅನೇಕ ರಾಜರು ದೇವತೆಗಳಾಗಿದ್ದಾರೆ.

ಅನುದಾತ್ತವೆಂದೂ, ಮಧ್ಯಮ ಸ್ವರಗಳಲ್ಲಿ ಹೇಳುವುದು ಸ್ವರಿತವೆಂದೂ ಹೇಳಿರುವನು. ಈ ಸ್ವರಗಳೂ ಸಂಗೀತ ಶಾಸ್ತ್ರದಲ್ಲಿ ಉಕ್ತವಾದ ಸ್ವರಗಳೂ ವೇದ ಮಂತ್ರಗಳನ್ನು ಹೇಳುವಾಗ ಹೊಂದಿಕೊಳ್ಳುತ್ತವೆ. ಸಂಗೀತದ ನಿಷಧ ಗಾಂಧಾರಗಳು ಉದಾತ್ತ ಸ್ವರಗಳಾಗಿಯೂ, ಋಷಭ, ಧೈವತಗಳು ಅನುದಾತ್ತ ಸ್ವರಗಳಾಗಿಯೂ ಷಡ್ಜ, ಮಧ್ಯಮ, ಪಂಚಮಸ್ವರಗಳು ಸ್ವರಿತಸ್ವರಗಳಾಗಿಯೂ ವೇದಮಂತ್ರಗಳನ್ನು ಹೇಳುವಾಗ ಉಪಯುಕ್ತವಾಗುತ್ತವೆಂದು ಯಾಜ್ಞ್ಯನು ಹೇಳಿರುವನು.

ವೇದಮಂತ್ರಗಳು ಸಾರ್ವತ್ರಿಕವಾಗಿ ಮೂರು ಸ್ವರಗಳಲ್ಲಿ ಸಂಚರಿಸುತ್ತಿರುವವಾದರೂ, ಕೆಲವು ಕಡೆಗಳಲ್ಲಿ ಐದು ಸ್ವರಗಳಲ್ಲಿಯೂ ಸಂಚರಿಸುತ್ತವೆ. ಶೃತಿಭೇದದಿಂದ ಸಂಗೀತದ ಸಪ್ತಸ್ವರಗಳೂ ಸಹ ಮಂತ್ರ ಹೇಳುವಾಗ ಉಪಯುಕ್ತವಾಗುತ್ತವೆ. ಆದ್ದರಿಂದಲೇ ಸಂಗೀತ ಶಾಸ್ತ್ರವು ವೇದ ಮೂಲಕವಾಗಿದೆಯೆಂದೂ, ಅದರಲ್ಲಿಯೂ ಸಾಮ ವೇದದಿಂದ ಸಂಗೀತವನ್ನು ನಾಟಕಕ್ಕೆ ತೆಗದುಕೊಂಡಿದೆಯೆಂದೂ ಸಂಗೀತ ಶಾಸ್ತ್ರಕಾರರು ಹೇಳುತ್ತ ಬಂದಿದ್ದಾರೆ. ಇದನ್ನು ಇಂದಿನ ವಿಮರ್ಶಕರೂ ಒಪ್ಪುತ್ತಿದ್ದಾರೆ.

## ವೈದಿಕ ಯಜ್ಞಗಳು

ವೇದಗಳಲ್ಲಿ ವರ್ಣಿತವಾಗಿರುವ ವಿಷಯಗಳಲ್ಲಿ ಯಜ್ಞಗಳು ಒಂದು ಪ್ರಧಾನ ವಿಷಯವಾಗಿದೆ. ಯಜ್ಞವೆಂದರೆ "ಹೋಮ-ದೇವತೆಗಳನ್ನು ತೃಪ್ತಿ ಪಡಿಸುವುದಕ್ಕೆ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮ ದ್ರವ್ಯಗಳನ್ನು ಹಾಕುವುದು" ಎಂದು ಸಾಮಾನ್ಯವಾದ ಅರ್ಥವು ವ್ಯವಹಾರದಲ್ಲಿದೆ. ಆದರೆ "ಯಜ್ಞ" ಶಬ್ದಕ್ಕೆ ಇದಕ್ಕಿಂತಲೂ ವ್ಯಾಪಕವಾದ ಅರ್ಥವಿದೆ. "ಯಜ್– ದೇವಪೂಜಾ ಸಂಗತೀಕರಣಯಜನದಾನೇಷು" "ದೇವರ ಪೂಜೆ, ಸಂಬಂಧ ಬೆಳೆಸುವಿಕೆ, (ಅತಿಥಿ ಸತ್ಕಾರ ಅಥವಾ ಸ್ನೇಹ ಸಂವರ್ಧನೆ), ಮಂತ್ರಪುರಸ್ಸರವಾಗಿ ಅಗ್ನಿಯಲ್ಲಿ ಹೋಮದ್ರವ್ಯ(ಅನ್ನ, ತುಪ್ಪ, ಪಶು, ಮೊದಲಾದವುಗಳು.) ಗಳನ್ನು ಹಾಕುವುದು, ದಾನ ಮಾಡುವುದು,

ಎಂದು ನಾಲ್ಕು ಅರ್ಥಗಳು ಯಜ್ ಧಾತುವಿಗೆ ಇರುತ್ತವೆ. ಈ ಯಜ್ ಧಾತು ವಿನ ನಾಮರೂಪವಾದ ಯಜ್ಞ ಶಬ್ದಕ್ಕೂ ಸಹ ಈ ನಾಲ್ಕು ಅರ್ಥಗಳು ಇರುವುದು ಸಹಜವಾಗಿರುತ್ತದೆ. ವೇದದೊಳಗಿನ ಯಜ್ಞಶಬ್ದಕ್ಕೂ ಈ ನಾಲ್ಕು ಅರ್ಥಗಳು ಸಮಯಾನುಸಾರವಾಗಿ ಹೊಂದಿಕೊಳ್ಳುತ್ತವೆ.

ಈ ಯಜ್ಞಗಳನ್ನೂ, ಪ್ರಜೆಗಳನ್ನೂ ಬ್ರಹ್ಮನು ಒಂದೇ ಸಮಯದಲ್ಲಿ ಸೃಷ್ಟಿಸಿದನು. ಯಜ್ಞಗಳನ್ನು ಮಾಡುವುದರಿಂದ ದೇವತೆಗಳು ತೃಪ್ತರಾಗುತ್ತಾರೆ. ತೃಪ್ತರಾದ ದೇವತೆಗಳು ಮನುಷ್ಯರಿಗೆ ಇಚ್ಛಿಸಿದ ಫಲಗಳನ್ನು ಕೊಡುತ್ತಾರೆ. ಆದ್ದರಿಂದ ಯಜ್ಞಗಳು "ಈಪ್ಸಿತ ಫಲದಾಯಕ" ಗಳಾಗುತ್ತವೆ. ಈ ಯಜ್ಞಗಳನ್ನು ಕ್ರಮವಾಗಿ ಮಾಡುವವನು ಸನಾತನ ಧರ್ಮನಿಷ್ಠನೆಂದು ಹೇಳಿಸಿಕೊಳ್ಳುತ್ತಾನೆ.

ಎಂತಹ ಜ್ಞಾನಿಗಳೇ ಆಗಲಿ, ಜೀವನ್ಮುಕ್ತರಾಗಲೀ ಯಜ್ಞಗಳನ್ನು ಬಿಡಲೇಬೇಕೆಂಬ ನಿಯಮವಿಲ್ಲ. ಯಜ್ಞಕ್ಕಾಗಿ ಮಾಡಿದ ಕರ್ಮಗಳು ತಾವೇ ಇಂಗಿ ಹೋಗುತ್ತವೆ, ಅಂದರೆ ಅವು ಬಂಧನಕಾರಿಗಳಾಗುವುದಿಲ್ಲ. ಯಜ್ಞಶಿಷ್ಟವಾದ ಅಮೃತವನ್ನು ಸೇವಿಸುವುದರಿಂದ ಸನಾತನವಾದ ಬ್ರಹ್ಮವಸ್ತುವನ್ನು ಹೊಂದುತ್ತಾರೆ.

"ಯಜ್ಞದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್||
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ||
ಯಜ್ಞಶಿಷ್ಟಾಮೃತಭುಜಃ ಯಾಂತಿ ಬ್ರಹ್ಮ ಸನಾತನಂ||

ಎಂದು ಗೀತೆಯಲ್ಲಿ ಹೇಳಿದೆ.

ವೇದೋಕ್ತವಾದ ಯಜ್ಞಗಳನ್ನು ಹವಿರ್ಯಜ್ಞ, ಸೋಮಯಜ್ಞ, ಪಾಕಯಜ್ಞಗಳೆಂದು ಪ್ರಧಾನವಾಗಿ ಮೂರುತರಹ ವಿಭಾಗಿಸಿದ್ದಾರೆ. ಇವುಗಳಲ್ಲಿ ಹವಿರ್ಯಜ್ಞಗಳು ಅಗ್ನ್ಯಾಧಾನ, ಅಗ್ನಿಹೋತ್ರ, ದರ್ಶಪೂರ್ಣಮಾಸ ಆಗ್ರಾಯಣ. ಚಾತುರ್ಮಾಸ್ಯ, ನಿರೂಢ ಪಶುಬಂಧ, ಸೌತ್ರಾಮಣಿ, ಇವು ಏಳು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ವಾಜಪೇಯ, ಅಪ್ತೋರ್ಯಾಮಗಳೆಂದು ಏಳು ಸೋಮ ಯಜ್ಞಗಳು.

ಪಿತೃಯಜ್ಞ, ಪಾರ್ವಣೀಯಜ್ಞ, ಅಷ್ಟಕಾಯಜ್ಞ, ಶ್ರಾವಣೀಯಜ್ಞ, ಆಶ್ವಯುಜೀಯಜ್ಞ, ಆಗ್ರಹಾಯಣೀಯಜ್ಞ, ಚೈತ್ರಯಜ್ಞಗಳೆಂದು ಏಳು ಪಾಕ ಯಜ್ಞಗಳು. ಹೀಗೆ ಇಪ್ಪತ್ತೊಂದು ಮುಖ್ಯ ಯಜ್ಞಗಳಿರುತ್ತವೆ.

ಈ ಯಜ್ಞಗಳನ್ನೇ ಸಕಾಮ ನಿಷ್ಕಾಮಗಳೆಂದ ಮಾಡುವುದರಿಂದ ಇವೇ ನೂರಾರು ಯಜ್ಞಗಳಾಗುತ್ತವೆ. ಸ್ವರಾಜ್ಯಕಾಮನೆಯಿಂದ, ಸಾಮ್ರಾಜ್ಯ, ಶತ್ರುಮಾರಣ, ವೃಷ್ಟಿ, ದೇಶಕ್ಷೇಮ, ಸಮಾಜ, ಸಾಂಸಾರಿಕ ಹಿತವೇ ಮೊದಲಾದ ಕಾಮನೆಗಳಿಂದ ಮಾಡತಕ್ಕ ಅನೇಕ ಯಜ್ಞಗಳು ವೇದಗಳಲ್ಲಿ ಉಕ್ತವಾಗಿವೆ. ರಾಜಸೂಯ, ವಿಶ್ವಜಿದ್ಯಾಗ, ಅಶ್ವಮೇಧ, ಪರ್ಜನ್ಯೇಷ್ಟಿ, ಶ್ಯೇನಯಾಗವೇ ಮೊದಲಾದುವುಗಳು ಇವಕ್ಕೆ ದೃಷ್ಟಾಂತವಾಗುವಂತಿವೆ.

ಈ ಯಜ್ಞಗಳನ್ನೆ ಭಗವದ್ಗೀತೆಯಲ್ಲಿ ದ್ರವ್ಯಯಜ್ಞ, ತಪೋಯಜ್ಞ ಯೋಗಯಜ್ಞ, ಸ್ವಾಧ್ಯಾಯಯಜ್ಞ, ಜ್ಞಾನಯಜ್ಞಗಳೆಂದು ಐದು ವಿಧವಾಗಿ ವಿಭಾಗಿಸಿ ಹೇಳಲಾಗಿದೆ. ಗೀತೆಯಲ್ಲಿನ ಯಜ್ಞ ಶಬ್ದಾರ್ಥವು ಹಿಂದೆ ಹೇಳಿದ ವಿವಿಧ ಯಜ್ಞಗಳಿಗಿಂತಲೂ ವ್ಯಾಪಕವಾಗಿದೆ. ಯಜ್ ಧಾತುವಿನ ದೇವರ ಪೂಜೆ, ಸಂಗತೀಕರಣ, ಯಜನ, ದಾನಗಳೆಂಬ ನಾಲ್ಕು ವಿಧವಾದ ಅರ್ಥಗಳಿಗೂ ಅನ್ವಯಿಸುವಂತೆ ಗೀತೆಯಲ್ಲಿ ಯಜ್ಞ ನಿರೂಪಣೆ ಮಾಡಲಾಗಿದೆ. ಗೀತೆಯ ಅಭಿಪ್ರಾಯದಂತೆ ಪಾಠಪ್ರವಚನ ಮಾಡುವುದೂ ಇಂದ್ರಿಯ ನಿಗ್ರಹವೂ, ಆತ್ಮಚಿಂತನೆ, ತಪಸ್ಸು, ಜ್ಞಾನಗಳೆಲ್ಲವೂ ಯಜ್ಞಗಳಾಗುತ್ತವೆ.

ಗೀತೆಯಲ್ಲಿ ಈ ಯಜ್ಞಗಳೆಲ್ಲವನ್ನೂ ಸಾತ್ವಿಕ ಯಜ್ಞ, ರಾಜಸ ಯಜ್ಞ, ತಾಮಸ ಯಜ್ಞಗಳೆಂದು ಮೂರು ವಿಧವಾಗಿ ಹೇಳಿದೆ. ಫಲಾಪೇಕ್ಷೆಯಿಲ್ಲದೆ ಮಾಡುವ ಯಜ್ಞಗಳು ಸಾತ್ವಿಕ ಯಜ್ಞಗಳು. ಫಲಾನುಸಂಧಾನಪೂರ್ವಕವಾಗಿ ಮಾಡುವುದು ರಾಜಸಯಜ್ಞಗಳು. ಶ್ರದ್ಧೆ, ಮಂತ್ರ, ವಿಧಿ, ವಿಧಾನಗಳೊಂದೂ ಇಲ್ಲದೆ ಮಾಡುವ ಯಜ್ಞವನ್ನು ತಾಮಸಯಜ್ಞಗಳೆಂದು ಹೇಳಿ ಇವುಗಳ ಲಕ್ಷಣಗಳನ್ನು ಸಹ ಹೇಳಿದೆ. ಆದರೆ ವೇದಗಳಲ್ಲಿ

ನಿಷ್ಕಾಮ (ಸಾತ್ವಿಕ), ಸಕಾಮ (ರಾಜಸ) ಎರಡೇ ವಿಧವಾದ ಯಜ್ಞಗಳನ್ನು ಹೇಳಿದೆಯೇ ಹೊರತು ತಾಮಸಯಜ್ಞದ ವಿಷಯವು ಕಾಣುವುದಿಲ್ಲ.

ಗೀತೆಯಲ್ಲಿ ಹೇಳಿದ ಐದು ವಿಧವಾದ ಯಜ್ಞಗಳೂ ವೇದದಲ್ಲಿ ಹೇಳಿದೆ. ದ್ರವ್ಯ ಯಜ್ಞಗಳಿಗೆ ಮಹತ್ವವನ್ನು ಕೊಟ್ಟಂತೆಯೆ ದಾನ, ತಪಸ್ಸು, ಯೋಗ, ಸ್ವಾಧ್ಯಾಯಯಜ್ಞಗಳಿಗೂ ವೇದಗಳು ಮಹತ್ವವನ್ನು ಕೊಟ್ಟಿವೆ. ಆದರೆ ಇಲ್ಲಿ ವ್ಯವಹಾರದಲ್ಲಿರುವ ದೇವತಾ ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಹೋಮದ್ರವ್ಯಗಳನ್ನು ಹಾಕುವ ಯಜ್ಞಗಳನ್ನು ಮಾತ್ರ ವಿವರಿಸಿದ್ದೇನೆ.

## ವೇದೋಕ್ತವಾದ ಮೂರ್ತಿಪೂಜೆ

ಮೂರ್ತಿಪೂಜೆ ಮಾಡುವ ಪದ್ಧತಿಯು ಆಧುನಿಕವಾದದು. ಬುದ್ಧನ ಕಾಲದನಂತರ ಭಾರತದಲ್ಲಿ ಮೂರ್ತಿಪೂಜೆ ಮಾಡುವ ಪದ್ಧತಿಯು ಬಂದಿದೆ. ವೇದಕಾಲದಲ್ಲಿ ಮೂರ್ತಿಪೂಜೆ ಇರಲಿಲ್ಲ- ಬೌದ್ಧಮತವು ಅವನತಿಯ ಪಥವನ್ನು ಹಿಡಿದಮೇಲೆ ಬೌದ್ಧವಿಹಾರ ಮಂದಿರಗಳಲ್ಲಿ ಬೌದ್ಧರು ಮತ್ತು ಸನಾತನಿಗಳು ಒಂದೊಂದು ವಿಗ್ರಹಗಳನ್ನಿಟ್ಟು ಪೂಜಿಸಹತ್ತಿದರು. ಅಲ್ಲಿಂದ ಆರಂಭವಾದ ಮೂರ್ತಿಪೂಜಾಕ್ರಮವು ಬೆಳೆಯುತ್ತಾ ಬಂದಿದೆಂದು ಕೆಲವು ಪಾಶ್ಚಿಮಾತ್ಯ ಪಂಡಿತರು ಅಭಿಪ್ರಾಯಪಟ್ಟರು. ಅದನ್ನೇ ನಿಜವೆಂದು ತಿಳಿದು ಅನೇಕ ಭಾರತೀಯ ವಿದ್ವಾಂಸರು ಸಹ ಪ್ರಚಾರ ಮಾಡುತ್ತಾ ಬಂದಿದ್ದಾರೆ.

ಸ್ಮೃತಿ, ಪುರಾಣ, ಸೂತ್ರಗ್ರಂಥ, ಧರ್ಮಶಾಸ್ತ್ರಗಳಲ್ಲಿ ಯಥೇಷ್ಟವಾದ ಮೂರ್ತಿ ಪೂಜಾಕ್ರಮ, ವಿಧಿವಿಧಾನಗಳು ದೊರೆಯುತ್ತಿದ್ದರೂ, ಅವು ಬುದ್ಧನ ಕಾಲಕ್ಕಿಂತ ಆಧುನಿಕವೆಂದು ತಿಳಿದು ಅವುಗಳಲ್ಲಿರುವ ಪ್ರಮಾಣಗಳೆಲ್ಲವನ್ನೂ ತಳ್ಳಿಬಿಡುತ್ತಾರೆ. ಆದರೆ ವೇದಗಳಿಂದ ಹಿಡಿದು ಸ್ಮೃತಿ ಪುರಾಣಾದಿಗಳೆಲ್ಲವನ್ನೂ ಸಮೀಕ್ಷಣ ದೃಷ್ಟಿಯಿಂದ, ಭಾರತೀಯ ದೃಷ್ಟಿಯಿಂದ ನೋಡಿದರೆ ಇವರ ವಾದವು ಅತ್ಯಂತ ಭ್ರಮಮೂಲಕವಾದುದೆಂದು ಘಂಟಾಘೋಷವಾಗಿ ಹೇಳಬಹುದು.

ಭಾರತೀಯ ಧರ್ಮಶಾಸ್ತ್ರ, ಸಂಸ್ಕೃತಿ, ಸಂಪ್ರದಾಯಾದಿಗಳು ಅನಾದಿ ಕಾಲದಿಂದಲೂ ವೇದಗಳಬಗ್ಗೆ ಸಂಪೂರ್ಣವಾದ ವಿಶ್ವಾಸವನ್ನಿಟ್ಟು

ಕೊಂಡು ಬಂದಿವೆ. ಭಾರತೀಯರು ತಮ್ಮ ಜೀವನದ ಧಾರ್ಮಿಕಾದಿ ಆಚಾರ ವಿಚಾರಗಳೆಲ್ಲವನ್ನೂ ವೈದಿಕವಾಗಿಯೇ ಪೋಷಿಸಿಕೊಂಡು ಬಂದಿರುತ್ತಾರೆ. ಇವರ ಸಂಪ್ರದಾಯದಂತೆ, ಸಂಸ್ಕೃತಿ, ಪರಂಪರೆಯಂತೆ ಯಜ್ಞಯಾಗಾದಿ ಗಳಿಗೆ ವೇದವೇ ಮೂಲವಾಗಿರುವಂತೆ, ಉಪಾಸನೆಗಳಿಗೂ, ಮೂರ್ತಿಪೂಜೆ ಗಳಿಗೂ ಸಹ ವೇದಗಳೇ ತಳಹದಿಯಾಗಿರಬೇಕಾಗುತ್ತದೆ ಆದ್ದರಿಂದ ವೇದಗಳಲ್ಲಿ ಮೂರ್ತಿಪೂಜೆಯ ಗುರುತುಗಳು ಕಾಣಬೇಕಾಗುತ್ತವೆ.

ಶ್ರುತಿ, ಸ್ಮೃತಿ, ಪುರಾಣಾದಿಗಳ ಮೂಲ ತತ್ವವೂ, ಅವುಗಳ ಚರಮ ಮತ್ತು ಪರಮ ಗುರಿಗಳೂ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮ ವಸ್ತುವೇ ಆಗಿದ್ದರೂ ಇದನ್ನು ನಿರಾಕಾರ, ಸಾಕಾರಗಳಾಗಿ ಎರಡು ವಿಧ ದಿಂದಲೂ ಆರ್ಯರು ಕಾಣುತ್ತಾ ಬಂದಿದ್ದಾರೆ. ಪರಮಾತ್ಮನು ನಿರ್ಗುಣ ನಿರಾಕಾರನು; ಆತನು ಮನಸ್ಸು, ಬುದ್ಧಿ, ವಾಕ್ಕುಗಳಿಗೆ ಸಿಲುಕದ ವಸ್ತುವಾ ಗಿರುವಂತೆಯೇ, ಸಗುಣ, ಸಾಕಾರ, ಸ್ಮರಣೀಯ, ವಾಕ್ಯಗೋಚರನಾಗಿಯೂ ಇದ್ದಾನೆಂದು ವೇದಗಳೂ, ಶಾಸ್ತ್ರಗಳೂ ಹೇಳುತ್ತವೆ.

ಯೋಗಿಗಳು ತಮ್ಮ ಯೋಗಸಾಧನೆಯ ಬೇರೆ ಬೇರೆ ಅವಸ್ಥೆಗ ಳಲ್ಲಿ ಪರಮಾತ್ಮನ ಸಾಕಾರ ನಿರಾಕಾರವಾದ ಎರಡು ರೂಪಗಳನ್ನು ಕಾ ಣುತ್ತಾರೆ. ಯೋಗಿಗಳು ಯೋಗಸಾಧನೆಯಿಂದ ನಿರ್ವಿಕಲ್ಪ ಸಮಾಧಿಯ ಅವಸ್ಥೆಯಲ್ಲಿ ನಿರಾಕಾರವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದು ತ್ತಾರೆ. ಹಾಗೆಯೇ ಇವರು ತತ್ವ ಚಿಂತನೆಯಿಂದ ತಾವು ಪ್ರಪಂಚದಲ್ಲಿ ಕೇಳಿದ, ನೋಡಿದ, ಎಲ್ಲಾ ವಸ್ತುಗಳನ್ನೂ ಪರಮಾತ್ಮನ ಸ್ವರೂಪವಾಗಿ ಕಾಣುತ್ತಾರೆ. ಸಮಾಧಿಯ ಒಂದೊಂದು ವಿಶಿಷ್ಟಾವಸ್ಥೆಯಲ್ಲಿ ಇವರು ಅನೇಕ ವಿಧವಾದ ಸಾಕಾರ ಈಶ್ವರನನ್ನು ಒಂದೊಂದು ವಸ್ತುವಿನಲ್ಲಿ ಒಂ ದೊಂದು ವಿಧವಾಗಿ ಕಾಣುತ್ತಾರೆ. ಆದರೆ ಈ ಯೋಗಸಾಧನೆಯು ಸಾಮಾನ್ಯ ಜನರಿಂದ ಸಾಧ್ಯವಾಗುವುದಿಲ್ಲ. ಯೋಗಿಗಳು, ಜ್ಞಾನಿಗಳು ಸಾಕ್ಷಾತ್ಕರಿಸಿಕೊಂಡು ಹೇಳಿದ ಪರಮಾತ್ಮನ ರೂಪಗಳನ್ನು ಸಾಕಾರಮೂ ರ್ತಿಯನ್ನಾಗಿ ಸಾಮಾನ್ಯ ಜನರು ಪೂಜಿಸುತ್ತಾರೆ. ಮಾನವನ ಮನಸ್ಸು ಸಹಜವಾಗಿ ಚಂಚಲವಾಗಿರುತ್ತದೆ. ಇಂದ್ರಿಯಗಳು ಚಂಚಲವಾದ ಮನ

ಸ್ಸನ್ನು ಹಿಂಬಾಲಿಸಿ ವಿಷಯಗಳಕಡೆ ಓಡುತ್ತಿರುತ್ತದೆ. ಹಾಗೆ ಇಂದ್ರಿಯ ಗಳನ್ನು ಕಟ್ಟಿಕೊಂಡು ಓಡುತ್ತಿರುವ ಮನಸ್ಸನ್ನು ನಿರಾಕಾರವಾದ ವಸ್ತು ವಿನಲ್ಲಿ ಕೂಡಿಸುವುದಿರಲಿ, ಅಂತಹ ಒಂದು ನಿರಾಕಾರವಾದ ವಸ್ತುವಿದೆ ಯೆಂದು ಒಮ್ಮೆ ಮನಃಪಟಲದಲ್ಲಿ ಒಂದುಕ್ಷಣ ಕಲ್ಪಿಸಿಕೊಳ್ಳುವುದಕ್ಕೂ ಇವರಿಂದ ಅಸಾಧ್ಯ; ಇಂಥವರ ಮನಸ್ಸನ್ನು ಒಂದುಕಡೆಗೆ ಹರಿಯಗೊಡಲು ಒಂದು ಆಲಂಬನೆಯು-ಪ್ರತೀಕವು-ಅಥವಾ, ಸಾಕಾರವಾದ ಮೂರ್ತಿಯು ಬೇಕೇಬೇಕಾಗುತ್ತದೆ. ಮನಮೋಹಕವಾದ, ಅದ್ಭುತವಾದ ಅಥವಾ ವಿಕಾರವಾದ ವಸ್ತುವನ್ನು ಅಥವಾ ಪ್ರಾಣಿಯನ್ನು ಕಂಡರೆ ಸಾಮಾನ್ಯ ಮನುಷ್ಯನೂ ಸಹ ಒಂದು ಕ್ಷಣ ಲಕ್ಷ್ಯವಿಟ್ಟು ಚಿತ್ತೈಕಾಗ್ರತೆಯಿಂದ ಅದನ್ನು ನೋಡಲು ಸಮರ್ಥನಾಗುತ್ತಾನೆ. ಆದರೆ ಅವನ್ನೇ ಒಂದು ಬಯಲಿನಲ್ಲಿ ಕುಳಿತು ಮನಸ್ಸಿನಿಂದ ಕಲ್ಪಿಸಿಕೊಂಡು ನೋಡಲು ಹೇಳಿದರೆ ಅವನಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಸಾಮಾನ್ಯ ಮನುಷ್ಯರ ಮನಸ್ಸಿನ ಕೇಂದ್ರೀಕರಣಕ್ಕೆ ಅಥವಾ ಅವರಿಗೆ ಏಕಾಗ್ರತೆಯನ್ನುಂಟುಮಾಡುವುದಕ್ಕೆ; ಉಂಟಾದ ಏಕಾಗ್ರತೆಯನ್ನು ಕಾಪಾಡಿಕೊಂಡು ಸ್ಥಿರಪಡಿಸಿಕೊಳ್ಳುವುದಕ್ಕೆ ಒಂದು ಪ್ರತೀಕವು ಸಾಕಾರವಾದ ಮೂರ್ತಿಯು ಅತ್ಯಂತ ಅವಶ್ಯವಾಗಿ ಬೇಕಾಗುತ್ತದೆ.

ಇವರ ಆವಶ್ಯಕತೆಯನ್ನು ಪರಮಾತ್ಮನು ಯೋಗಿಗಳ ಮೂಲಕವಾಗಿ ಒದಗಿಸಿಕೊಡುತ್ತಾನೆ. ಯೋಗಿಗಳು ಸಮಾಧಿಯ ಒಂದೊಂದು ವಿಶಿಷ್ಟವಾದ ಅವಸ್ಥೆಗಳಲ್ಲಿ ತಾವು ಕಂಡ ವಿವಿಧವಾದ ಸಾಕಾರರೂಪಗಳನ್ನು ಸಮಾಧಿಯಿಂದ ಬಹಿರ್ಮುಖರಾದ ಸಮಯದಲ್ಲಿ ಹೇಳುತ್ತಾರೆ, ಅಥವಾ ಬರೆದಿಡುತ್ತಾರೆ. ಮುಮುಕ್ಷುವು, ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಬಯಸುವ ಸಾಮಾನ್ಯ ಮಾನವನು ಯೋಗಿಗಳು ಕಂಡು ಹೇಳಿದ ಪರಮಾತ್ಮನ ಸಾಕಾರ ಮೂರ್ತಿಯನ್ನು ತನ್ನ ಉಪಾಸ್ಯದೇವತೆಯನ್ನಾಗಿಟ್ಟುಕೊಂಡು ಪೂಜಿಸುತ್ತಾನೆ; ಭಜಿಸುತ್ತಾನೆ; ಧ್ಯಾನಿಸುತ್ತಾನೆ. ಆರಂಭದ ದೆಸೆಯಲ್ಲಿ ಕೇವಲ ಮೂರ್ತಿಯನ್ನೇ ಪೂಜಿಸುತ್ತಾ ಧ್ಯಾನಿಸುತ್ತಾ ಬಂದರೂ ಕಾಲಕ್ರಮದಲ್ಲಿ ಇವನಿಗೆ ಚಿತ್ತೈಕಾಗ್ರತೆಯು

ಉಂಟಾಗುತ್ತದೆ. ಹಾಗೆಯೇ ಇಂದ್ರಿಯನಿಗ್ರಹ ಸಾಮರ್ಥ್ಯವೂ ಇವನಲ್ಲಿ ಉಂಟಾಗುತ್ತದೆ. ಅನಂತರ ಮೂರ್ತಿಯ ಆಕಾರದ ಪರಮಾತ್ಮನನ್ನು, ಮೂರ್ತ್ಯವಚ್ಛಿನ್ನವಾದ ಅಥವಾ ಮೂರ್ತಿಯ ಅಂತರ್ಗತವಾದ ಪರಮಾತ್ಮ ತತ್ವವನ್ನು ಸಹ ತಿಳಿಯಲು ಸಮರ್ಥನಾಗುತ್ತಾನೆ. ಅದರಿಂದ ಮುಂದೆ ಸಚ್ಚಿದಾನಂದ ರೂಪನಾದ ನಿರಾಕಾರ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧ್ಯವಾಗುತ್ತದೆ.

ಪ್ರಪಂಚದ ಬಹುಸಂಖ್ಯೆಯ ಜನಸಾಮಾನ್ಯರ ಹಿತಕ್ಕೆ ವೈದೋರಿದ ಪರಮಾತ್ಮನ ಅಂಶಾಂಶ ಭೂತಗಳಾದ ಸಾಕಾರ ಮೂರ್ತಿಗಳು ಅನೇಕವಾಗಿವೆ. "ಏಕಂ ಸದ್ವಿಪ್ರಾ ಬಹುದಾ ವದಂತಿ" ಈ ಸಾಕಾರವಾದ ಮೂರ್ತಿಗಳು ಸಹ ಅಪಾರವಾದ ಶಕ್ತಿಯನ್ನು ಹೊಂದಿರುತ್ತವೆ. ಈ ದೇವತೆಗಳು ತಮ್ಮ ಶಕ್ತಿಯಿಂದ ತಮ್ಮ ಭಜಕರ ಇಷ್ಟಾರ್ಥಗಳನ್ನು ನೆರವೇರಿಸಿಕೊಡುತ್ತವೆ. ಪರಮಾತ್ಮನ ಅಂಶಾಂಶಭೂತವಾದ ಅಥವಾ ಅಂಗವಾದ ಸಾಕಾರ ಮೂರ್ತಿಗಳನ್ನು ಪೂಜಿಸುವುದರಿಂದ, ಭಜಿಸುವುದರಿಂದ, ಮೂಲ ಬ್ರಹ್ಮ ವಸ್ತುವನ್ನು ಭಜಿಸಿದಂತೆ ಆಗುತ್ತದೆ. ಅಂಗಗಳಿಗೆ ಮಾಡಿದ ಅಲಂಕಾರಗಳು ಅಂಗಿಯನ್ನು ಸುಂದರಗೊಳಿಸುವುದು ಸಹಜವಿರುತ್ತದೆ.

ಪ್ರಪಂಚದಲ್ಲಿ ಜ್ಞಾನಿಗಳು, ಬುದ್ಧಿವಂತರು, ಇಂದ್ರಿಯ ನಿಗ್ರಹವುಳ್ಳವರು ಅತಿ ವಿರಳ. ಲಕ್ಷಕ್ಕೆ, ಕೋಟಿಗೆ, ಒಬ್ಬೊಬ್ಬರಿರುವರೋ ಇಲ್ಲವೋ! ಉಳಿದ ಕೋಟ್ಯಾನುಕೋಟಿ ಬಹುಸಂಖ್ಯೆಯ ಜನರು ಸಾಮಾನ್ಯರಿರುವರು. ಪ್ರಪಂಚದ ಹಿತಕ್ಕಾಗಿಯೇ ತನ್ನ ಜ್ಞಾನವಾದ ವೇದವನ್ನು ಪ್ರಪಂಚಕ್ಕೆ ನೀಡಿದ ಪರಮಾತ್ಮನು ಈ ಸಾಮಾನ್ಯ ಜನಕೋಟಿಯ ಉದ್ಧಾರಕ್ಕಾಗಿ ಅತ್ಯಂತ ಅವಶ್ಯವಾಗಿ ಬೇಕಾದ ಮೂರ್ತಿಪೂಜೆಯನ್ನು ಅಥವಾ ತನ್ನ ಸಾಕಾರ ಮೂರ್ತಿಯ ಸ್ವರೂಪಗಳನ್ನು ವೇದಗಳಲ್ಲಿ ಸೂಚಿಸಲೇಬೇಕು, ಹೇಳಿರಲೇಬೇಕಾಗುತ್ತದೆ. ಈ ದೃಷ್ಟಿಯಿಂದ ವೇದಗಳನ್ನು ನೋಡಿದರೆ ಅದು ಕಾಣದೇ ಇರಲಾರದು.

ಸಾಕಾರವಾದ ಈಶ್ವರೋಪಾಸನೆಯೂ ಮೂರ್ತಿಪೂಜೆಯ ವಿಷಯವೂ ವೇದಗಳಲ್ಲಿ ಉಕ್ತವಾಗಿದೆಯೆಂಬುದಕ್ಕೆ ಕೇನೋಪನಿಷತ್ತಿನ "ಯಕ್ಷಪ್ರಶ್ನೆ"

ಕಠೋಪನಿಷತ್ತಿನ "ನಚಿಕೇತೋಪಾಖ್ಯಾನ" ಗಳು ಸರಿಯಾದ ದೃಷ್ಟಾಂತಗ
ಗಳಾಗುವಂತಿವೆ ಇವುಗಳಲ್ಲಿ ದೇವೀ, ಇಂದ್ರ, ಯಮ, ವಾಯು
ಮೊದಲಾದ ದೇವತೆಗಳು ಸಾಕಾರವಾಗಿ ಬಂದು ವ್ಯವಹಾರ ಮಾಡಿದಂತೆ
ವರ್ಣಿತವಾಗಿದೆ.

ಇದರಂತೆಯೇ ನಾವು ನಿತ್ಯ ಹೇಳುವ ಪುರುಷ ಸೂಕ್ತದ "ಸಹಸ್ರ
ಶೀರ್ಷಾ ಪುರುಷಃ" ಎಂಬುದೂ, ಮಂತ್ರ ಪುಷ್ಪದಲ್ಲಿ ಹೇಳುವ "ಸಹಸ್ರ
ಶೀರ್ಷಂ ದೇವಂ" ಎಂಬಮಂತ್ರವೂ "ತಸ್ಯ ಯಜುರೇವ ಶಿರಃ, ಋಗ್ದಕ್ಷಿಣಃ
ಪಕ್ಷಃ, ಸಾಮೋತ್ತರಃ ಪಕ್ಷಃ" ಮೊದಲಾದ ಮಂತ್ರಗಳೂ ವಿರಾಡ್ಬ್ರಹ್ಮನನ್ನು
ಒಂದು ವ್ಯಕ್ತಿಯನ್ನು ವರ್ಣಿಸಿದಂತೆ ಒಂದು ವಿಧವಾದ ರೂಪಕದಿಂದ
ವರ್ಣಿಸುತ್ತವೆ.

ಹಾಗೆಯೇ ಅಗ್ನಿಯ ಸಾಕಾರಸ್ವರೂಪವನ್ನು "ಚತ್ವಾರಿ ಶೃಂಗಾ
ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ" ನಾಲ್ಕು
ಶೃಂಗಗಳು (ಕೋಡುಗಳು), ಮೂರು ಪಾದಗಳು, ಎರಡು ತಲೆಗಳು, ಏಳು
ಕೈಗಳೂ ಇವನಿಗೆ ಇವೆಯೆಂದು ವರ್ಣಿಸಿದೆ.

ಸೂರ್ಯನನ್ನು ಸಪ್ತ ಎಂಬ ಕುದುರೆಯು ಒಯ್ಯುತ್ತದೆಂದು
ಇನ್ನೊಂದು ಕಡೆಗೆ ಹೇಳಿದೆ. "ಏಕೋ ಅಶ್ವೋ ವಹತಿ ಸಪ್ತನಾಮಾ"

ಇಂದ್ರನು ದಧೀಚಿ ಋಷಿಯ ಅಸ್ಥಿ (ಎಲುಬು) ಗಳಿಂದ ತೊಂಭ
ತ್ತೊಂಭತ್ತುಸಲ ಹೊಡೆದು ವೃತ್ರಾಸುರನನ್ನು ಕೊಂದನೆಂದು ವರ್ಣಿತವಾಗಿದೆ.

"ಇಂದ್ರೋ ದಧೀಚೇರಸ್ಥಿಭಿಃ, ವೃತ್ರಾನ್ಯಪ್ರತಿಷ್ಕುತ|
ಜಘಾನ ನವತೀರ್ನವ"||

ತುಗ್ರಪುತ್ರನಾದ ಭೃಜ್ಯು ಎಂಬುವನು ಸಮುದ್ರಯಾನ ಮಾಡು
ವಾಗ ನೀರಿನಲ್ಲಿ ಬಿದ್ದು ಮುಳುಗುವ ಸಮಯದಲ್ಲಿ ಅಶ್ವಿನೀದೇವತೆಗಳು
ಬಂದು ಇವನನ್ನು ರಕ್ಷಿಸಿದರೆಂದು ಋಗ್ವೇದದಲ್ಲಿ ಹೇಳಿದೆ.

ನ ಮರ್ಡಿತಾ ವಿದ್ಯತೇ ಅನ್ಯ ಏಭ್ಯೋ ದೇವೇಷು ಅಧಿಕಾಮಾ
ಅಸಂಯತಾ|| ದೇವತೆಗಳಿಗಿಂತ ಸುಖದಾಯಕವಾದವುಗಳು ಬೇರೆಯವು

ಯಾವುವೂ ಇಲ್ಲ. ಆದ್ದರಿಂದ ನನ್ನ ಕಾಮನೆಗಳೆಲ್ಲವೂ ದೇವತೆಗಳಲ್ಲಿಯೇ ಇವೆ.

"ಸರ್ವಾನ್ ಸ ದೇವಾನ್ ತಪಸಾಪಿಪರ್ತಿ" ಅವನು ತನ್ನ ತಪಸ್ಸಿನಿಂದ ಎಲ್ಲಾ ದೇವತೆಗಳನ್ನೂ ತೃಪ್ತಿಪಡಿಸುತ್ತಾನೆ.

"ಯಜಾಮದೇವಾನ್ಯದಿಶಕ್ನವಾಮ" ನಾವು ಸಮರ್ಥರಾದರೆ, ಅಂದರೆ, ನಮ್ಮ ಶಕ್ತಿಯನ್ನು ಅನುಸರಿಸಿ ದೇವತೆಗಳನ್ನು ಪೂಜಿಸುವ. "ಪ್ರಗಾಯತ ಅಭ್ಯರ್ಚ್ಯಾಮ ದೇವಾನ್" ಹಾಡಿರಿ, ದೇವತೆಗಳನ್ನು ಪೂಜಿಸುವ. "ದೇವಾನ್ ವಸಿಷ್ಠೋ ಅಮೃತಾನ್ ವವಂದೇ" ಅಮರರಾದ ದೇವತೆಗಳನ್ನು ವಸಿಷ್ಠನು ನಮಸ್ಕರಿಸಿದನು. ಹೀಗೆ ವೇದಗಳಲ್ಲಿ ಮೂರ್ತಿಗಳನ್ನು ಪೂಜಿಸುವ ವಿಷಯವಾಗಿ ಅನೇಕ ಮಂತ್ರಗಳು ನಮಗೆ ಕಾಣುತ್ತವೆ.

ಇದಲ್ಲದೆ ಋಗ್ವೇದದ ಒಂದು ಮಂತ್ರದಲ್ಲಿ "ಹೇ ! ಭಕ್ತರೇ ! ಇಲ್ಲಿಂದ ಬಹುದೂರದಲ್ಲಿರುವ ಸಮುದ್ರದ ದಡದಲ್ಲಿ ನೀರಿನ ಮೇಲೆ ತೇಲುತ್ತಿರುವ ಮನುಷ್ಯನಿರ್ಮಿತವಲ್ಲದ ದಾರುಮಯ (ಮರದ) ವಾದ ಬ್ರಹ್ಮನನ್ನು ಭಜಿಸಿ. ಅದರಿಂದ ಈ ಸಂಸಾರಮಹಾ ಸಾಗರವನ್ನು ದಾಟಿ ಉತ್ತಮವಾದ ಗತಿಯನ್ನು ಪಡೆಯಿರಿ" ಎಂದು ಹೇಳಿದೆ.

"ಅದೋಯದ್ದಾರು ಪ್ಲವತೇ ಸಿಂಧೋಃಪಾರೇ ಅಪೂರುಷಂ|
ತದಾರಭಸ್ವ ದುರ್ಹಣೋ ತೇನ ನ ಗಚ್ಛ ಪರಸ್ತರಂ||"

(ಋ. ೧೦,-೧೫೫-೩)

ಹೀಗೆ ವೇದಗಳಲ್ಲಿ ವೇದಕಾಲದ ಋಷಿಗಳು ದೇವ ದೇವತೆಗಳಿಗೆ ಮೂರ್ತಿತ್ವ ಕಲ್ಪನೆ ಮಾಡಿರುವದೂ, ಹಾಗೆಯೇ ಆ ದೇವತೆಗಳ ಮೂರ್ತಿಗಳನ್ನು ಪೂಜಿಸು, ನಮಿಸು, ಭಜಿಸು ಮೊದಲಾಗಿ ಹೇಳಿರುವುದೂ ಅನೇಕ ಕಡೆಗಳಲ್ಲಿ ಸ್ಪಷ್ಟವಾಗಿ ಹೇಳಿರುವುದು ಕಾಣಬರುತ್ತವೆ ಎಂಬುದನ್ನು ತಿಳಿಯುವುದಕ್ಕೆ ಇಲ್ಲಿ ಕೊಟ್ಟಿರುವ ಉದಾಹರಣೆಗಳೇ ಸಾಕೆನಿಸುತ್ತವೆ.

## ವೇದಾಧಿಕಾರಿಗಳು

"ಸ್ತ್ರೀ ಶೂದ್ರ ದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ" ಹೆಂಗಸರು, ಶೂದ್ರರು ಮತ್ತು ದ್ವಿಜಬಂಧುಗಳು, ಅಂದರೆ, ಸ್ವಧರ್ಮಾಚಾರವನ್ನು

ಬಿಟ್ಟ, ಬ್ರಾಹ್ಮಣ ಕ್ಷತ್ರಿಯ, ವೈಶ್ಯರು ಯಾರೇ ಆಗಲಿ, ವೇದಗಳನ್ನು ಓದ ಕೂಡದು, ಕೇಳಕೂಡದು ಎಂದು ಅದೆಷ್ಟೋಕಾಲದಿಂದ ನಿರ್ಬಂಧಿಸಿಕೊಂಡು ಬಂದಿದೆ. ಆದರೆ ವೇದಕಾಲದಲ್ಲಿ ಸ್ತ್ರೀಯರು ಬಹುಮಟ್ಟಿಗೆ ವಿದ್ಯಾವತಿಯರಾಗಿದ್ದರು. ಮತ್ತು ಅನೇಕಜನ ಸ್ತ್ರೀಯರು ಸಹ ವೇದಮಂತ್ರಗಳನ್ನು ಕಂಡುಹಿಡಿದು ಋಷಿಗಣದಲ್ಲಿ ಸೇರಿರುವರು. ಉಪನಿಷತ್ತುಗಳಲ್ಲಿ ಅನೇಕ ಸ್ತ್ರೀಯರು ಬ್ರಹ್ಮವಾದಿನಿಯರಾಗಿದ್ದುದೂ ಕಾಣಬರುತ್ತದೆ. ಆದರೂ ಮೇಲಿನಂತೆ ಸ್ತ್ರೀ ಶೂದ್ರ ದ್ವಿಜಬಂಧುಗಳು ವೇದಾನಧಿಕಾರಿಗಳೆಂದು ಸಾರಿ, ವೇದಬಾಹಿರರನ್ನಾಗಿ ಮಾಡಿರುವ ಉದ್ದೇಶವೇನಿರಬಹುದು ಎಂಬುದನ್ನು ಇಂದಿನವರಾದ ನಾವು ಸಹ ಸ್ವಲ್ಪ ಸಹನಶೀಲರಾಗಿ ವಿಚಾರಿಸಬೇಕಾದುದು ಅವಶ್ಯವಿರುತ್ತದೆ.

ಈಶ್ವರನ ಜ್ಞಾನ, ವಾಣಿಯಾದ ವೇದಗಳನ್ನು ಅತ್ಯಂತ ಪರಿಶುದ್ಧವಾಗಿ ಕಾಪಾಡಿಕೊಂಡು ಬರಲು ನಮ್ಮ ಪ್ರಾಚೀನ ಋಷಿಗಳು ಬಹಳ ಎಚ್ಚರಿಕೆಯಿಂದ ನಡೆದುಕೊಂಡು ಬಂದಿದ್ದಾರೆ. ಅನಾದಿಕಾಲದಿಂದಲೂ ಗುರೂಚ್ಚಾರಣ ಅನೂಚ್ಚಾರಣ ಕ್ರಮದಿಂದ ವಂಶ, ಗೋತ್ರಪಾರಂಪರ್ಯವಾಗಿ, ತಲೆತಲಾಂತರವಾಗಿ ಹರಿದು ಬರುತ್ತಿದ್ದ ವೇದಾಭ್ಯಾಸ ಕ್ರಮವು ನ್ಯೂನಾತಿರೇಕಗಳಿಂದ ಅಪದ್ಧವಾಗದಂತೆ ನಡೆಯಲು ಬೇಕಾದ ನಿಯಮ ನಿಬಂಧಗಳನ್ನು ಏರ್ಪಡಿಸಿಕೊಂಡು ಅದರಂತೆ ನಡೆದುಕೊಂಡು ಬಂದಿದ್ದಾರೆ. ಬರವಣಿಗೆಯ ಕ್ರಮವು ಇಲ್ಲದ ಸಮಯದಲ್ಲಿ ಒಂದು ತಲೆಮಾರಿನವರು ಒಂದು ವಿಷಯವನ್ನು ಅಪದ್ಧವಾಗಿ ಬಾಯಪಾಠಮಾಡಿದರೂ, ಅದು ವಂಶಪಾರಂಪರ್ಯವಾಗಿ ಅನಂತಕಾಲದವರೆಗೆ ತೊಳೆಯಲಾಗದ ಕಶ್ಮಲವಾಗಿಬಿಡುತ್ತದೆ. ಸ್ವರಗಳಿಂದಾಗಲೀ ವರ್ಣ, ಶಬ್ದಗಳಿಂದಲೇ ಆಗಲೀ ಅಪದ್ಧವು ಸಂಭವಿಸದಂತೆ ವೇದ ಮಂತ್ರಗಳನ್ನು ಹೇಳಬೇಕಾಗುತ್ತದೆ. ವೇದ ಮಂತ್ರಗಳನ್ನು ಪಾರಾಯಣ ಮಾಡುವ ಸಮಯದಲ್ಲಾಗಲೀ, ವೈದಿಕ ಕರ್ಮಗಳಲ್ಲಿ ಉಪಯೋಗಿಸುವ ಸಮಯದಲ್ಲಾಗಲೀ, ಅಶುದ್ಧವಾಗಿ ಹೇಳಿದರೆ ಪಾರಾಯಣ ಕರ್ಮಗಳ ಫಲವು ಬರುವುದಿಲ್ಲ. ಮತ್ತು ಹಾಗೆ ಮಾಡುವುದ

ರಿಂದ ಪಾರಾಯಣ ಮಾಡಿದ ನಮಗೆ, ಕರ್ಮ ಮಾಡಿದ ಯಜಮಾನನಿಗೆ ರಾಷ್ಟ್ರಕ್ಕೆ ಎಲ್ಲಾ ವಿಧದಿಂದಲೂ ಅನಿಷ್ಟಗಳು ಉಂಟಾಗುತ್ತವೆ. ಇದರಿಂದ ವೇದ ಮಂತ್ರಗಳನ್ನು ಪರಿಶುದ್ಧವಾಗಿ ಕಾಪಾಡಿಕೊಂಡು ಬರಲು ಬೇಕಾದ ಎಲ್ಲಾ ವಿಧವಾದ ಪ್ರಯತ್ನವನ್ನು ಮಾಡುವುದು ಋಷಿಗಳಿಗೆ ಅನಿವಾರ್ಯದ ಕೆಲಸವಾಯಿತು. ಅದಕ್ಕಾಗಿಯೇ ವೇದ ಮಂತ್ರಗಳನ್ನು ಪರಿಶುದ್ಧವಾಗಿ ಹೇಳಲು ಅಸಮರ್ಥರಾದವರೆಲ್ಲರನ್ನೂ ವೇದಕ್ಕೆ ಅನಧಿಕಾರಿಗಳೆಂದು ನಿರ್ಬಂಧಿಸಿದರು.

ವೇದ ಮಂತ್ರಗಳನ್ನು ಹೇಳುವಾಗ ಮಂತ್ರಗಳ ಉದಾತ್ತ, ಅನುದಾತ್ತ, ಸ್ವರಿತ, ಹ್ರಸ್ವ, ದೀರ್ಘ ಸ್ವರಗಳನ್ನು, ಅಲ್ಪಪ್ರಾಣ, ಮಹಾಪ್ರಾಣ ಸಂಯುಕ್ತಾಕ್ಷರಗಳನ್ನು ಅತ್ಯಂತ ಪರಿಶುದ್ಧವಾಗಿ ಹೇಳಬೇಕಾಗುತ್ತದೆ. ಸಹಜವಾಗಿಯೇ ಕೋಮಲ ಕಂಠ ಸ್ವರದಿಂದ ಸ್ತ್ರೀಯರು ವೇದಮಂತ್ರಗಳನ್ನು ಪರಿಶುದ್ಧವಾಗಿ ಹೇಳಲು ಬಹುಸಂಖ್ಯೆಯಿಂದ ಅಸಮರ್ಥರಿರುತ್ತಾರೆ. ಇವರ ನಾಲಗೆಯಿಂದ ಎಲ್ಲಾ ವರ್ಣಗಳ ಸುಸ್ಪಷ್ಟ ಉಚ್ಚಾರಣೆಯು ಸಾಧ್ಯವಾಗುವುದಿಲ್ಲ. ಗೃಹಕೃತ್ಯ, ಶಿಶ್ರೂಷೆ, ಶಿಶುಸಂಗೋಪನೆಯೇ ಮೊದಲಾದ ಕಾರ್ಯಗಳಿಂದ ದಣಿದಿರುವ ಇವರು ಮತ್ತಷ್ಟು ಅಸಮರ್ಥರಾಗುತ್ತಾರೆ. ಹಾಗೆಯೇ ಪ್ರತಿ ತಿಂಗಳಿನ ರಜೋದೋಷದ ಕಾಲ, ಬಸಿರು, ಬಾಣಂತಿತನದ ಕಾಲಗಳಲ್ಲಿ ಅಪವಿತ್ರರಾಗುತ್ತಾರೆ. ಮತ್ತು ಇವರ ದೈಹಿಕಶಕ್ತಿಗಳೂ ಸಹ ಕುಂಠಿತವಾಗುತ್ತವೆ. ಇಂತಹ ಪ್ರಕೃತಿದತ್ತ, ದೇವದತ್ತವಾದ ನಾನಾವಿಧವಾದ ಉಪದ್ರವಗಳು ಸ್ತ್ರೀಯರಿಗೆ ಇರುವುದರಿಂದ ಅವಿಚ್ಛಿನ್ನವಾಗಿ ವೇದಗಳನ್ನು ಹೇಳಿಕೊಂಡು ಬರಲು ತೊಂದರೆಯಾಗುತ್ತದೆ. ಇವೇ ರೀತಿಯ ಇನ್ನೂ ಅನೇಕ ತೊಂದರೆಗಳು ಸಹಜವಾಗಿಯೂ, ದೇವದತ್ತವಾಗಿಯೂ ಸಾಮಾಜಿಕ, ಸಾಂಸಾರಿಕವಾಗಿಯೂ ಇರುವುದರಿಂದ ಸ್ತ್ರೀಯರು ವೇದಕ್ಕೆ ಅನಧಿಕಾರಿಗಳೆಂದು ಪ್ರಾಚೀನರು ನಿರ್ಬಂಧಿಸಿರಬೇಕೆಂದು ತೋರುತ್ತದೆ.

ಇವರಂತೆಯೇ ಕೃಷಿ, ಸೇವಾ ವ್ಯವಸಾಯಾದಿ ಕೆಲಸಗಳನ್ನು ಮಾಡುವ ಶೂದ್ರರೂ ಸಹ ಹಗಲು, ರಾತ್ರಿಯೆನ್ನದೆ ಮಳೆ, ಛಳಿ, ಬಿಸಿಲು

ಗಳಲ್ಲಿ ಶ್ರಮಪಡುತ್ತಿರುವುದರಿಂದ ಇವರೂ ವೇದಮಂತ್ರಗಳನ್ನು ಪರಿಶುದ್ಧವಾಗಿ ಹೇಳಲು ಅಸಮರ್ಥರಿರುತ್ತಾರೆ. ಈ ವಿಷಯಕ್ಕೆ ಸಂಬಂಧಪಡುವಂತೆ "ಡಾ|| ಡಾಲ್ಲಿಂಗ್ ಟನ್ನರು" ಬರೆದ ಒಂದು ಪ್ರಬಂಧದ ನಾಲ್ಕು ಸಾಲುಗಳು ಇಲ್ಲಿ ಎತ್ತಿ ಹೇಳಲು ಯೋಗ್ಯವಾಗಿವೆ

"ಕಳೆದ ಮಹಾಯುದ್ಧದ ಪರಿಣಾಮವಾಗಿ ಬೇರೆ ಬೇರೆ ದೇಶಗಳ ಬಾಲಕರ ಸ್ಥಾನ ಪರಿವರ್ತನೆಯು ಯೂರೋಪಿನಲ್ಲಿ ಆಯಿತು. ಈ ಸಮಯದಲ್ಲಿ 'ಜಗತ್ತಿನ ಎಲ್ಲಾದೇಶದವರ ಭಾಷಾಶಕ್ತಿಯು ಒಂದೇ ಸಮನಾಗಿದೆಯೇ ? ಒಬ್ಬ ಚೀನೀ ಹುಡುಗನು ಫ್ರಾನ್ಸ್ ದೇಶದವರ ಒಂದು ಮನೆಯಲ್ಲಿದ್ದರೆ ಅವನು ಫ್ರೆಂಚ್ ಭಾಷೆಯನ್ನು ಉಚ್ಚರಿಸಬಲ್ಲನೆ? ಅಥವಾ ಇಲ್ಲವೆ? ಎಂಬ ಪ್ರಶ್ನೆ ಎದ್ದಿತು. ಇದರ ಬಗ್ಗೆ ವೈಜ್ಞಾನಿಕವಾಗಿ ಅತ್ಯಂತ ಆಳವಾದ ಅಭ್ಯಾಸದಿಂದ ಬಂದ ಅನುಭವವನ್ನು ಹೇಳುವುದಾದರೆ ಭಾಷೆಯು ಬಹುಮಟ್ಟಿಗೆ ರಕ್ತ ಸಂಬಂಧವನ್ನೂ, ಆನುವಂಶಿಕತೆಯನ್ನೂ ಹೊಂದಿಕೊಂಡಿರುತ್ತದೆ. ರಕ್ತದಲ್ಲಿ ಮುಖ್ಯವಾಗಿ ಏಳು ಅಂಶಗಳಿರುತ್ತವೆ. ಇವು ಪರಸ್ಪರ ಮಿಶ್ರವಾಗುತ್ತಾ ಹೋದಂತೆ ಸುಮಾರು ಇಪ್ಪತ್ತು ಸಾವಿರ ಪ್ರಭೇದಗಳಾಗುತ್ತವೆ. ಹೆಬ್ಬೆಟ್ಟಿನ ಗುರುತಿನಂತೆ ನಿಖರವಾಗಿ ಅಲ್ಲದಿದ್ದರೂ ಒಂದು ಎಲ್ಲೆಯವರೆಗೆ ಮನುಷ್ಯನ ರಕ್ತದಿಂದ ಅವನು ಯಾವ ಪರಂಪರೆಗೆ ಸೇರಿದವನೆಂದು ತಿಳಿಯಲಾಗುತ್ತದೆ. ಅವನ ಕುಲವನ್ನು ಕಂಡುಹಿಡಿಯಲು ಸಾಧ್ಯವಾಗುತ್ತದೆ. 'ದ' ಕಾರದ ಉಚ್ಚಾರಣೆಯು 'ಓ' ಎಂಬ ರಕ್ತಾಂಶ ಇರುವುದರಿಂದ ಸುಲಭವಾಗಿ ಉಚ್ಚರಿಸಲು ಸಾಧ್ಯವಾಗುತ್ತದೆ. ಯೂರೋಪಿನ ಜಾತಿಗಳಲ್ಲಿ ನೂರಕ್ಕೆ ಐವತ್ತು ಜಾತಿಯವರು "ದ" ಕಾರವನ್ನು ಸುಲಭವಾಗಿ ಉಚ್ಚರಿಸಲಾರರು " ಎಂದು ವೈಜ್ಞಾನಿಕರಾದ ಡಾಕ್ಟರರು ಒಂದು ಪ್ರಬಂಧದಲ್ಲಿ ಬರೆದಿದ್ದಾರೆ.

ಅತ್ಯಂತ ಕಠಿಣತಮನಾದ ವೇದ ಮಂತ್ರಗಳನ್ನು ಉಚ್ಚರಿಸಲು ಎಲ್ಲಾ ರಕ್ತದವರಿಂದಲೂ ಸಾಧ್ಯವಾಗುವುದಿಲ್ಲವೆಂಬುದು ಮೇಲಿನ ವಿಜ್ಞಾನಿ ಡಾಕ್ಟರರ ವೈಜ್ಞಾನಿಕ ಸಂಶೋಧನೆಯಿಂದ ತಿಳಿದುಬರುತ್ತದೆ. ಅನೇಕ

ವರ್ಷಗಳಿಂದಲೂ ಸತತ ಪ್ರಯತ್ನ ಮಾಡುತ್ತಾ ಬಂದ ಆರ್ಯ ಸಮಾಜ ದವರ ಅನುಭವವೂ ಬಹುಮಟ್ಟಿಗೆ ಇದೇ ರೀತಿಯಾಗಿ ಬಂದಿದೆ.

ಇದರಬಗ್ಗೆ ನನ್ನದೊಂದು ಸ್ವಂತ ಅನುಭವವನ್ನು ಇಲ್ಲಿ ಸೇರಿಸಬಯ ಸುತ್ತೇನೆ. ನಾನು ವಿದ್ಯಾಭ್ಯಾಸವನ್ನು ಮುಗಿಸಿದಕೂಡಲೇ ಒಂದು ಒಕ್ಕಲಿಗರ ಸಂಸ್ಕೃತ ಪಾಠಶಾಲೆಯಲ್ಲಿ ಉಪಾಧ್ಯಾಯನಾಗಿ ಸೇರಿದ್ದೆ. ಅಲ್ಲಿಯ ಹುಡುಗರಿಗೆ ಅಕ್ಷರವನ್ನಾಗಲೀ, ಶಬ್ದವನ್ನಾಗಲೀ ಎಷ್ಟು ಪ್ರಯತ್ನಪಟ್ಟರೂ ಶುದ್ಧವಾಗಿ ಉಚ್ಚಾರ ಮಾಡಿಸಲು ನನ್ನಿಂದ ಸಾಧ್ಯವಾಗಲಿಲ್ಲ. ಇಪ್ಪತ್ತೈದಕ್ಕೆ ಒಬ್ಬ ನಂತೆಯೂ ಸ್ಫುಟವಾಗಿ, ಶುದ್ಧವಾಗಿ ಉಚ್ಚರಿಸುವವನು ಇದ್ದಿಲ್ಲ. ಇದರಂ ತೆಯೇ ಕಾಂಗ್ಡಿ ಗುರುಕುಲದ ಒಬ್ಬ ವೇದಾಲಂಕಾರರು ಅದೇ ಹುಡುಗ ರಿಗೆ ವೇದಮಂತ್ರಗಳನ್ನು ಕಲಿಸುತ್ತಿದ್ದರು. ಅವರ ಉಚ್ಚಾರಣೆಯಲ್ಲಿಯೇ ಮಂತ್ರಗಳ ಉದಾತ್ತಾದಿ ಸ್ವರಗಳು ಅರ್ಧಕ್ಕಿಂತ ಹೆಚ್ಚಾಗಿ ತಪ್ಪಾಗಿ ಇರುತ್ತಿದ್ದವು. ಮಂತ್ರಗಳ ಅಕ್ಷರ ಉಚ್ಚಾರಣೆಯು ಸಹ ಅತ್ಯಂತ ವಿಶ ಕಲಿತವಾಗಿಯೂ, ಅಸ್ಫುಟವಾಗಿಯೂ ಇದ್ದಿತು. ಅವರು ಎಷ್ಟೇ ಪ್ರಯತ್ನ ಪಟ್ಟರೂ ಒಬ್ಬರಿಂದಲೂ ಸರಿಯಾಗಿ ಹೇಳಿಸಲು ಸಾಧ್ಯವಾಗುತ್ತಿರಲಿಲ್ಲ. ಇಂತಹ ಪರಿಸ್ಥಿತಿಗಳನ್ನೆಲ್ಲಾ ಲಕ್ಷ್ಯದಲ್ಲಿಟ್ಟುಕೊಂಡೇ ನಮ್ಮ ಪ್ರಾಚೀನರು ಇಂಥವರನ್ನೆಲ್ಲಾ ವೇದ ಅನಧಿಕಾರಿಗಳೆಂದು ಸಾರಿರುವರೆಂದು ತೋರುತ್ತದೆ.

ನಮ್ಮ ಪ್ರಾಚೀನರು ಸ್ತ್ರೀ ಶೂದ್ರ ದ್ವಿಜಬಂಧುಗಳನ್ನಷ್ಟೇ ಅಲ್ಲದೆ ರಾಗವಾಗಿ ಹೇಳುವವನನ್ನೂ, ತಲೆ ಅಲ್ಲಾಡಿಸುತ್ತಾ ಹೇಳುವವನೂ, ಅತ್ಯಂತ ತ್ವರಿತವಾಗಿ ಹೇಳುವವನೂ, ಬರೆದುಕೊಂಡು ಓದುವವನೂ, ಅರ್ಥ ತಿಳಿ ಯದೇ ಕಲಿಯುವವನೂ, ಅತ್ಯಂತ ಸಣ್ಣ ಧ್ವನಿಯವನೂ ಪಾಠಕಾಧಮ ರೆಂದು ಹೇಳಿದ್ದಾರೆ.

"ಗೀತೀ, ಶೀಘ್ರೀ, ಶಿರಃಕಂಪೀ, ತಥಾ, ಲಿಖಿತಪಾಠಕಃ॥
ಅನರ್ಥಜ್ಞೋಽಲ್ಪ ಕಂಠಶ್ಚ, ಷಡೇತೇ ಪಾಠಕಾಧಮಾಃ॥"

ಇವನ್ನೆಲ್ಲಾ ನಾವು ಸಹಾನುಭೂತಿಯಿಂದ ವಿಚಾರಮಾಡಿ ನೋಡಿ ದರೆ, ಕೆಲವರನ್ನು ವೇದ ಅನಧಿಕಾರಿಗಳೆಂದು ಹೇಳುವಾಗ ನಮ್ಮ ಪ್ರಾಚೀನರ

ಹೃದಯದಲ್ಲಿ ಸ್ತ್ರೀಯರ ಬಗ್ಗೆ, ಶೂದ್ರರ ಬಗ್ಗೆ ತಿರಸ್ಕಾರ ಭಾವನೆಯು ಇದ್ದಿತೆಂದು ಹೇಳಲು ಸರ್ವಥಾ ಸಾಧ್ಯವಿಲ್ಲ, ಹಾಗಿದ್ದರೆ ಮೇಲೆ ಹೇಳಿದ ಆರು ವಿಧವಾದ ದೋಷವುಳ್ಳವರೆನ್ನು, ದ್ವಿಜಬಂಧುಗಳನ್ನು ವೇದ ಅನಧಿಕಾರಿಗಳೆಂದು ಅವರು ಹೇಳುವ ಅವಶ್ಯಕತೆಯು ಕಾಣುವುದಿಲ್ಲ. "ಸರ್ವೇ ಜನಾಃ ಸುಖಿನೋ ಭವಂತು" ಎಂದು ಹಾಡುತ್ತಾ ಬಂದ ಪ್ರಾಚೀನರು ಕೇವಲ ವೇದಪರಿಶುದ್ಧತೆಯನ್ನು ಕಾಪಾಡಿಕೊಂಡು ಬರುವುದಕ್ಕಾಗಿಯೇ ವೇದ ಮಂತ್ರಗಳನ್ನು ಶುದ್ಧವಾಗಿ ಹೇಳಲು ಅಸಮರ್ಥರಾದವರೆಲ್ಲರನ್ನೂ, ವೇದ ಅನಧಿಕಾರಿಗಳೆಂದು ನಿರ್ಬಂಧಿಸಿದ್ದರೆಂದು ವಿಚಾರ ಶೀಲರೆಲ್ಲರಿಗೂ ತಿಳಿದು ಬರುವಂತಿದೆ.

ಆದ್ದರಿಂದ ಈ ತೊಂದರೆಗಳೆಲ್ಲವನ್ನೂ ಅನುಭವದಿಂದ ಕಂಡ ನಮ್ಮ ಪ್ರಾಚೀನ ಶಾಸ್ತ್ರಕಾರರು ಆ ತೊಂದರೆಗಳನ್ನು ಪರಿಹರಿಸಿ ವೇದಗಳನ್ನು, ವೇದಗಳ ಪರಂಪರೆಯ ಪಾಠಗಳನ್ನು ಪರಿಶುದ್ಧವಾಗಿ ಕಾಪಾಡಲು ಯೋಗ್ಯವಾದ ಪದ್ಧತಿಯನ್ನು ಜಾರಿಗೆ ತರುವುದಕ್ಕೆ ವೇದಾಧಿಕಾರಿಗಳು ಯಾರೆಂಬುದನ್ನು ನಿಶ್ಚಯಿಸಿದ್ದರೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಇಂದಿನವರಾದ ನಾವು ಈ ವಿಷಯವನ್ನು ಸಹಾನುಭೂತಿಯ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ. ಇಂದು ಯಾರು ಓದಬಹುದು, ಯಾರು ಓದಬಾರದು ಎಂಬುದನ್ನು ನಿರ್ಣಯಿಸುವುದಾಗಲೀ, ಅಭಿಪ್ರಾಯ ಪಡುವುದಾಗಲೀ ಅಪ್ರಕೃತ, ಅನವಶ್ಯಕ. ವೇದಗಳ ವಿಷಯಗಳನ್ನು ಅನ್ಯ ಭಾಷಾ ಮುಖಾಂತರವಾಗಿ ತಿಳಿಯುವುದಕ್ಕೆ ಯಾವ ಕಾಲದಲ್ಲಿಯೂ ಪ್ರತಿಬಂಧಕವಿರಲಿಲ್ಲ. ಹಿಂದೆ ಹೇಳಿದ ರೀತಿಯಿಂದ ದೋಷರಹಿತವಾಗಿ ವೇದದ ಪಾಠಕ್ರಮವು ಉಳಿದರೆ ಮಾತ್ರ ವೇದದಲ್ಲಿ ವೇದತ್ವವು ಇರುತ್ತದೆ. "ಸ ವೈ ವೇದಸ್ಯ ವೇದತ್ವಂ" ಇದು ಎಲ್ಲರಿಂದಲೂ ಸಾಧ್ಯವಿಲ್ಲ. ಎಲ್ಲರೂ ಎಲ್ಲವನ್ನೂ ಮಾಡ ಹೊರಟರೆ ಯಾವುದೂ ಯಾರಿಗೂ ಬರಲಾರದು. ಅಷ್ಟೇ ಅಲ್ಲ ಎಲ್ಲವೂ ಕೆಡುವುವು. ಯಾರಿಗೆ ಯಾವುದು ಆನುವಂಶಿಕವಾಗಿ, ಪರಂಪರೆಯಾಗಿ ರಕ್ತಗತವಾಗಿ ಬಂದಿರುತ್ತದೆಯೋ ಅದನ್ನು ಅವರು ಕಲಿಯುವುದು ಸುಲಭ

ಕಲಿತು ಅದರಿಂದ ತಾನು ಪ್ರಯೋಜನಪಡೆದು ಜನತೆಗೂ ಅದರಿಂದ ಪ್ರಯೋಜನ ಕೊಡಬಹುದು.

ಈ ದೃಷ್ಟಿಯಿಂದ ನಮ್ಮ ಪ್ರಾಚೀನರು ಸ್ತ್ರೀ ಶೂದ್ರ ದ್ವಿಜಬಂಧುಗಳನ್ನು, ಹಿಂದೆ ಹೇಳಿದ ಗೀತೀ ಮೊದಲಾದ ಆರು ವಿಧವಾದ ದೋಷಯುಕ್ತರಾದ ದ್ವಿಜರನ್ನು ಬಿಟ್ಟು ಮಾಧುರ್ಯ, ಅಕ್ಷರಸ್ಫುಟತೆ, ಪದವಿರಳತೆ, ಸುಸ್ವರ, ಧೈರ್ಯ, ಲಯಸಾಮರ್ಥ್ಯ, ಇವಾರು ಗುಣಗಳೂ ಇರುವವರೇ ವೇದಾಭ್ಯಾಸಕ್ಕೆ ಉತ್ತಮ ಅಧಿಕಾರಿಗಳೆಂದು ಹೇಳಿರುವರು.

## ವೇದಗಳಲ್ಲಿ ಇತಿಹಾಸ ಭೂಗೋಳಾದಿಗಳು

ಅನಾದಿನಿತ್ಯವಾದ ವೇದಗಳಲ್ಲಿ ಐತಿಹಾಸಿಕ ವ್ಯಕ್ತಿಗಳೂ, ಘಟನೆಗಳೂ, ಅವುಗಳ ವರ್ಣನೆಗಳೂ ಭೂಗೋಲ, ಜ್ಯೋತಿಷಾದಿ ವಿಷಯಗಳ ವಿವರಣೆಗಳೂ ಅನೇಕ ಕಡೆಗಳಲ್ಲಿ ಕಾಣಬರುತ್ತವೆ. ಊರ್ವಶೀ ಪುರೂರವರ ಕಥೆ, ದುಷ್ಯಂತನ ಕಥೆ, ನಹುಷನ ಕಥೆ, ತುಗ್ರಪುತ್ರ ಭೃಜ್ಯುವಿನ ವಿಷಯವೇ ಮೊದಲಾದುವುಗಳ ವರ್ಣನೆಗಳು ವೇದಗಳಲ್ಲಿವೆ. ಇದರಂತೆಯೇ ಗ್ರಹ, ನಕ್ಷತ್ರ, ವರ್ಷ, ಅಯನ, ಮಾಸವೇ ಮೊದಲಾದ ಜ್ಯೋತಿಷವಿಷಯಗಳೂ ವೇದಗಳಲ್ಲಿ ವರ್ಣಿತವಾಗಿವೆ. ಇವುಗಳ ಬಗ್ಗೆ ಇಂದು ವಿಭಿನ್ನವಾದ ಎರಡು ವಾದಗಳೇ ಎದ್ದು ನಡೆಯುತ್ತಿವೆ.

ಅನಾದಿನಿತ್ಯವಾದ ವೇದಗಳಲ್ಲಿ ಐತಿಹಾಸಿಕ ವ್ಯಕ್ತಿಗಳ ಘಟನೆಗಳ ವಿಷಯವಾಗಲೀ, ಜ್ಯೋತಿಷಾದಿ ವಿಷಯಗಳಾಗಲೀ ವರ್ಣಿತವಾಗಿರಲು ಸಾಧ್ಯವೇ ಇಲ್ಲವೆಂದು, ಈ ವಿಷಯಗಳಬಗ್ಗೆ ಅರ್ಥಾಂತರವನ್ನು ಕಲ್ಪಿಸುವ-ಅನ್ಯಾರ್ಥಮಾಡುವ ಪದ್ಧತಿಯು ಒಂದು, ಹಾಗೆಯೇ ಇನ್ನೊಂದು ವಾದದವರು ವೇದಗಳಲ್ಲಿ ವರ್ಣಿತವಾದ ಐತಿಹಾಸಿಕ ಜ್ಯೋತಿಷಾದಿ ವಿಷಯಗಳು ಇಂದು ಸಾಮಾನ್ಯವಾಗಿ ವ್ಯವಹಾರಮಾಡುತ್ತಿರುವ ಇತಿಹಾಸ ಜ್ಯೋತಿಷಾದಿಗಳಂತೆಯೇ ಇರುವವೆಂಬ ಪೂರ್ಣ ವಿಶ್ವಾಸದಿಂದ ವೇದಗಳು ಮಾನವಕೃತವೆಂದು ತಿಳಿಯುತ್ತಾರೆ; ಮತ್ತು ವೇದಗಳಲ್ಲಿ ವರ್ಣಿತವಾದ

ಐತಿಹಾಸಿಕ ಘಟನೆ, ವ್ಯಕ್ತಿ, ಜ್ಯೋತಿಷಾದಿ ವಿಷಯಗಳ ಆಧಾರದಿಂದ ವೇದಗಳ ರಚನಾಕಾಲವನ್ನು ನಿರ್ಣಯಿಸಲು ಪ್ರಯತ್ನಿಸುತ್ತಾರೆ. ಈ ಪದ್ಧತಿಯು ಎರಡನೆಯವರಾದ ಆಧುನಿಕ ವಿಮರ್ಶಕರ ಹಾದಿಯಾಗಿದೆ.

ಇವರಿಬ್ಬರೂ ವೇದಗಳ ಅರ್ಥವನ್ನು ತಿಳಿಯುವುದಕ್ಕೆ ಮಾನ್ಯತೆ ಕೊಟ್ಟು ಹೊರಟಿರುವುದು ನಿಜ. ಆದರೆ ಇವರಲ್ಲಿ ಒಬ್ಬರಿಗಾದರೂ ವೇದ ಮಂತ್ರಗಳನ್ನು ಕಂಡುಹಿಡಿಯುವ ಶಕ್ತಿಯು ಮಾತ್ರ ಇಲ್ಲವೆಂಬುದೂ ಅಷ್ಟೇ ನಿಜವಿರುತ್ತದೆ. ವೇದಗಳಿಗೆ ಅರ್ಥಮಾಡುವಾಗ ಅಥವಾ ತಿಳಿದುಕೊಳ್ಳುವಾಗ ಕೇವಲ ಪಾಂಡಿತ್ಯದಿಂದಾಗಲಿ ಸ್ವಕಪೋಲ ಕಲ್ಪನೆಯಿಂದಾಗಲೀ ನಿರ್ಣಯಿಸುತ್ತೇನೆಂದು ಹೇಳುವುದು ಸಾಹಸದ ಮಾತಾಗುತ್ತದೆ. ಮತ್ತು ಏಕಪಕ್ಷೀಯ ಸಿದ್ಧಾಂತದಿಂದ ಪೂರ್ವಗ್ರಹದೂಷಿತರಾಗಿ ವೇದಾರ್ಥಗಳನ್ನು ತಿಳಿಯಲು ಪ್ರಯತ್ನಿಸಿದರೆ ಅದರಿಂದ ಪೂರ್ವಗೃಹೀತ ಸಿದ್ಧಾಂತದ ದೃಢೀಕರಣವಾದೀತೇ ಹೊರತು ನಿರ್ಣಯವಾಗಲಾರದು. ಸರಿಯಾಗಿ ವೇದಾರ್ಥಗಳನ್ನು ತಿಳಿದುಕೊಳ್ಳಬೇಕೆಂಬ ಆಶೆಯಿದ್ದರೆ, ನಾವು ಮಾಡುವ ನಿತ್ಯನೈಮಿತ್ತಿಕಾದಿ ಕರ್ಮಗಳಲ್ಲಿ, ಉಪಾಸನೆಯಲ್ಲಿ, ಯಜ್ಞಗಳಲ್ಲಿ, ದೃಢವಿಶ್ವಾಸವು ಹುಟ್ಟಲು ವೇದಾರ್ಥಜ್ಞಾನವು ಬೇಕೆಂದು ತಿಳಿದುಕೊಳ್ಳಲು ಪ್ರಯತ್ನಿಸುವುದಾದರೆ ಆ ಆಶೆಯು ಸದಾಶೆಯಾಗುತ್ತದೆ. ಆ ಪ್ರಯತ್ನವು ಶ್ಲಾಘನೀಯವಿರುತ್ತದೆ. ಆ ಆಶೆ ಇದ್ದರೆ, ಪ್ರಾಚೀನರು ವೇದಾರ್ಥಗಳನ್ನು ತಿಳಿಯುವುದಕ್ಕೆ ಹಾಕಿಕೊಟ್ಟ ಮಾರ್ಗದಿಂದ ಮುಂದುವರಿಯಬೇಕು, ಹಾಗೂ ಪ್ರಯತ್ನಮಾಡಬೇಕು. ಮತ್ತು ಯಾಸ್ಕನೇ ಮೊದಲಾದವರ ಪ್ರಾಚೀನಗ್ರಂಥಗಳನ್ನೂ, ಇತಿಹಾಸ ಪುರಾಣಾದಿಗಳನ್ನೂ, ನೋಡಿ ವೇದಾರ್ಥನಿರ್ಣಯವನ್ನು ಮಾಡಬೇಕಾಗುತ್ತದೆ. "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಇತಿಹಾಸ ಪುರಾಣಾದಿಗಳು ಸಹ ವೇದಗಳ ಭಾಷ್ಯವಾಗಿವೆ. ಇವುಗಳಲ್ಲಿ ಇತಿಹಾಸ ಭೂಗೋಳಾದಿ ವಿಷಯಗಳು ಬಹುಮುಖವಾಗಿ, ವಿವರವಾಗಿ ವರ್ಣಿತವಾಗಿವೆ.

ಇತಿಹಾಸಪುರಾಣಗಳ ಸ್ವರೂಪ ಮತ್ತು ಅವುಗಳಲ್ಲಿ ವರ್ಣಿತವಾಗಿರುವ ವಿಷಯಗಳ ಸತ್ಯಾಸತ್ಯತೆಗಳ ವಿಮರ್ಶೆಯು ಪ್ರತ್ಯೇಕವಾದ

ಸ್ವತಂತ್ರವಾದ ವಿಷಯವಾಗುತ್ತದೆ. ಆದರೆ ಪ್ರಾಚೀನವಾದ ವೈದಿಕ ಸಾಹಿತ್ಯ, ಪುರಾಣ, ಇತಿಹಾಸಗಳ ಸಹಾಯದಿಂದಲಾದರೂ, ವೇದಾರ್ಥಗಳನ್ನು ನಿರ್ಣಯಿಸುವಾಗ ವೇದಗಳ ಬಗ್ಗೆ ಶೋಧನೆ, ವಿಮರ್ಶೆಗಳನ್ನು ಮಾಡುವಾಗ ಒಂದು ಸಂಗತಿಯನ್ನು ಮಾತ್ರ ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳಬೇಕಾಗುತ್ತದೆ " ಪ್ರಪಂಚದಲ್ಲಿ ಯಾವದೂ ಹೊಸತೆಂಬುದಿಲ್ಲ. ಆದ್ದರಿಂದ ಯಾರಿಗೂ ಯಾವನೂ ಹೊಸದನ್ನು ಬೋಧಿಸಲಾರನು. ಜ್ಞಾನದಾತನಾದ ಗುರುವು ನಮಗೆ ಮರೆತುಹೋದ ವಿಷಯಗಳನ್ನು ಜ್ಞಾಪಿಸಿಕೊಡುತ್ತಾನೆ. ಹೊಸತನ್ನು ಬೋಧಿಸುವುದೂ ತಿಳಿಯುವುದೂ, ಹೊಸತೆಂಬ ವಸ್ತುವೂ, ಅಸಂಭವ " ಎಂಬುದು ಒಂದು ಸಿದ್ಧಾಂತ ಅಥವಾ ವಾದವಿದೆ. ಅನಾದಿ ಪ್ರಪಂಚವು ರಥಚಕ್ರಭ್ರಮಣರೀತಿಯಲ್ಲಿ ತಿರುಗುತ್ತಿರುತ್ತದೆಯೆಂದು ಹೇಳುವ ನಮ್ಮ ಶ್ರುತಿ, ಸ್ಮೃತಿ, ಪುರಾಣೇತಿಹಾಸಗಳೆಲ್ಲವೂ ಈ ಸಿದ್ಧಾಂತದ ತಳಹದಿಯಿಂದಲೇ ಭೋಧಿಸುತ್ತವೆ. ಅಂದಮೇಲೆ ಇಂದು ನಾವು ಹೇಳುತ್ತಿರುವ ಜ್ಞಾನದ ಪ್ರಗತಿ, ಜ್ಞಾನದ ವಿಕಾಸ, ಮೊದಲಾದುವುಗಳೆಲ್ಲವೂ ಹೇಗೆ ಹೊಸದಾಗಬಲ್ಲವು ? ಅವೆಲ್ಲವೂ ಧೃಢತರ ವಿಸ್ಮೃತವಾದವುಗಳ ಪುನರನುಸಂಧಾನದ ಫಲವೆಂದು ಹೇಳಿಸಿಕೊಳ್ಳುತ್ತವೆಯೇ ಹೊರತು ಹೊಸತೆಂದು ಹೇಳಿಸಿಕೊಳ್ಳಲಾರವು. " ಹೊಸತಾಗಿ ಕಂಡುಹಿಡಿದೆವು ಎಂದು ಹೇಳುವ ಮಾತಿನಲ್ಲಿಯೂ, ಕಂಡುಹಿಡಿದ ವಿಷಯವು, ಕಾಣುವುದಕ್ಕಿಂತ ಮುಂಚೆ ಇತ್ತು, ಕಣ್ಮರೆಯಾಗಿತ್ತು, ಮರೆತಿತ್ತು ಪುನಃ ಹೊಳೆಯಿತು, ಕಂಡಿತು, ಎಂಬ ಅರ್ಥವು ಅಡಕವಾಗಿಯೇ ಇರುತ್ತದೆ. ಇದಲ್ಲದೆ ಕಂಡುಹಿಡಿದ ವಿಷಯವು, ಪದಾರ್ಥವು, ಹಿಂದೆ ಎಂದೂ, ಎಲ್ಲಿಯೂ, ಇರಲಿಲ್ಲ ವಿಷಯವೂ ಹೊಸತು. ಕಂಡುಹಿಡಿದುದೂ ಹೊಸತು ಎಂದು ಹೇಳುವುದಾದರೆ, ಆ ಮಾತು ಮೇಲಿನ ಸಿದ್ಧಾಂತದವರ ದೃಷ್ಟಿಯಿಂದ ಭ್ರಮಾತ್ಮಕವೂ, ಮಾನವನ ಅಂತಃಕರಣದೋಷದ ಪ್ರತಿಬಿಂಬವೂ ಆಗುತ್ತದೆ ಎಂದು ಹೇಳಬೇಕಾಗುತ್ತದೆ. ಸತ್ಯವು ಅತ್ಯಂತ ಪುರಾತನವಾಗಿದೆ. ಅಂತೆಯೇ, ಸತ್ಯಜ್ಞಾನವೂ ಅಷ್ಟೇ ಪುರಾತನವಿರುತ್ತದೆ. ಸತ್ಯವು ಎಂದೂ ನವೀನವಾಗಲಾರದು ಹಾಗೆಯೇ ಹಳಿಸಿದುದೂ ಆಗಲಾರದು-

ಜ್ಞಾನದ ಸ್ಮರಣ ವಿಸ್ಮರಣಗಳ ಚಕ್ರವು ಅನಾದಿ ಸಂಸಾರದಲ್ಲಿ ಅನಾದಿ ಕಾಲದಿಂದಲೂ ಒಂದೇ ಸಮನೆ ತಿರುಗುತ್ತಿದೆ.

ಹೀಗೆ ಜ್ಞಾನವು ನವೀನವಾಗುವುದಿಲ್ಲವೆಂದಮೇಲೆ, ಜ್ಞಾನಸಿದ್ಧಿಗೆ ಕಾರಣವಾದ ವಿಚಾರವೂ ಸಹ ಎಂದೂ ನವೀನವಾಗಲಾರದು. ಹಾಗೆಯೇ ಮಾನವನು ಎಂದೂ ಹೊಸವಿಚಾರವನ್ನು ಮಾಡಲಾರನು. ಮನುಷ್ಯನ ವಿಚಾರದಮೇಲೆ ಒಂದು ವಿಧವಾದ ಪರದೆಯು ಆವರಿಸಿರುತ್ತದೆ; ಆ ಪರದೆಯ ಅನುಗುಣವಾಗಿಯೇ ಮನಸ್ಸಿನಲ್ಲಿ ವಿಚಾರಧಾರೆಯು ಹರಿಯುತ್ತದೆ. ಯಾವೊಂದು ಪದಾರ್ಥ, ವಿಷಯ, ಘಟನೆಗಳೇ ಆದರೂ ವಿಚಾರದ ಪರಿಣಾಮಗಳಾಗಿಯೇ ಇರುತ್ತವೆ. ಮನಸ್ಸಿನಲ್ಲಿ ಬಂದ ಹೊರತು ಯಾವ ಕೆಲಸವಾಗಲೀ ಘಟನೆಗಳಾಗಲೀ ನಡೆಯುವುದಿಲ್ಲ. ಹೀಗೆ ಪರಸ್ಪರ ಸಂಬಂಧದಿಂದ ವಿಚಾರಧಾರೆಯು ಅನಾದಿ ಕಾಲದಿಂದ ಹರಿಯುತ್ತ ಬಂದಿದೆ. ಅದನ್ನು ಅನುಸರಿಸಿಯೇ ಪ್ರಪಂಚದ ಪ್ರತಿಯೊಂದು ಪದಾರ್ಥ, ಘಟನೆಗಳೂ ಆಗಾಗ ವ್ಯಕ್ತವಾಗುತ್ತಾ, ಮರೆಯಾಗುತ್ತಾ ಬಂದಿವೆ.

ಇದರಂತೆಯೇ ಪ್ರಪಂಚವನ್ನೂ ಸಹ ಯಾವುದೋ ಒಂದು ಚೇತನವು ಸೃಷ್ಟಿಸಿದೆ; ಆ ಚೇತನದಲ್ಲಿ ಮನಸ್ಸಿದೆ; ಆ ಚೇತನದ ಮನಸ್ಸಿನ ತಾರತಮ್ಯವು ಸೃಷ್ಟಿಯಲ್ಲಿ ಕಾಣುತ್ತದೆ; ಆ ಸೃಷ್ಟಿಕರ್ತನ ವಿಚಾರವೇ ಸೃಷ್ಟಿಯಾಗಿ ಪರಿಣಮಿಸುತ್ತದೆ. " ಸೋಽಕಾಮಯತ, ಬಹುಸ್ಯಾಂ ಪ್ರಜಾಯೇಯೇತಿ " ಆ ಸೃಷ್ಟಿಕರ್ತನಾದರೂ ಹೊಸ ವಿಚಾರವನ್ನಾಗಲೀ, ಹೊಸ ಸೃಷ್ಟಿಯನ್ನಾಗಲೀ ಮಾಡುವುದಿಲ್ಲ. ಹಿಂದಿನದನ್ನೇ ಸ್ಮರಿಸಿಕೊಳ್ಳುತ್ತಾನೆ. ಆ ಸ್ಮರಣೆಯನ್ನು ಅನುಸರಿಸಿಯೇ ಸೃಷ್ಟಿಸುತ್ತಾನೆ. " ಧಾತಾ ಯಥಾ ಪೂರ್ವಮಕಲ್ಪಯತ್, " "ಬ್ರಹ್ಮನು ಹಿಂದಿನಂತೆಯೇ ಪುನಃ ಪ್ರಪಂಚವನ್ನು ಸೃಷ್ಟಿಸಿದನು " ಎಂದು ವೇದವು ಸ್ಪಷ್ಟವಾಗಿ ಹೇಳುತ್ತದೆ. ಅಂದರೆ ಈ ಸಮಸ್ತ ಪ್ರಪಂಚವೂ, ಪೃಥ್ವಿಯೂ ಅವುಗಳ ಪರಿವರ್ತನೆಗಳೂ, ಪ್ರಪಂಚದ ಎಲ್ಲಾ ವಿಧವಾದ ಆಕೃತಿಗಳೂ, ಘಟನೆಗಳೂ ಸಹ ತಮ್ಮ ತಮ್ಮ ಪುನರಾವರ್ತನೆಗಳು ಮಾತ್ರ. ಒಂದು ಹುಲ್ಲುಕಡ್ಡಿಯೂ ಸಹ ಹೊಸ

ತೆಂಬುದು ಇಲ್ಲ. ಅಂದಮೇಲೆ ಹೊಸ ಶೋಧನೆ, ಹೊಸ ವಿಚಾರ, ಹೊಸ ಜ್ಞಾನಗಳೆಲ್ಲವೂ ಎಲ್ಲಿ ? ಅವೆಲ್ಲಾ ಕೇವಲ ಭ್ರಮೆ, ಮೋಹ.

ಇದರ ಸತ್ಯತೆಯ ಬಗ್ಗೆ ವಿಶ್ವಾಸವಿಲ್ಲದವರ ವಿಷಯವನ್ನು ಬಿಟ್ಟು ಬಿಡುವ. ವಿಶ್ವಾಸ, ಶ್ರದ್ಧೆಗಳಿರುವವರ ದೃಷ್ಟಿಯಿಂದ ಹೇಳುವುದಾದರೆ, ಜ್ಯೋತಿಷವು ಸರಿಯಾದ ದೃಷ್ಟಾಂತವಾಗುವಂತಿದೆ. ಇಂದು ಶ್ರದ್ಧಾಳುಗಳು ಜ್ಯೋತಿಷದ ಸಹಾಯದಿಂದ ತಮ್ಮ ಜೀವನದ ಶುಭಾಶುಭ ಫಲಗಳನ್ನು ತಿಳಿದುಕೊಳ್ಳುತ್ತಾರೆ. ಸರಿಯಾದ ಫಲ ಜ್ಯೋತಿಷಿಯು ಅಪ್ರತ್ಯಕ್ಷನಾಗಿಯೇ ಇನ್ನೊಬ್ಬ ಮನುಷ್ಯನ ಆಕಾರ, ಬಣ್ಣ, ಸ್ವಭಾವ, ಬದುಕುವ ಕಾಲ ಜೀವನದ ಉನ್ನತಿ, ಅವನತಿಗಳೆಲ್ಲವನ್ನೂ ತಿಳಿಯುತ್ತಾನೆ. ಸರಿಯಾದ ಜ್ಯೋತಿಷಜ್ಞನು ಹೇಳಿದ ಫಲಗಳ ಸತ್ಯಾನುಭವಗಳು ಇಂದೂ ಸಹ ಅವೆಷ್ಟೋ ಬರುತ್ತಿವೆ. ಯಾವುದಾದರೂ ಮುಂದೆ ಆಗುವುದು ನವೀನವಾಗಿದ್ದರೆ, ಅದನ್ನು ಮುಂಚಿತವಾಗಿ ಹೇಳಲಾಗುವುದಿಲ್ಲ. ಅನಿಶ್ಚಿತ ವಿಷಯಗಳನ್ನಾದರೂ ಹೀಗೆಯೇ ಎಂದು ಖಚಿತವಾಗಿ, ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಜ್ಯೋತಿಷದಲ್ಲಿ ಹೇಳುವ ಶುಭಾಶುಭ ಫಲಗಳೆಲ್ಲವೂ ಗ್ರಹಗಳ ಸ್ಥಿತಿಗಳನ್ನು ಅವಲಂಬಿಸಿರುತ್ತವೆ. ಅಂದಮೇಲೆ ಜ್ಯೋತಿಷ ಶಾಸ್ತ್ರದಲ್ಲಿ ಹೇಳಿದ ಫಲದಾತೃಗಳಾದ ಗ್ರಹಗಳಸ್ಥಿತಿಗಳು ಅತ್ಯಂತ ಪ್ರಾಚೀನ ಕಾಲದಲ್ಲಿಯೇ ವ್ಯವಸ್ಥಿತವಾಗಿದ್ದು, ಅವುಗಳ ಆವರ್ತಿಗಳು ಒಂದು ಕ್ರಮಬದ್ಧವಾಗಿರಬೇಕಾಗುತ್ತದ.

ಪೂರ್ಣಜ್ಞಾನಿಯಾದ ಸೃಷ್ಟಿಕರ್ತನು ಜ್ಯೋತಿಷದ ಗ್ರಹನಕ್ಷತ್ರಾದಿಗಳನ್ನು ಸರಿಯಾಗಿ ಎಣಿಸಿ ಉಚಿತವಾದ ಸ್ಥಾನಗಳಲ್ಲಿ ಇಟ್ಟಿದ್ದಾನೆ. ಹೀಗೆಯೇ ಅವುಗಳ ಸ್ಥಿತಿಗಳನ್ನು ನಿಗದಿಮಾಡಿದ್ದಾನೆ. ಆದ್ದರಿಂದಲೇ ಗ್ರಹನಕ್ಷತ್ರಾದಿಗಳು ಒಂದು ನಿಶ್ಚಿತವಾದ ಅವಧಿಯಲ್ಲಿ ಪರಿಮಿತವಾದ ವೇಗದಿಂದ ಅಲ್ಲಲ್ಲಿಯೇ ಪುನಃಪುನಃ ಸುತ್ತುತ್ತಿರುತ್ತವೆ. ಪ್ರತ್ಯೇಕ ಗ್ರಹನಕ್ಷತ್ರಗಳ ಗತಿಯು ಎಷ್ಟೇ ವೇಗವಾಗಿರಲೀ ಅಥವಾ ಎಷ್ಟೇ ಕಾಲಪರಿಮಿತಿಯದಾಗಿರಲೀ ಒಂದು ಸುತ್ತು ಮುಗಿದಮೇಲೆ ಪುನಃ ತಮ್ಮತಮ್ಮ ಮೊದಲಿನ ಸ್ಥಾನಗಳಿಗೇ ಬಂದು ಮೇಲಿಂದ ಮೇಲೆ ಸುತ್ತುತ್ತಿರುತ್ತವೆ. ಹಿಂದಿನ

ಭ್ರಮಣವನ್ನೇ ಪುನರಾವರ್ತಿಗೊಳಿಸುತ್ತಿರುತ್ತವೆ. ಇದೇ ರೀತಿಯಾಗಿ ಪುನರಾವರ್ತಿಗಳೂ, ಘಟನೆಗಳೂ ಒಂದಾದಮೇಲೊಂದರಂತೆ ಹಿಂದಿನಂತೆಯೇ ನಡೆಯುತ್ತಿರುತ್ತವೆ. ಇಲ್ಲದಿದ್ದರೆ ಫಲ ಜ್ಯೋತಿಷವು ಎಂದಿಗೂ ಸತ್ಯವಾದ ಫಲಾನುಭವಗಳನ್ನು ಕೊಡುತ್ತಿರಲಿಲ್ಲ.

ಹೀಗೆ ಪ್ರಪಂಚದ ಇತಿಹಾಸ, ಭೂಗೋಳಾದಿಗಳು ನಿತ್ಯವಾದುವುಗಳೆಂದಮೇಲೆ, ಅವು ಈಶ್ವರನ ನಿತ್ಯ ಜ್ಞಾನವಾದ ವೇದಗಳಲ್ಲಿರುವುದು ಸಹಜವಿರುತ್ತದೆ. ವೇದಗಳಲ್ಲಿ ಭೂಗೋಲಾದಿ ವಿಷಯಗಳಿವೆ. ಆದರೆ ಅವು ಬದಲಾವಣೆಯಾಗುವುದಿಲ್ಲ. ಅನಾದ್ಯನಂತವಾಗಿ ಹರಿಯುವ ಪ್ರಪಂಚದ ಪುನರಾವರ್ತನೆಗೊಳ್ಳುತ್ತಿರುವ ಇತಿಹಾಸಾದಿಗಳು ವೇದಗಳಲ್ಲಿರುವುದರಿಂದ ಕೇವಲ ಗತಕಾಲದ ಇತಿಹಾಸಗಳು ಮಾತ್ರವೇ ಅಲ್ಲ; ಭವಿಷ್ಯತ್ಕಾಲದ ಇತಿಹಾಸಾದಿಗಳೂ ಸಹ ವೇದಗಳಲ್ಲಿರುತ್ತವೆ. ಆದರೆ ವೇದಗಳಲ್ಲಿರುವ ಇತಿಹಾಸವು ಇಂದು ನಾವು ವ್ಯವಹಾರದಲ್ಲಿ ಹೇಳುವ ಇತಿಹಾಸವಲ್ಲ. ಇಂದು ನಾವು ಕರೆಯುವ ಇತಿಹಾಸ ದೃಷ್ಟಿಯಿಂದ ವೇದ, ಅದರೊಳಗಿನ ವ್ಯಕ್ತಿ, ವಿಷಯಗಳ ಬಗ್ಗೆ ಶೋಧಿಸುವುದು ಮತ್ತು ಅದರ ಆಧಾರದಿಂದ ವೇದಗಳಕಾಲ ನಿರ್ಣಯಮಾಡುವುದು ಕೇವಲ ಬಾಲಚೇಷ್ಟೆಯೆನಿಸುತ್ತದೆ.

## ವೈದಿಕ ರಾಜ್ಯ ಶಾಸನಗಳು

ಇಂದು ನಾವು ಸಾಮಾನ್ಯವಾಗಿ ಉಪನ್ಯಾಸಗಳಲ್ಲಿಯೂ, ಅನೇಕ ಲೇಖನ ಪ್ರಬಂಧಗಳಲ್ಲಿಯೂ, ಮಾತ್ರವೇ ಅಲ್ಲದೆ ಇಂದಿನ ವಿದ್ಯಾಭ್ಯಾಸದಲ್ಲಿ ಮಕ್ಕಳಿಗೆ ಕಲಿಸುವ ಕೆಲವು ಇತಿಹಾಸದ ಪಠ್ಯಪುಸ್ತಕಗಳಲ್ಲಿಯೂ ವೇದಕಾಲದಲ್ಲಿ ಸರಿಯಾದ ರಾಜ್ಯಭಾರಕ್ರಮವಿರಲಿಲ್ಲವೆಂದು ಹೇಳಿ, ಜನರ ಮತ್ತು ಮುಂದಿನ ಪ್ರಜೆಗಳಾದ ಮಕ್ಕಳ ತಲೆಯನ್ನು ತಪ್ಪು ಕಲ್ಪನೆಯದನ್ನಾಗಿಯೂ ಅಶ್ರದ್ಧೆಯದನ್ನಾಗಿಯೂ ಮಾಡಲಾಗುತ್ತಿದೆ. ಆದರೆ ವೇದಗಳನ್ನು ಪರಿಶೀಲಿಸಿದರೆ ಚಕ್ರವರ್ತಿ, ರಾಜ, ಸಾರ್ವಭೌಮ ಮೊದಲಾದ ಶಬ್ದಗಳೂ, ಇವರಾಗಿ ಆಳಿದ ಅನೇಕ ರಾಜರೂ, ಚಕ್ರವರ್ತಿ ಸಾರ್ವಭೌಮರ ಹೆಸರುಗಳೂ ಅನೇಕ ಕಡೆಗಳಲ್ಲಿ ಕಾಣಬರುತ್ತವೆ. ಮತ್ತು ಅನೇಕ ವಿಧವಾದ

ರಾಜ್ಯ ಶಾಸನ ಪದ್ಧತಿಗಳ ಹೆಸರುಗಳೂ, ಕೆಲವು ರಾಜ್ಯಶಾಸನ ಪದ್ಧತಿಗಳ ವಿಷಯಗಳೂ ಸಹ ವೇದಗಳಲ್ಲಿ ವರ್ಣಿತವಾಗಿವೆಯೆಂಬುದು ಚನ್ನಾಗಿ ಕಾಣು ವಂತಿವೆ. ಇವುಗಳನ್ನು ಪರೀಕ್ಷಿಸಿ ನೋಡುತ್ತಾ ಹೋದರೆ ನಮಗೆ ವೇದ ಗಳಬಗ್ಗೆ ಮತ್ತಷ್ಟು ಆದರವೂ, ಗೌರವವೂ, ಆಶ್ಚರ್ಯವೂ ಉಂಟಾಗು ವಂತಿದೆ.

ಪ್ರಾಚೀನ ಕಾಲದಿಂದಲೂ ಭಾರತೀಯರು ತಮ್ಮ ಪ್ರತಿಯೊಂದು ವಿಷಯದಲ್ಲಿಯೂ ವೇದ, ಸ್ಮೃತಿ, ಪುರಾಣಗಳನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಅದರಂತೆಯೇ ರಾಜಧರ್ಮ ಅಥವಾ ರಾಜಶಾಸನ ಪದ್ಧತಿಗಳಲ್ಲಿಯೂ ಸಹ ಶ್ರುತಿ, ಸ್ಮೃತಿ, ಪುರಾಣೋಕ್ತ ಕ್ರಮಗಳನ್ನೇ ಅನುಸ ರಿಸಿಕೊಂಡು ಬರುತ್ತಿದ್ದರು. ಅದನ್ನು ನಾವು ಇಂದೂ ಸಹ ವಿಚಾರಶೀಲ ರಾಗಿ ವೇದ ಪುರಾಣಾದಿಗಳನ್ನು ಪರಿಶೀಲಿಸಿದರೆ ಕಾಣದೇ ಇರಲಾರೆವು.

ಕೆಲವು ಚಕ್ರವರ್ತಿ, ಸಾರ್ವಭೌಮ, ರಾಜ ಎಂಬ ಶಬ್ದಗಳೂ, ಚಕ್ರವರ್ತಿ ಸಾರ್ವಭೌಮರಾಗಿ ಆಳಿದ ಪುರಾಣಗಳಲ್ಲಿ ವರ್ಣಿತವಾದ ಕೆಲವರ ಹೆಸರುಗಳೂ, ಮತ್ತೆ ಕೆಲವು ಪ್ರಭುತ್ವಗಳ ಹೆಸರುಗಳೂ ಸಂಹಿತಾ ಗ್ರಂಥಗ ಳಲ್ಲಿ ಕ್ವಚಿತ್ತಾಗಿ ಕಾಣಬರುತ್ತವೆ. ಆದರೆ ಬ್ರಾಹ್ಮಣಗ್ರಂಥಗಳಲ್ಲಿ, ಇವುಗಳ ವರ್ಣನೆಯು ಸ್ಪಷ್ಟವಾಗಿಯೂ, ಯಾವ ಯಾವ ರಾಜ್ಯಾಡಳಿತ ಪ್ರಭೇದಗಳು ಭಾರತದ ಒಳಗೂ, ಹೊರಗೂ, ಯಾವ ಯಾವ ದೇಶದಲ್ಲಿ ಯಾವ ಯಾವುವಿದ್ದವೆಂಬುದೂ ಸಹ ಅನೇಕ ಕಡೆಗಳಲ್ಲಿ ವರ್ಣಿತವಾಗಿವೆ. ಹಿಂದೂ ವೈದಿಕ ಸಂಪ್ರದಾಯದಂತೆ ದೇವರ ಪೂಜೆಯನ್ನು ಮಾಡಿ ಮುಗಿದಮೇಲೆ ಮಂತ್ರ ಪುಷ್ಪವನ್ನು ಹೇಳುವಾಗ, ವಿಶೇಷ ಪೂಜಾದಿವಸಗಳಲ್ಲಿ ಹೇಳುವ ಋಗ್ವೇದಬ್ರಾಹ್ಮಣದ ಒಂದು ಮಂತ್ರದಲ್ಲಿ ಅನೇಕ ವಿಧವಾದ ರಾಜ್ಯಶಾಸನ ಪದ್ಧತಿಗಳ ಹೆಸರುಗಳು ಅಥವಾ ಅನೇಕ ವಿಧವಾದ ಪ್ರಭುತ್ವಗಳ ಹೆಸರುಗಳು ಕಾಣಬರುತ್ತವೆ. ಅವನ್ನು ಇಲ್ಲಿ ಸ್ವಲ್ಪ ಪರಾಂಬರಿಸಬಹುದಾಗಿದೆ.

ಆದ್ದರಿಂದ ಇದನ್ನು ಕೇವಲ ಕಲ್ಪಿತವೆಂದಾಗಲೀ, ಅಸಂಭವವೆಂ ದಾಗಲೀ ಉಪೇಕ್ಷಿಸುವಂತಿಲ್ಲ. ಪ್ರಪಂಚದ ಕಲ್ಯಾಣಕ್ಕಾಗಿ ಪರಮಾತ್ಮ ನಿಂದ ನಿರ್ದಿಷ್ಟವಾದ, ಋಷಿಗಳು ತಮ್ಮ ಪ್ರಭಾವದಿಂದ ಕಂಡಹಿಡಿದ ಮಾನ

ವನ ಜೀವನಕ್ಕೆ, ಸಮಾಜದ ಅಸ್ತಿತ್ವಕ್ಕೆ ಅತ್ಯಂತ ಆವಶ್ಯಕವಾದ ಈ ರಾಜ್ಯ ಶಾಸನ ಕ್ರಮಗಳು ಅಸಾಧ್ಯನಂತವಾದ, ಮಹಾಕಾಲದೊಳಗೆ, ಒಂದಿಲ್ಲೊಂದು ಕಾಲದಲ್ಲಿ ಭಾರತದ ಒಳಗೂ, ಹೊರಗೂ ಐತಿಹಾಸಿಕವಾಗಿಯೇ ಘಟಿಸಿ, ಕಣ್ಮರೆಯಾಗಿವೆ ಎಂಬುದನ್ನು ಮರೆಯುವಂತಿಲ್ಲ.

"ಸ್ವಸ್ತಿ:-ಸಾಮ್ರಾಜ್ಯಂ, ಭೌಜ್ಯಂ, ಸ್ವಾರಾಜ್ಯಂ, ವೈರಾಜ್ಯಂ, ಪಾರಮೇಷ್ಠ್ಯಂ, ರಾಜ್ಯಂ, ಮಹಾರಾಜ್ಯಂ, ಆಧಿಪತ್ಯಮಯಂ, ಸಮಂತಪರ್ಯಾಯೀ, ಸ್ಯಾತ್-ಸಾರ್ವಭೌಮಃ ಸಾರ್ವಾಯುಷಾ ಆಂತಾದಾಪರಾರ್ಧಾತ್ ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಡಿತಿ."

ಈ ಬ್ರಾಹ್ಮಣಮಂತ್ರದಲ್ಲಿ ಸಾಮ್ರಾಜ್ಯ, ಭೌಜ್ಯ, ವೈರಾಜ್ಯ, ಸ್ವಾರಾಜ್ಯ, ಪಾರಮೇಷ್ಠ್ಯ, ರಾಜ್ಯ, ಮಹಾರಾಜ್ಯ, ಆಧಿಪತ್ಯಮಯ, ಸಮಂತಪರ್ಯಾಯೀ ಎಂಬ ಒಂಬತ್ತು ವಿಧವಾದ ರಾಜ್ಯಶಾಸನಕ್ರಮಗಳನ್ನು ಅಥವಾ ಪ್ರಭುತ್ವದ ಪ್ರಭೇದಗಳನ್ನು ಹೆಸರಿಸಲಾಗಿದೆ. ಇವುಗಳಲ್ಲದೇ ಜನರಾಜ್ಯ, ಗಣರಾಜ್ಯಗಳ ಹೆಸರುಗಳೂ ಸಹ ವೇದಗಳಲ್ಲಿ ಕ್ವಚಿತ್ತಾಗಿ ಕಾಣಬರುತ್ತವೆ.

ಮೇಲೆಹೇಳಿದ ಪ್ರಭುತ್ವಭೇದಗಳ ಋಷಿಘೋಷಣೆಯು ಬಹಳ ಮಹತ್ವಪೂರ್ಣವಾಗಿದೆ. ಈ ಮಂತ್ರದಲ್ಲಿ "ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಟ್, ಸಮುದ್ರದವರೆಗೆ ವ್ಯಾಪಿಸಿಕೊಂಡಿರುವ ಸಮಸ್ತ ಭೂಭಾಗಕ್ಕೂ ಒಬ್ಬನೇ ರಾಜನು" ಎಂದು ಹೇಳಿದೆ. ಇದರಿಂದ ಒಂದು ಕಾಲದಲ್ಲಿ ಸಮಸ್ತಪ್ರಪಂಚದ ಒಡೆತನವು ಆರ್ಯರದಾಗಿದ್ದಿತು, ಮತ್ತು ಒಬ್ಬನೇ ಒಬ್ಬ ರಾಜನು ಅದೊಂದು ಕಾಲದಲ್ಲಿ ಸಾಮ್ರಾಟನಾಗಿ ಸಮಸ್ತ ಪೃಥ್ವಿಯನ್ನೂ ಆಳುತ್ತಿದ್ದನು. ಮತ್ತು ಈ ಸಾರ್ವಭೌಮರಾಜನು ಪ್ರಪಂಚದ ಎಲ್ಲಾ ಜನರನ್ನೂ ಆರ್ಯರನ್ನಾಗಿ-ಸದಾಚಾರಸಂಪನ್ನರನ್ನಾಗಿ ಮಾಡಲು ರಾಜ್ಯಭಾರಮಾಡುತ್ತಿದ್ದನು. "ಕೃಣ್ವಂತೋ ವಿಶ್ವಮಾರ್ಯಂ" ಎಂದು ಋಗ್ವೇದದಲ್ಲಿ ಸ್ಪಷ್ಟವಾಗಿ ಹೇಳಿದೆ.

ಇನ್ನು ಮೇಲೆಹೇಳಿದ ಬ್ರಾಹ್ಮಣಮಂತ್ರದಲ್ಲಿ ಹೇಳಿದ ಪ್ರಭುತ್ವಗಳ ಶಾಸನಕ್ರಮಗಳು ಹೇಗಿದ್ದಿರಬಹುದೆಂದು ಆಯಾ ಹೆಸರುಗಳನ್ನನುಸರಿಸಿ ಸ್ವಲ್ಪ ವಿವರಿಸುವ:—

೧ **ಸಾಮ್ರಾಜ್ಯ:—** ಪ್ರಪಂಚದ ಎಲ್ಲಾರಾಜರುಗಳನ್ನೂ ಜಯಿಸಿ ಸಂಪೂರ್ಣವಾದ ಭೂಭಾಗವನ್ನು ತನ್ನ ಆಧಿಪತ್ಯಕ್ಕೆ ಒಳಪಡಿಸಿಕೊಂಡು ರಾಜ್ಯಭಾರಮಾಡುವವನು 'ಸಾಮ್ರಾಟ್' ಎಂದು ಹೇಳಿಸಿಕೊಳ್ಳುತ್ತಾನೆ. ಇವನು ತಾನು ಗೆದ್ದ ರಾಜರುಗಳನ್ನು ಅವರವರ ರಾಜ್ಯದಲ್ಲಿಯೇ ರಾಜರನ್ನಾಗಿ ಇಡುತ್ತಿದ್ದನು. ಮತ್ತು ಅವರನ್ನು ತನ್ನ ಮಾಂಡಳಿಕ ರಾಜರನ್ನಾಗಿ ಮಾಡಿಕೊಂಡು ಅವರಿಂದ ವಾರ್ಷಿಕ ಪೊಗದಿಯನ್ನು ಸ್ವೀಕರಿಸುತ್ತಿದ್ದನು. ತಮ್ಮ ರಾಜಕೀಯ, ಸಾಮಾಜಿಕಾದಿ ರೀತಿನೀತಿಗಳನ್ನು ಸಾಮಾನ್ಯವಾಗಿ ಅನುಸರಿಸಿಕೊಂಡು ಬರುವಂತೆ ಈ ಮಾಂಡಳಿಕ ರಾಜರಿಗೆ ಆಜ್ಞಾಪಿಸುತ್ತಿದ್ದನು. ವೈದಿಕ ಸಾಮ್ರಾಜ್ಯಪದ್ಧತಿಯು ಇಂದಿನ ಬ್ರಿಟನ್ ಅಮೆರಿಕಾ ದೇಶಗಳ ಸಾಮ್ರಾಜ್ಯಶಾಹೀ ಸರ್ಕಾರಗಳ ರೀತಿಗಳಂತೆ ಸೋತು ಅಧೀನರಾದ ರಾಜರ ಮತ್ತು ರಾಜ್ಯದ ಸರ್ವಸ್ವಾಪಹಾರಕ್ಕೆ, ಎಲ್ಲಾ ವಿಧವಾದ ಶೋಷಣೆಗೆ ಪ್ರಯತ್ನಿಸುತ್ತಿರಲಿಲ್ಲ, ತಮ್ಮ ರಾಜ್ಯಭಂಡಾರವನ್ನು ದೇಶಗಳನ್ನು ಪುಷ್ಟಿಗೊಳಿಸಲು ಬೇಕಾದ ಎಲ್ಲವನ್ನೂ ಕಿತ್ತುಕೊಂಡು ಹೋಗುತ್ತಿರಲಿಲ್ಲ. ತನ್ನ ಅಧೀನರಾದ ಮಾಂಡಳಿಕ ರಾಜರಿಗೆ ಮತ್ತು ಪ್ರಜೆಗಳಿಗೆ ಬೇಕಾದ ಎಲ್ಲಾ ಸೌಕರ್ಯಗಳನ್ನೂ ಕಲ್ಪಿಸಿಕೊಡುತ್ತಿದ್ದನು. ಮಾಂಡಳಿಕರು ಸ್ವಾರ್ಥರಹಿತರೂ, ಸಮದೃಷ್ಟಿಯುಳ್ಳವರೂ ಆಗುವಂತೆ ಮಾಡಿ ಪ್ರಪಂಚದ ಎಲ್ಲಜನರೂ ಆರ್ಯವಿಧಾನದಂತೆ ಸತ್ಯಸಂಧರೂ, ನೀತಿಪರರೂ, ಸದಾಚಾರ ಸಂಪನ್ನರೂ, ಸುಖಜೀವಿಗಳೂ ಆಗುವುದಕ್ಕೆ ಅನುಕೂಲವಾದ ರಾಜ್ಯಶಾಸನಗಳನ್ನು ಮಾಡಿಕೊಡುತ್ತಿದ್ದನು. ಹೀಗೆ "ಸರ್ವೇಜನಾಃ ಸುಖಿನೋಭವಂತು" ಎಂಬ ದೃಷ್ಟಿಯಿಂದ ಪ್ರಪಂಚವನ್ನೆಲ್ಲಾ ಜಯಿಸಿ, ಏಕಚ್ಛತ್ರಾಧಿಪತಿಯಾಗಿ ಆಳುವುದಕ್ಕೆ ಸಾಮ್ರಾಜ್ಯಪದ್ಧತಿಯ ಆಳ್ವಿಕೆ ಎಂದು ಹೆಸರು.

೨. **ಭೌಜ್ಯ:**.... ರಾಷ್ಟ್ರದ ಯಾವ ಭಾಗವಲ್ಲಿ ಹೇಗೆ ನಿಂತರೂ; ಭುಜಗಳಂತೆ ಎರಡು ಕಡೆಗಳಿಗೂ ಪ್ರಾಕೃತಿಕವಾದ ರಕ್ಷಣೆಯು ಇರುವ ದೇಶದ ಪ್ರಭುತ್ವಕ್ಕೆ ಭೌಜ್ಯಶಾಸನ ಪದ್ಧತಿಯೆಂದು ಹೆಸರು. ಎಂದರೆ ದೇಶದ ಸುತ್ತಲೂ ಪ್ರಾಕೃತಿಕವಾದ ರಕ್ಷಣೆ ಇರಬೇಕು. ಈ ದೇಶದ ಆಳ್ವಿಕೆಯು ಮತ್ತಾವ ಹೊರದೇಶದ ಆಳ್ವಿಕೆಯೂ ಇವಕ್ಕೆ ಸೇರಕೂಡದು. ಇಂಲ್ಲದೆ, ತಹ ಆಳ್ವಿಕೆಯನ್ನು ಮಾಡುವಾಗ ಅಲ್ಲಿನ ಪ್ರಜೆಗಳು ಸುಖಸಮೃದ್ಧರಾಗಿ

ಉಂಡು, ತಿಂದು, ನೆಮ್ಮದಿಯಿಂದ ಬಾಳುವಂತೆ ಮಾಡುವಕ್ರಮವು ಭೌಜ್ಯ ರಾಜ್ಯಪ್ರಭುತ್ವವೆಂದು ಹೇಳಿಸಿಕೊಳ್ಳುತ್ತದೆ. ಇದಕ್ಕೆ ಉತ್ತರದಲ್ಲಿ ಹಿಮಾಲಯವೂ, ಉಳಿದ ಮೂರು ಭಾಗಗಳಿಗೆ ಲವಣಸಮುದ್ರವೂ ಪ್ರಾಕೃತಿಕವಾದ ರಕ್ಷಣೆಯಿರುವ-ಹಿಮಾಲಯದಿಂದ ರಾಮೇಶ್ವರದವರೆಗೆ ವ್ಯಾಪಿಸಿಕೊಂಡಿರುವ ಅಖಂಡಭಾರತದ ಆಳ್ವಿಕೆಯು ಸರಿಯಾದ ದೃಷ್ಟಾಂತವಾಗುವಂತಿದೆ.

೩. **ಸ್ವಾರಾಜ್ಯ:— ಸ್ವಾರಾಜ್ಯ** ಶಾಸನ ಕ್ರಮವು ವೈದಿಕ ರಾಜ್ಯಶಾಸನಗಳ ಕ್ರಮದಲ್ಲಿ ಒಂದು ಅತ್ಯುತ್ತಮವಾದ ಪದ್ಧತಿಯು. ಸ್ವಾರಾಜ್ಯವೆಂದು ಹೇಳುವಾಗ ಈ ಶಬ್ದದ '**ಸ್ವಾ**' ಎಂಬ ಅಕ್ಷರದ ಸ್ವರವನ್ನು ಒತ್ತಿಹೇಳುವುದರಿಂದ ಒಂದು ಅರ್ಥವೂ, **ರಾಜ್ಯ** ಎಂಬ ಅಕ್ಷರಗಳ ಸ್ವರಗಳನ್ನು ಒತ್ತಿ ಹೇಳುವುದರಿಂದ ಇನ್ನೊಂದು ವಿಧವಾದ ಅರ್ಥವೂ ಹೊರಡುತ್ತದೆ. "**ಸ್ವಾ**" ಕಾರವನ್ನು ಒತ್ತಿ ಹೇಳಿದರೆ ಸ್ವಕೀಯವಾದ ಪರಿಶುದ್ಧತೆಗೆ ಮಹತ್ವವೂ, **ರಾಜ್ಯ** ಎಂಬುದನ್ನು ಒತ್ತಿ ಹೇಳಿದರೆ, ರಾಜ್ಯ ಶಾಸನದಕ್ರಮವು ತನ್ನ ಕೈಬಿಟ್ಟು ಹೋಗದಂತೆ ರಕ್ಷಿಸಿಕೊಳ್ಳುವುದರಲ್ಲಿ ಹೆಚ್ಚು ಮಹತ್ವವು ಇರುವುದೆಂದೂ ಅರ್ಥವಾಗುತ್ತದೆ. ಹೀಗೆ ಸ್ವರವನ್ನು ಸ್ವಲ್ಪ ಬದಲಾಯಿಸಿ ಹೇಳಿದರೆ ಈ ಎರಡು ವಿಧವಾದ ಅರ್ಥಗಳೂ, ಆಕಾಶ ಪಾತಾಳಗಳಷ್ಟು ಅಂತರವನ್ನು ಹೊಂದುತ್ತವೆ.

'**ಸ್ವಾ**'ರಾಜ್ಯದಲ್ಲಿ ಪ್ರಭುವು ತನ್ನ ಪರಿಶುದ್ಧತೆ, ಪಾವಿತ್ರ್ಯಗಳನ್ನು ಕಾಪಾಡಿಕೊಳ್ಳುವುದರಲ್ಲಿಯೂ, ಮತ್ತು ಅವಕ್ಕೆ ಬೇಕಾದ ಸಂಯಮವೇ ಮೊದಲಾದ ಆತ್ಮಗುಣಗಳನ್ನು ಅಭಿವೃದ್ಧಿ ಪಡಿಸಿಕೊಳ್ಳುವುದರಲ್ಲಿಯೂ ಲಕ್ಷ್ಯ ಕೊಡಬೇಕಾಗುತ್ತದೆ. ಕಪಟ, ಮೋಸ, ದಂಭ, ಮೋಹ, ಸ್ವಾರ್ಥ, ಅಸತ್ಯ, ಅಧಿಕಾರಲಾಲಸೆಯೇ ಮೊದಲಾದ ದುಷ್ಟಗುಣಗಳು ರಾಜನಾದವನಲ್ಲಿ ಇರಕೂಡದು. ಇಂತಹವನೇ ಸ್ವಾರಾಜ್ಯದ ಅಧಿಪತಿಯಾಗಬಲ್ಲನು. ಇವರ ಆಳ್ವಿಕೆಯಲ್ಲಿ ರಾಜ್ಯವು ಸುಖಸಮೃದ್ಧವಾಗಿಯೂ, ನಿಷ್ಕಂಟಕವಾಗಿಯೂ ನಡೆದು ಪ್ರಜೆಗಳು ಸುಖಸಮೃದ್ಧರಾಗಿ, ನ್ಯಾಯವಂತರಾಗಿ ವರ್ತಿಸುವಂತೆ ಆಗುತ್ತಾರೆ

ಸ್ವಾ'**ರಾಜ್ಯ**' ಕ್ರಮದಲ್ಲಿ ಇದಕ್ಕೆ ವಿರುದ್ಧವಾದ ಪದ್ಧತಿಯಿರುತ್ತದೆ.

ರಾಜನ ಲಕ್ಷ್ಯವೆಲ್ಲವೂ ರಾಜ್ಯವು ತನ್ನ ಕೈ ಬಿಡಕೂಡದೆಂಬುದರಲ್ಲಿಯೇ ಇರುವುದರಿಂದ, ಈ ಆಳ್ವಿಕೆಯಲ್ಲಿ ಅಸತ್ಯ, ಅನ್ಯಾಯ, ಸ್ವಾರ್ಥ, ಪಕ್ಷಪಾತ, ಅಧಿಕಾರಲಾಲಸೆಯೇ ಮೊದಲಾದ ದುರ್ಗುಣಗಳು ಸಂಭವಿಸಿ ರಾಜ್ಯದಲ್ಲಿ ಕ್ಷೋಭೆ, ವಿರುದ್ಧಕ್ರಾಂತಿ ಮೊದಲಾದುವುಗಳು ಏಳುತ್ತವೆ. ಇಂದಿನ ಸ್ವರಾಜ್ಯಗಳೆಲ್ಲವು ಬಹುಮಟ್ಟಿಗೆ ಇದೇ ರೀತಿಯಲ್ಲಿವೆ. ಆದರೆ ವೈದಿಕ ಸ್ವರಾಜ್ಯವು ಸ್ವಪರಿಶುದ್ಧತೆಯ ಕ್ರಮವಂತೆಯೇ ನಡೆಯುತ್ತಿದ್ದಿತು. ಆರಂಭದ ಮಂತ್ರದಲ್ಲಿರುವ ಸ್ವಾರಾಜ್ಯ ಶಬ್ದದೊಳಗೆ ಸ್ವಾಕಾರದ ಸ್ವರವನ್ನೇ ಒತ್ತಿ ಹೇಳುವುದು ವೈದಿಕ ಸಂಪ್ರದಾಯದ ರೀತಿಯಾಗಿದೆ.

೪. **ವೈರಾಜ್ಯ:**— “ ವಿಗತ ರಾಜಕಂ ವೈರಾಜ್ಯಂ ” ರಾಜನಿಲ್ಲದ ರಾಜ್ಯಾಡಳಿತಕ್ಕೆ ವೈರಾಜ್ಯವೆಂದು ಹೆಸರು; ಈ ಆಳ್ವಿಕೆಯಲ್ಲಿ ದೇಶದ ಎಲ್ಲಾ ಜನರೂ ಸೇರಿ, ತಮಗೆ ಬೇಕಾದ ನಿಯಮ ನಿಬಂಧನೆಗಳನ್ನು ತಾವೇ ಮಾಡಿಕೊಂಡು ಅದರಂತೆಯೇ ನಡೆದುಕೊಳ್ಳುತ್ತಾರೆ. ಇದರಲ್ಲಿ ರಾಜನಿಲ್ಲ ಮಂತ್ರಿಯಿಲ್ಲ, ಅಧಿಕಾರಿಗಳಿಲ್ಲ, ಪ್ರತಿಯೊಂದು ಊರು ಅಥವಾ ಗ್ರಾಮ ಅಥವಾ ಹೋಬಳಿ, ಯಾವುದೋ ಪರಿಮಿತ ಪ್ರದೇಶದ ಜನರು ವಾರಕ್ಕೊ, ತಿಂಗಳಿಗೋ, ವರ್ಷಕ್ಕೋ ಒಮ್ಮೆ ಸೇರಿ, ಪರಿಮಿತಕಾಲದ ವರೆಗಿನ ಕಾರ್ಯಕ್ರಮಗಳನ್ನೂ ಅವುಗಳ ಸಾಧನೋಪಾಯಗಳನ್ನೂ ನಿಶ್ಚಯಿಸಿ ಅದರಂತೆ ನಡೆದುಕೊಳ್ಳುತ್ತಾರೆ. ಹೀಗೆ ಆಗಾಗ ಜನರೇ ಸೇರಿ ತಮ್ಮ ತಮ್ಮೊಳಗೆಯೇ ವಿಚಾರ ವಿನಿಮಯ ಮಾಡಿಕೊಂಡು ಆಯಾ ಪ್ರಾಂತಗಳ ಕಾರ್ಯನಿರ್ವಹಣೆ ಮಾಡುವ ಪದ್ಧತಿಗೆ ವೈರಾಜ್ಯವೆಂದು ಹೆಸರು. ಅತ್ಯಂತ ಸಣ್ಣ ಪ್ರಾಂತಗಳಲ್ಲಿ ಮಾತ್ರ ಈ ಪದ್ಧತಿಯಂತೆ ನಡೆಯಲು ಸಾಧ್ಯವಾಗುತ್ತದೆಯೇ ಹೊರತು ವಿಸ್ತಾರವಾದ ರಾಜ್ಯ, ವಿಪುಲವಾದ ಜನಸಂಖ್ಯೆಗಳಿರುವ ದೇಶಗಳಲ್ಲಿ ಈ ರಾಜ್ಯಪದ್ಧತಿಯು ಯಶಸ್ವಿಯಾಗಿ ನಡೆಯಲಾರದು.

ಮಾನವನ ಅತ್ಯಂತ ಆರಂಭ ದೆಸೆಯಲ್ಲಿ ಪ್ರಪ್ರಥಮವಾದ ರಾಜ್ಯಭಾರಕ್ರಮವು ಈ ವೈರಾಜ್ಯ ಶಾಸನ ಪದ್ಧತಿಯೇ ಇರಬೇಕು. ಇದರ ಅವಶೇಷದ ಗುರುತುಗಳು ಇಂದೂ ಸಹ ಕೆಲವು ಪಂಗಡಗಳಲ್ಲಿ ಇವೆಯೆಂದು ಇಂದಿನ ಕೆಲವು ವಿಮರ್ಶಕರು ಹೇಳುತ್ತಾರೆ.

೫. **ಪಾರಮೇಷ್ಠ್ಯರಾಜ್ಯ:**— ಪರಮೇಷ್ಠಿ ಶಬ್ದವು ಪ್ರಜಾಪತಿ, ಬ್ರಹ್ಮ ಎಂಬ ಅರ್ಥದಲ್ಲಿ ವೇದಗಳಲ್ಲಿಯೂ, ಕೋಶಗಳಲ್ಲಿಯೂ ಉಕ್ತವಾಗಿದೆ. ಈ ಆಳ್ವಿಕೆಯಲ್ಲಿ ರಾಜನಾದವನು ಎಲ್ಲಾ ಭಾರಗಳನ್ನೂ ಪರಮಾತ್ಮನಮೇಲೆ ಹಾಕಿ ರಾಜ್ಯಭಾರ ಮಾಡುತ್ತಾನೆ. ರಾಜನು ತಾನುಕೇವಲ ದೇವರ ಪ್ರತಿನಿಧಿ ಯೆಂದು ತಿಳಿದು, ದೇವರು ಮೆಚ್ಚುವಂತೆ ತನ್ನ ಎಲ್ಲಾ ವಿಧವಾದ ಕಾರ್ಯಕಲಾಪ ಗಳನ್ನೂ, ವಿಚಾರ ಚಿಂತನೆಗಳನ್ನೂ ಮಾಡುತ್ತಾ, ರಾಜ್ಯಾಡಳಿತವನ್ನು ನಡೆಸಿಕೊಂಡು ಬರುತ್ತಾನೆ. ಪ್ರತಿಯೊಬ್ಬನ ಎಲ್ಲಾ ವಿಧವಾದ ಕಾರ್ಯ ಕಲಾಪಗಳನ್ನು ವಿಶ್ವತಶ್ಚಕ್ಷುವಾಗಿ ನೋಡುವ ಪರಮಾತ್ಮನು ಇರುವನೆಂದು ತಿಳಿದು, ತನ್ನಿಂದ ತನ್ನ ಆಶ್ರಿತರಿಂದ, ಯಾವ ವಿಧವಾದ ಅಪರಾಧವೂ ಆಗದಂತೆ ಬಹಳ ಎಚ್ಚರಿಕೆಯಿಂದ ಇವನು ನಡೆದುಕೊಳ್ಳುತ್ತಾನೆ. ದೇವಭೀರುವಾಗಿ ನಡೆದುಕೊಳ್ಳುವ ಈ ರಾಜ್ಯಾಡಳಿತ ಕ್ರಮವು ಅತ್ಯಂತ ಶ್ರೇಷ್ಠವಾಗಿ ನಡೆಯ ಬಹುದೆಂದು ಹೇಳಬಹುದು.

೬. **ರಾಜ್ಯ:**— ಸಣ್ಣ ಸಣ್ಣ ಭೂಭಾಗಗಳಿಗೆ ಪ್ರಭುತ್ವಗಳನ್ನು ಏರ್ಪಡಿಸಿ ಕೊಂಡು ಸ್ವತಂತ್ರವಾಗಿ ಆಳುವ ಕ್ರಮಕ್ಕೆ ರಾಜ್ಯವೆಂಬ ರಾಜಶಾಸನ ಪದ್ಧತಿ ಎಂದು ಹೇಳಬಹುದು.

೭. **ಮಹಾರಾಜ್ಯ:**— ಅನೇಕ ಸಣ್ಣ ಸಣ್ಣ ರಾಜರುಗಳು ತಮ್ಮ ಅನು ಕೂಲಕ್ಕಾಗಿ, ತಮ್ಮ ಇಚ್ಛೆಯಿಂದಲೇ ಕೂಡಿಕೊಂಡು, ಎಲ್ಲಾ ಸಂಸ್ಥಾನ ಗಳಿಗೂ ಅನ್ವಯವಾಗುವಂತಹ ಒಂದು ರಾಜ್ಯಘಟನೆಯನ್ನು ತಯಾರಿಸಿಕೊಂಡು ಅದರಂತೆಯೇ ಎಲ್ಲಾ ರಾಜರೂ ನಡೆದುಕೊಂಡು, ರಾಜ್ಯಭಾರವನ್ನು ಮಾಡುವ ಕ್ರಮಕ್ಕೆ ಮಹಾರಾಜ್ಯವೆಂದು ಹೆಸರು. ಇಂದು ಭಾರತದ ಕೆಲವು ಪ್ರಾಂತಗಳಲ್ಲಿ ಏರ್ಪಡಿಸಿರುವ ಸಂಸ್ಥಾನಗಳ ಒಕ್ಕೂಟದಂತೆ ಇದು ಇರುವುದೆಂದು ಹೇಳಬಹುದು. ಆದರೆ ಇದರಲ್ಲಿ ಎಲ್ಲಾ ಸಂಸ್ಥಾನಗಳ ರಾಜರೂ ರಾಜರಾಗಿಯೇ ಇರುತ್ತಾರೆ; ಮತ್ತು ಒಕ್ಕೂಟ ಸರಕಾರಕ್ಕೆ ಯಾವನೂ ರಾಜ ಅಥವಾ ಅಧಿಕಾರಿಯಾಗಿರುವುದಿಲ್ಲ. ಇವರಲ್ಲಿ ಯಾರ ಮೇಲೆಯೂ ಯಾವುದೂ, ಬಲುಮೆ ಬಲಾತ್ಕಾರಗಳಿರುವುದಿಲ್ಲ. ಇದರಿಂದ ಪ್ರಯೋಜನವು ಮಾತ್ರ ಎಲ್ಲಾ ರಾಜ, ರಾಜ್ಯಗಳಿಗೂ ಆಗುತ್ತದೆ. ಇವ

ರಿಂದ ಹೊರರಾಷ್ಟ್ರದ ಭಯವಿಲ್ಲವೆ; ಒಕ್ಕೂಟದ ಎಲ್ಲಾ ರಾಜರೂ ಪ್ರಜೆಗಳೂ ಸುಖವಾಗಿ ಬಾಳಬಹುದು.

೮, **ಆಧಿಪತ್ಯಮಯರಾಜ್ಯ:—** ಒಬ್ಬ ರಾಜನು ತನಗೆ ಬೇಕಾವಂತೆ ಅಧಿಕಾರಿಗಳನ್ನು ಇಟ್ಟುಕೊಂಡು ಪ್ರತಿಯೊಂದು ಶಾಖೆಗೂ ತನ್ನ ನೇರವಾದ ಸಂಬಂಧವನ್ನು ಇಟ್ಟುಕೊಂಡು ರಾಜ್ಯಭಾರ ಮಾಡುವ ಕ್ರಮಕ್ಕೆ ಆಧಿಪತ್ಯಮಯ ರಾಜ್ಯ ಶಾಸನ ಪದ್ಧತಿಯೆಂದು ಹೇಳಬಹುದು. ಇದರಲ್ಲಿ ಒಬ್ಬ ಅಧಿಪತಿಯು ಇರುತ್ತಾನೆ. ಅವನೇ ರಾಜನು. ಇವನು ತನ್ನಕೈಕೆಳಗೆ ಪ್ರತಿಯೊಂದು ಶಾಖೆಗೂ ಒಬ್ಬೊಬ್ಬ ಪತಿಯನ್ನು ಇಟ್ಟುಕೊಂಡು ಇವರ ನೆರವಿನಿಂದ ರಾಜ್ಯಭಾರಮಾಡುತ್ತಾನೆ.

೯. **ಸಾಮಂತಪರ್ಯಾಯೀರಾಜ್ಯ: —** ಅನೇಕ ಸಾಮಂತ ರಾಜರ ಅಧೀನದೊಳಗೆ ಪರ್ಯಾಯ ಕ್ರಮವಾಗಿ ಅಧಿಕಾರಕ್ಕೆ ಒಳಗಾಗುವ ರಾಜ್ಯಭಾರ ಪದ್ಧತಿಗೆ ಸಾಮಂತಪರ್ಯಾಯೀ ರಾಜ್ಯಭಾರ ಕ್ರಮವೆಂದು ಹೆಸರು. ಅನೇಕ ಸಣ್ಣ ಸಣ್ಣರಾಜ್ಯಾಧಿಪರು ಸೇರಿ ಒಂದು ಕೇಂದ್ರ ಸರಕಾರವನ್ನು ಏರ್ಪಡಿಸಿಕೊಳ್ಳುವರು. ಆ ಕೇಂದ್ರ ಸರಕಾರಕ್ಕೆ ಒಂದೊಂದುಸಲ ಒಬ್ಬೊಬ್ಬ ರಾಜನಂತೆ ಅಧೀಶನಾಗುವನು. ಕೇಂದ್ರಕ್ಕೆ ಬಂದ ರಾಜನು ಆ ಕಾಲದಲ್ಲಿ ತನ್ನ ಸ್ವಂತ ರಾಜ್ಯದ ಅಧಿಪತಿಯೂ, ಕೇಂದ್ರದ ಅಧೀಶನೂ ಆಗಿರುತ್ತಾನೆ. ಉಳಿದ ರಾಜರೆಲ್ಲರೂ ಆ ಕೇಂದ್ರಾಧಿಪತಿಯ ಅಧೀನರಾಗಿದ್ದು ಅವನ ಮಾಂಡಳಿಕರಾಗಿರುತ್ತಾರೆ. ಹೀಗೆ ಒಬ್ಬನಾದ ಮೇಲೆ ಒಬ್ಬನಂತೆ ಒಂದು ಪರಿಮಿತವಾದ ಕಾಲದಲ್ಲಿ ಪ್ರತಿಯೊಬ್ಬ ಮಾಂಡಳಿಕ ರಾಜನೂ ಕೇಂದ್ರದ ಅಧೀಶನಾಗಿರುತ್ತಾನೆ. ಕೇಂದ್ರದ ಸರ್ಕಾರಕ್ಕೆ ಬೇಕಾದ ರಾಜ್ಯಶಾಸನ ಕ್ರಮಗಳನ್ನು ಎಲ್ಲಾಮಾಂಡಳಿಕರೂ ಎಂದರೆ ಸಣ್ಣ ಸಣ್ಣ ರಾಜ್ಯಾಧಿಪತಿಗಳು ಸೇರಿ ಮಾಡುತ್ತಾರೆ. ಅದನ್ನು ಅನುಸರಿಸಿ ಕೇಂದ್ರದ ಅಧೀಶನು ರಾಜ್ಯಭಾರವನ್ನು ನಡೆಸಿಕೊಂಡು ಬರುತ್ತಾನೆ. ಹಾಗೆಯೇ ಪರ್ಯಾಯದಿಂದ ಕೇಂದ್ರಾಧೀಶನೂ ಆಗುವನು. ಆದ್ದರಿಂದ ಈ ರೀತಿಯ ರಾಜ್ಯಶಾಸನಕ್ರಮಕ್ಕೆ "ಸಾಮಂತಪರ್ಯಾಯೀ ರಾಜ್ಯಭಾರಕ್ರಮ" ವೆಂದು ಹೆಸರು ಇರುವುದು.

೧೦. **ಜನರಾಜ್ಯ**:— ಇದರ ಹೆಸರು ವೇದಗಳಲ್ಲಿ ಕೆಲವುಕಡೆ ಕಾಣಬರುತ್ತದೆ. ಆದರೆ ಇದರ ಸ್ವರೂಪವೆಂತಹದೆಂಬುದು ತಿಳಿದುಬಂದಿಲ್ಲ. ಇದರ ಸ್ವರೂಪವು ಜನತಾ ರಾಜ್ಯವೆಂದು ಇಂದು ಕರೆಯುವ ರೀತಿಯಲ್ಲಿದ್ದಿರಬೇಕು. ಜನರು ಆರಿಸಿ ಕಳುಹಿಸಿದ ಪ್ರತಿನಿಧಿಗಳಿಂದ ತಯಾರಿಸಲ್ಪಟ್ಟ ರಾಜ್ಯಾಂಗ ಘಟನೆಯಂತೆ ನಡೆಸುವ ರಾಜ್ಯಭಾರ ಪದ್ಧತಿಗೆ ಜನರಾಜ್ಯ ಅಥವಾ ಜಾನರಾಜ್ಯವೆಂದು ಹೆಸರು ಇರಬೇಕು. ಹೀಗೆ ಜನತಾಪ್ರತಿನಿಧಿಗಳು ತಯಾರಿಸಿಕೊಟ್ಟ ರಾಜ್ಯಶಾಸನಕ್ರಮದಂತೆ ರಾಜ್ಯಭಾರವಾಡುವ ರಾಜನಿದ್ದನೋ ಅಥವಾ ಇಂದಿನಂತೆ ಜನಪ್ರತಿನಿಧಿಯಾದ ರಾಷ್ಟ್ರಾಧ್ಯಕ್ಷನಿರುತ್ತಿದ್ದನೋ ತಿಳಿಯದು.

೧೧ **ಗಣರಾಜ್ಯ**:— ಗಣ ಎಂದರೆ ಗುಂಪು. ಒಂದು ಗುಂಪಿನವರು ನಡೆಸುವ ರಾಜ್ಯಭಾರಕ್ರಮಕ್ಕೆ ಗಣರಾಜ್ಯಗಳೆಂದು ಹೆಸರು. ರಾಜ್ಯಾಡಳಿತಕ್ರಮವನ್ನು ನಿರ್ಣಯಿಸುವುದಕ್ಕೆ ಪ್ರತಿನಿಧಿಗಳನ್ನು ಆರಿಸುವ ಪೂರ್ವದಲ್ಲಿ ಅನೇಕ ಪಂಗಡದ ಜನರು ಸ್ಪರ್ಧಾಳುಗಳಾಗಿ ನಿಲ್ಲುತ್ತಾರೆ. ಆಯ್ಕೆಯಾದ ಮೇಲೆ ಯಾವಗುಂಪಿನ ಪ್ರತಿನಿಧಿಗಳು ಅಧಿಕಸಂಖ್ಯೆಯಲ್ಲಿ ಆರಿಸಿಬರುತ್ತಾರೆಯೋ ಆ ಗುಂಪಿನವರು ರಾಜ್ಯಾಡಳಿತವನ್ನು ನೆರವೇರಿಸುತ್ತಾರೆ. ಇದಕ್ಕೆ ಪಕ್ಷ ಸರಕಾರವೆಂದು ಹೇಳಬಹುದು. ಇಂದು ಈ ರೀತಿಯ ರಾಜ್ಯಭಾರಕ್ರಮವು ಭಾರತದಲ್ಲಿಯೂ, ಇಂಗ್ಲೆಂಡಿನಲ್ಲಿಯೂ ಮತ್ತು ಅನೇಕ ದೇಶಗಳಲ್ಲಿಯೂ ವ್ಯವಹಾರದಲ್ಲಿದೆ. ಬಹುಜನರ ಬಹುಸುಖಗಳನ್ನು ಒದಗಿಸುವುದೇ ಈ ರಾಜ್ಯ ಶಾಸನಕ್ರಮದ ಗುರಿಯಾಗಿರುತ್ತದೆ. ಆದರೆ ಈ ರಾಜ್ಯಶಾಸನಕ್ರಮವು ಯಾವುದೊಂದು ಪಕ್ಷವು ಬಂದರೂ ಬಹು ಕಾಲದವರೆಗೆ ಸ್ಥಾಯಿಯಾಗಿರಲು ಸಾಧ್ಯವಾಗುವುದಿಲ್ಲ. ಪ್ರಭುತ್ವವು ಭಿನ್ನತತ್ವಗಳನ್ನು ಅನುಸರಿಸುವ ಅನೇಕ ಗುಂಪುಗಳಲ್ಲಿ ಕೈಯಿಂದ ಕೈಗೆ ಬದಲಾಯಿಸುತ್ತಾ ಹೋಗುತ್ತದೆ. ಇದರಲ್ಲಿಯೂಸಹ ಬಹುಜನರು ಸಿದ್ಧಗೊಳಿಸಿಕೊಟ್ಟ ರಾಜ್ಯಾಂಗ ಶಾಸನದಂತೆ ರಾಜ್ಯ ನಡೆಸುವ ರಾಜನಿದ್ದನೋ ಅಥವಾ ಬಹುಮತದ ಪಂಗಡದ ನಾಯಕನೇ ರಾಜ್ಯಭಾರ ನಡೆಸುತ್ತಿದ್ದನೋ ತಿಳಿಯದು.

ಹೀಗೆ ಹತ್ತು ಹನ್ನೊಂದು ವಿಧವಾದ ರಾಜ್ಯ ಶಾಸನ ಪದ್ಧತಿಗಳು ವೇದಗಳಲ್ಲಿ ಸ್ಪಷ್ಟ, ಅಸ್ಪಷ್ಟವಾಗಿ ವರ್ಣಿತವಾಗಿವೆ. ಅದರಂತೆಯೇ ರಾಜ್ಯದ ಅಧಿಕಾರಿಗಳೂ, ಸಲಹೆಗಾರರೂ ಮತ್ತು ರಾಜ್ಯಭಾರದ ಉದ್ದೇಶಗಳೂ ಹೇಗಿದ್ದವು, ಇರಬೇಕು ಎಂಬುದೂ ಸಹ ವೇದಗಳಲ್ಲಿ ವರ್ಣಿತವಾಗಿದೆ. ಅತ್ರಿ ವಂಶದ ರಾತಿಹವ್ಯನೆಂಬ ಋಷಿಯು ಕಂಡುಹಿಡಿದ ಒಂದು ಮಂತ್ರದಲ್ಲಿ ಇದರಬಗ್ಗೆ ಸ್ಪಷ್ಟವಾದ ಉಲ್ಲೇಖವಿದೆ.

" ಆಯತ್ ವಾಮೀಯಚಕ್ಷನಾ ಮಿತ್ರ ವಯಂ ಚ ಸೂರಯಃ
ವ್ಯಚಿಷ್ಟೇ ಬಹುಪಾಯ್ಯೇ ಯತೇಮಹಿ ಸ್ವಾರಾಜ್ಯೇ " ||

(ಋ. ಸಂ. ೫-೬೬-೬.)

"ವ್ಯಾಪಕ ದೃಷ್ಟಿಯವರೂ, ಎಲ್ಲರನ್ನೂ ಮಿತ್ರರಂತೆ ಕಾಣುವವರೂ ಆದ ನಾವು ಪ್ರಪಂಚದ ಎಲ್ಲಾ ಜನರಿಗೂ ಎಲ್ಲಾಬಗೆಯ ಸುಖಗಳನ್ನು ಒದಗಿಸಿ ಕೊಡುವ ಸ್ವರಾಜ್ಯದಲ್ಲಿ ಪ್ರಯತ್ನಿಸುವ " ಎಂದು ಮಂತ್ರದಲ್ಲಿ ಹೇಳಿದೆ. ಈ ಮಂತ್ರದ ಪೂರ್ವಾರ್ಧದಲ್ಲಿ ರಾಜ್ಯದ ಅಧಿಕಾರಿಗಳೂ, ಸಲಹೆಗಾರರೂ, ನಾಯಕರೂ ಹೇಗಿರಬೇಕೆಂಬುದನ್ನೂ, ಉತ್ತರಾರ್ಧದಲ್ಲಿ ಸ್ವಾರಾಜ್ಯದ ಉದ್ದೇಶವೇನೆಂಬುದನ್ನೂ ವರ್ಣಿಸಲಾಗಿದೆ.

"ಈಯಚಕ್ಷನಾ ಮಿತ್ರ ಸೂರಯ ವಯಂ ಆಯತೇಮಹಿ" ಇದರಲ್ಲಿನ ಪ್ರತಿಯೊಂದು ಪದವೂ ಅತ್ಯಂತ ಮಹತ್ವಪೂರ್ಣವಾದ ಅರ್ಥಗಳನ್ನು ಕೊಡುತ್ತದೆ. 'ಈಯಚಕ್ಷನಾ' ಎಂದರೆ, ತೀಕ್ಷ್ಣವಾದ, ವಿಶಾಲವಾದ ದೃಷ್ಟಿಯುಳ್ಳವರು ಎಂದು ಸಾಮಾನ್ಯವಾದ ಅರ್ಥವಾಗುತ್ತೆ. ಯಾವ ವಿಧವಾದ ಸಂಕುಚಿತದೃಷ್ಟಿಯಾಗಲೀ, ಸ್ವಾರ್ಥಬುದ್ಧಿಯಾಗಲೀ, ಸ್ವಪಕ್ಷ, ಸ್ವಜಾತಿ, ಬಂಧು ಮೊದಲಾದ ಆತ್ಮೀಯ ದುರ್ಭಾವನೆಗಳಾಗಲೀ ಯಾವುದೂ ಇಲ್ಲದವನಾಗಿರಬೇಕೆಂದು "ಈಯಚಾಕ್ಷನಾ" ಎಂಬ ಪದವು ಹೇಳುತ್ತದೆ.

"ಮಿತ್ರ" ಎಂಬ ಎರಡನೆಯ ಪದವು, ರಾಜ್ಯಾಧಿಕಾರಿಯೇ ಮೊದಲಾದವರು ಮಿತ್ರರಾಗಿರಬೇಕೆಂದು ಹೇಳುತ್ತದೆ. ಇವರು ರಾಜನಿಗೆ ಮಾತ್ರ ಮಿತ್ರರಾಗಿರಬೇಕೆಂದಲ್ಲ. ಎಲ್ಲಾ ಪ್ರಜೆಗಳನ್ನೂ ಮಿತ್ರರಂತೆ

ನೋಡುವ ಸ್ವಭಾವದವರಾಗಿರಬೇಕು. ಯಾವ ವಿಧವಾದ ಕೋಪತಾಪ ಗಳಿಗೆ ಅವಕಾಶವಿಲ್ಲದಂತೆ ಎಲ್ಲರ ಅಭ್ಯುದಯಕ್ಕಾಗಿ ಪ್ರಯತ್ನಿಸುವವರಾಗಿರ ಬೇಕು. ಯಾರನ್ನೂ ಯಾವ ಸಮಯದಲ್ಲಿಯೂ ಕಲುಷಿತ ಬುದ್ಧಿ, ದ್ವೇಷ ಭಾವನೆಗಳಿಂದ ನೋಡುವವರಾಗಿರಕೂಡದೆಂದು "ಮಿತ್ರ" ಎಂಬ ಪದವು ತಿಳಿಸುತ್ತದೆ.

"ಸೂರಯಃ" ಎಂದರೆ ಅಧಿಕಾರಿಗಳು, ನಾಯಕರು, ಸಲಹೆ ಗಾರರು, ಮಾರ್ಗದರ್ಶಿಗಳು "ಸೂರಯು" ರಾಗಿರಬೇಕು.; ಜ್ಞಾನಿಗಳಾಗಿರ ಬೇಕು; ಕೇವಲ ವ್ಯವಹಾರ ಜ್ಞಾನವಿದ್ದರೆ ಮಾತ್ರ ಸಾಲದು. "ಸೂರಯು" ರಾಗಿರಬೇಕು; ಯುಕ್ತಾಯುಕ್ತ ವಿವೇಕ ಜ್ಞಾನವಿರಬೇಕು; ಕಾರ್ಯ ಕಾರಣ ಗಳ, ಆಗುಹೋಗುಗಳ, ಸತ್ಯಾಸತ್ಯತೆಗಳ ಸಮ್ಯಗ್ಜ್ಞಾನವಿರಬೇಕು. ಇಂತಹ ಗುಣತ್ರಯ ಭೂಷಿತರಾದವರು ಮಾತ್ರ ರಾಷ್ಟ್ರನಾಯಕರಾಗಬೇಕು. ರಾಜ್ಯದ ಅಧಿಕಾರಿಗಳೂ ಪ್ರಭುತ್ವಕ್ಕೆ ಮಾರ್ಗದರ್ಶಿಗಳೂ, ಸಲಹೆಗಾರರೂ ಆಗಿರಬೇಕು;

ಇದರಂತೆಯೇ ಮಂತ್ರದ ಉತ್ತರಾರ್ಧದಲ್ಲಿ ಸ್ವರಾಜ್ಯದ ಉದ್ದೇಶ, ಧ್ಯೇಯಗಳೇನೆಂಬುದನ್ನು ಇಲ್ಲಿ ಹೇಳಿದೆ.

"ವ್ಯಚಿಷ್ಠೇ ಬಹುಪಾಯ್ಯೇ ಸ್ವಾರಾಜ್ಯೇ ಆಯತೇಮಹೀ" ಸ್ವರಾಜ್ಯವು ವ್ಯಚಿಷ್ಟ ಬಹುಪಾಯ್ಯವಾಗಿರಬೇಕು. ವ್ಯಚಿಷ್ಟವಾಗಿರಬೇಕೆಂದರೆ ಎಲ್ಲ ಜನರ ಎಲ್ಲಾ ವಿಧವಾದ ಸುಖಗಳನ್ನೂ ಒದಗಿಸುವಹಾಗಿರಬೇಕು. ಹೊಟ್ಟೆಯ ತುಂಬ ಅನ್ನ, ಮೈತುಂಬ ಬಟ್ಟೆ, ಸುಖವಾಗಿ ವಾಸಿಸುವುದಕ್ಕೆ ಮನೆಗಳು, ಪ್ರತಿಯೊಬ್ಬ ಪ್ರಜೆಗೂ ದೊರೆಯುವಂತಿರಬೇಕು. ಯಾವ ವಿಧವಾದ ತಾಪತ್ರಯಗಳೂ ಇರಬಾರದು. ಯಾವ ವಸ್ತುವನ್ನು ಎಲ್ಲಿ ಬಿಟ್ಟರೂ, ಅದು ಅಲ್ಲೇ ಬಿದ್ದಿರಬೇಕು. ಅಥವಾ ಅವನ ಕೈಗೇ ಬರಬೇಕು; ಹೀಗಿದ್ದ ಸ್ವರಾಜ್ಯವು ವ್ಯಚಿಷ್ಟವಾಗುವುದು.

ಸ್ವರಾಜ್ಯವು ಕೇವಲ ವ್ಯಚಿಷ್ಟವಾಗಿದ್ದರೆ ಸಾಲದು. ಅದು ಬಹು ಪಾಯ್ಯವಾಗಿರಬೇಕು. ವಿದ್ವಾಂಸರಾದ ಬಹುಜನರು ಮೆಚ್ಚುವಂತಿರಬೇಕು. ಆಂದರೆ ಅಂತಹ ಸ್ವರಾಜ್ಯವು ಪರಿಪೂರ್ಣ ಸ್ವರಾಜ್ಯವೆನಿಸುತ್ತದೆ. ಇಂದಿನ ಅಧಿಕಾರಿಗಳಿಂದ ಕೂಡಿದ ಯಾವ ದೇಶದ ಸರಕಾರವೂ, ಅಥವಾ ರಾಜ್ಯ

ಭಾರಕ್ರಮವು, "ಈ ರೀತಿಯಿದೆ" ಎಂದು ಹೇಳುವ ಧೈರ್ಯವು ಯಾವ ದೇಶಕ್ಕಿದೆ?

ವೇದಗಳಲ್ಲಿ ಇಷ್ಟು ವಿಧವಾದ ರಾಜ್ಯಭಾರಕ್ರಮಗಳೂ ಆ ರಾಜ್ಯಕ್ಕೆ ಬೇಕಾದ ವಿಷಯುಗಳೂ, ಅಧಿಕಾರಿಗಳೂ, ರಾಜ್ಯದ ಉಪ್ದೇಶ ಮೊದಲಾ ದುವುಗಳೂ, ವರ್ಣಿತವಾಗಿರುವುದರಿಂದ ಅಂದಿನ ರಾಜ್ಯಶಾಸನ ಕ್ರಮಗಳೂ ಹೇಗಿದ್ದಿರಬಹುದೆಂಬ ಕಲ್ಪನೆಯು ಸ್ವಲ್ಪವಾದರೂ ನಮಗೆ ಬರದೇ ಇರದು. ಹೀಗಿರುವಾಗ ವೇದಕಾಲದವರು ಕೇವಲ ವನ್ಯರಾಗಿದ್ದರು. ರಾಜ್ಯಭಾರ ಕ್ರಮವೇ ಅಂದು ಸರಿಯಾಗಿರಲಿಲ್ಲವೆಂದು ಇತಿಹಾಸ ಬೋಧಕರೂ, ಭಾರತದ ರಾಜಕಾರಣಿಗಳೂ, ವಿದ್ವಾಂಸರೆನಿಸಿದವರೂ, ಈಗಲೂ ಪ್ರಚಾರ ವನ್ನು ಮಾಡುವುದಕ್ಕೆ ಏನೆಂದು ಕರೆಯಬೇಕೊ ತಿಳಿಯದಾಗಿದೆ.

## ವೇದಕಾಲದ ಗುರುತುಗಳು.

ವೇದಗಳಲ್ಲಿ ಶ್ರೌತ, ಸ್ಮಾರ್ತಕರ್ಮಗಳಿಗೂ ಆಧ್ಯಾತ್ಮಿಕ ವಿಷಯು ಗಳಿಗೂ, ದೇವತಾ ಸ್ತೋತ್ರಗಳಿಗೂ ಸಂಬಂಧಪಟ್ಟ ಮಂತ್ರಗಳೇ ಇರು ವುವೆಂದು ಸಾಮಾನ್ಯ ಗ್ರಹಿಕೆಯಾಗಿದೆ. ಆದರೆ ಇವುಗಳಿಗೆ ಸಂಬಂಧಪಟ್ಟ ಮಂತ್ರಗಳು ಹೆಚ್ಚಾಗಿರುವುದು ನಿಜವಿದ್ದರೂ ಮಾನವನ ಜೀವನಕ್ಕೆ ಸಂಬಂ ಧಿಸಿದ ಇತರ ವಿಷಯಗಳೂ ವೇದಗಳಲ್ಲಿ ಯಥೇಷ್ಟವಾಗಿವೆ. ಧರ್ಮ, ಸಮಾಜ, ಇತಿಹಾಸ, ಜ್ಯೋತಿಷ್ಯ, ವೈದ್ಯ, ಸಂಸ್ಕೃತಿ, ನಾಗರೀಕತೆಗಳನ್ನು ಸೂಚಿಸುವ ಸಾವಿರಾರು ಮಂತ್ರಗಳು ವೇದಗಳಲ್ಲಿ ದೊರೆಯುತ್ತವೆ. ಅವು ಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸುವುದು ಆವಶ್ಯಕವೆನಿಸುತ್ತದೆ.

" ಆರ್ಯರು ಸೋಮ ಪಾನ ಮಾಡುತ್ತಿದ್ದರು. ಸೋಮಲತೆಯು ಪರ್ವತಗಳಲ್ಲಿಯೂ, ಕುರುಕ್ಷೇತ್ರದ ಶರ್ಯಣಾವತದ ತಟಾಕ ಸಮೀಪದಲ್ಲಿಯೂ ದೊರೆಯುತ್ತಿತ್ತು. ಸೋಮಲತೆಯನ್ನು ಗಂಧರ್ವರು ರಕ್ಷಿಸುತ್ತಾರೆ. ಸೋಮವು ಒಂದು ಬಳ್ಳಿ. ವೈದಿಕ ಭಾಷೆಯಲ್ಲಿ ಸೋಮವನ್ನು ಬ್ರಹ್ಮರಸವೆಂದು ಕರೆದಿದ್ದಾರೆ. ಈ ಸೋಮಪಾನದಿಂದ ಆರ್ಯರು ಅಮರತ್ವವನ್ನು ಮುಕ್ತಿ ಯನ್ನೂ ಪಡೆಯುತ್ತಿದ್ದರು. "

"ಆರ್ಯರು ಸ್ವರ್ಗ, ನರಕ, ಪಾಪ, ಪುಣ್ಯಗಳ ಬಗ್ಗೆ ಪೂರ್ಣ ವಿಶ್ವಾಸವನ್ನಿಟ್ಟಿದ್ದರು. ಅಶ್ವಮೇಧ ಯಾಗದಿಂದ ಸ್ವರ್ಗಪ್ರಾಪ್ತಿಯಾಗುತ್ತದೆ. ಅಶ್ವದಾನದಿಂದ ಸೂರ್ಯಲೋಕವನ್ನು ಹೊಂದುತ್ತಾನೆ. ಸುವರ್ಣ ದಾನ ಮಾಡುವುದರಿಂದ ಅಮರನಾಗುತ್ತಾನೆ. ವಸ್ತ್ರದಾನ ಮಾಡಿದರೆ ಆಯುಸ್ಸು ವೃದ್ಧಿಯಾಗುವುದು. ತ್ರ್ಯಂಬಕ ಮಂತ್ರದ ಪಠನ, ಹವನಗಳಿಂದ ದೀರ್ಘಾಯುವಾಗುವನು. ಪ್ರತ್ಯೇಕವಾದ ಪಿತೃಲೋಕಗಳೂ ಇವೆ. ಸ್ಮಶಾನಗಳಲ್ಲಿ ಭಯಂಕರವಾದ ಪಿಶಾಚಗಳಿರುತ್ತವೆ. ಯಮಪುರದ ಬಾಗಿಲಲ್ಲಿ ಎರಡು ಕ್ರೂರವಾದ ನಾಯಿಗಳು ಕಾವಲು ಮಾಡುತ್ತವೆ."

ಇವರಿಗೆ ದಾನ ಧರ್ಮಗಳಲ್ಲಿ ಬಹಳ ಆಸಕ್ತಿ ಇದ್ದಿತು. "ಚೇದಿ ವಂಶದ ಒಬ್ಬ ರಾಜನು ಅಸಂಖ್ಯಾತವಾಗಿ ಹಸುಗಳನ್ನೂ, ಒಂಟೆಗಳನ್ನೂ ದಾನ ಮಾಡಿದನು. ರಾಜರ್ಷಿಯಾದ ಅರುಣನು ಅತ್ರಿ ಋಷಿಗೆ ಹತ್ತು ಸಾವಿರ ಸುವರ್ಣಮುದ್ರೆಗಳನ್ನು ದಾನ ಮಾಡಿದ್ದಾನೆ. ಯದುವಂಶದ ಆಸಂಗರಾಜನು ಹತ್ತು ಸಾವಿರ ಹಸುಗಳನ್ನು ದಾನಮಾಡಿದನು. ವಿಭಿಂದ ಎಂಬ ರಾಜನು ನಲವತ್ತು ಸಾವಿರ ಸಿಷ್ಕಗಳನ್ನು ದಾನಮಾಡಿದನು. ಇನ್ನೊಮ್ಮೆ ಎಂಟುಸಾವಿರ ನಾಣ್ಯಗಳನ್ನು ದಾನಮಾಡಿದ್ದಾನೆ. ಚೇದಿ ವಂಶದ ಕಶುರಾಜನು ಒಂದುನೂರು ಒಂಟೆಗಳನ್ನೂ, ಹತ್ತು ಸಾವಿರ ಹಸುಗಳನ್ನೂ ದಾನಮಾಡಿದ್ದಾನೆ. ಮತ್ತೊಬ್ಬ ರಾಜನು ಇಪ್ಪತ್ತು ಸಾವಿರ ಕುದುರೆ ಎರಡುಸಾವಿರ ಒಂಟೆ, ಒಂದುಸಾವಿರ ನೀಲಬಣ್ಣದ ಕುದುರೆ, ಹತ್ತು ಸಾವಿರ ಹಸುಗಳನ್ನು ದಾನಮಾಡಿದ್ದಾನೆ."

ವೇದಗಳಲ್ಲಿ ಜ್ಯೋತಿಷದ ವಿಷಯವೂ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಸೂರ್ಯನ ರಥವು ೫೦೫೯ ಯೋಜನವನ್ನು ಸುತ್ತುತ್ತದೆ. ಸೂರ್ಯನ ರಥಕ್ಕೆ ಏಳು ಕುದುರೆಗಳಿವೆ. ಅಥವಾ **ಸಪ್ತ** ವೆಂಬ ಕುದುರೆಯು ಸೂರ್ಯನನ್ನು ಒಯ್ಯುತ್ತದೆ. ಸೂರ್ಯನ ರಥವು ಒಂದು ದಂಡ (ಒಂದು ಕಾಲ ಪರಿಮಿತಿ) ದಲ್ಲಿ ೭೯ ಯೋಜನವನ್ನು ಸುತ್ತುತ್ತದೆ. (೬೭೨ ಮೈಲು) ಉಷಾದೇವಿಯು ಸೂರ್ಯನಿಗಿಂತ ಅರ್ಧ ದಂಡ ಮುಂಚಿತವಾಗಿ ಹೊರಡುತ್ತಾಳೆ. ಉಷಾದೇವಿಯು ಒಬ್ಬ ಕಮನೀಯ ಕಾಮಿನಿಯು. ಒಂದು

ವರ್ಷದಲ್ಲಿ ಎರಡು ಅಯನಗಳು, ಐದು ಋತುಗಳು, ಹನ್ನೆರಡು ಮಾಸಗಳು, ೩೬೦ ದಿವಾ ರಾತ್ರಿಗಳು ಕಳೆಯುತ್ತವೆ. ಹೇಮಂತ ಶಿಶಿರ ಋತುಗಳು ಎರಡೂ ಸೇರಿ ಒಂದೇ ಋತುವು. ದಕ್ಷಿಣಾಯನವು ಕಳೆದ ಮೇಲೆ ಉತ್ತರಾಯನದಿಂದ (ಮಕರ ಸಂಕ್ರಾಂತಿಯಿಂದ) ವರ್ಷಾರಂಭವಾಗುವುದು ಅಧಿಕ ಮಾಸವು ಬರುತ್ತದೆ. (ಚಾಂದ್ರಮಾನದ ಎಣಿಕೆಯೂ ಇದೆ) ಸೂರ್ಯ ಗ್ರಹಣವಾಗುತ್ತದೆ. ಭೂಲೋಕ ದ್ಯುಲೋಕಗಳ ಸೃಷ್ಟಿಗಳು ಒಂದೇ ಸಮಯದಲ್ಲಾಯಿತು. ಸೃಷ್ಟಿಯು ಆರಂಭದಲ್ಲಿ ಜಲಮಯವಾಗಿದ್ದಿತು. ಸೃಷ್ಟಿಕರ್ತನು ಅಜ್ಞೇಯನು, ಪ್ರಳಯವಾದಮೇಲೆ ಸೃಷ್ಟಿಯಾಗುವುದು. ಚಂದ್ರನು ಸೂರ್ಯನಿಂದ ಪ್ರಕಾಶವನ್ನು ಪಡೆದಿರುತ್ತಾನೆ.

ಇವರು ಪಕ್ಷಿಗಳ ಧ್ವನಿಗಳನ್ನು ಕೇಳುವುದರಿಂದ ಉಂಟಾಗುವ ಅಪಶಕುನಗಳ ನಿವಾರಣೆಗೆ ಸೂಕ್ತಪಠನ ಮಾಡುತ್ತಿದ್ದರು. ವಿಷಜಂತುಗಳು ಕಡಿದರೆ ವಿಷವೇರದಂತೆ ಪ್ರಾರ್ಥನಾ ಮಂತ್ರಗಳಿವೆ. ಪಿಂಗಲವರ್ಣದ ಕುದುರೆಗಳೂ, ನೀಲವರ್ಣವ ಹಂಸಗಳೂ ಇದ್ದುವು. ವಾಯುವಿನಲ್ಲಿ ಒಂದು ದೃಷ್ಟಿಯಿಂದ ನಲವತ್ತೊಂಭತ್ತು (೪೯) ಪ್ರಭೇದಗಳೂ, ಇನ್ನೊಂದು ದೃಷ್ಟಿಯಿಂದ ಅರವತ್ತುಮೂರು (೬೩) ಪ್ರಭೇದಗಳೂ ಇವೆ.

ಆರ್ಯರು ರಥದಮೇಲೆ ಸಂಚರಿಸುತ್ತಿದ್ದರು. ಒಂದುಸಲ ಐದು ನೂರು (೫೦೦) ರಥಗಳು ಪ್ರಯಾಣ ಮಾಡಿವೆ. ಅಶ್ವಿನೀ ಕುಮಾರರು ಜಿದ್ದಿನಮೇಲೆ ಕುದುರೆಸವಾರಿ ಮಾಡಿ ಸೂರ್ಯನ ಹತ್ತಿರ ಹೋಗಿದ್ದರು. ಸಾಮಾನ್ಯಕುದುರೆಯು ಒಂದು ದಿವಸಕ್ಕೆ ೪೦ ಕ್ರೋಶ (೮೦ ಮೈಲಿ) ಪ್ರಯಾಣ ಮಾಡುತ್ತಿತ್ತು. ಉಚ್ಚೈಶ್ರವವೆಂಬ ಕುದುರೆಯು ನೀರಿನಮೇಲೂ ಸಂಚರಿಸುತ್ತಿತ್ತು. ರಥಗಳನ್ನು ಮರ, ಲೋಹ, ಭಂಗಾರಗಳಿಂದ ಮಾಡುತ್ತಿದ್ದರು. ಭೃಗುವಂಶದವರು ರಥಗಳನ್ನು ಮಾಡುವುದರಲ್ಲಿ ನಿಪುಣರಾಗಿದ್ದರು. ಕುದುರೆಗಳನ್ನು ಭಂಗಾರದಿಂದ ಅಲಂಕರಿಸುತ್ತಿದ್ದರು, ರಥ, ಕುದುರೆ, ಒಂಟೆ, ಕೆಲವುವೇಳೆ ಹೇಸರಕತ್ತೆಯ ಮೇಲೆ ಪ್ರಯಾಣವಾಡುತ್ತಿದ್ದರು. ಧನಸ್ಸು, ಬಾಣ, ಕತ್ತಿ, ಚಾಕು, ಭಲ್ಲೆಗಳನ್ನು ಉಪಯೋಗಿಸುತ್ತಿದ್ದರು. ಯೋಧರು ಲೋಹ ಮತ್ತು ಭಂಗಾರದ ಟೋಪಿಗಳನ್ನು ಧರಿಸುತ್ತಿದ್ದರು.

ಕವಚಧಾರಣ ಮಾಡುತ್ತಿದ್ದರು. ವಿಷಸಿಕ್ತ ಬಾಣಪ್ರಯೋಗ ಮಾಡುತ್ತಿದ್ದರು. ಸಮಯದಲ್ಲಿ ಗೋವು, ಕುದುರೆ, ಭಂಗಾರ, ಧಾನ್ಯ ಮೊದಲಾದುವುಗಳನ್ನು ರಕ್ಷಿಸಿಕೊಳ್ಳಲು ಋಷಿಗಳೂ ಯುದ್ಧಮಾಡುತ್ತಿದ್ದರು.

ಅಂದಿನ ಜನರು ಭವ್ಯಮಂದಿರಗಳಲ್ಲಿಯೂ, ಗುಡಿಸಿಲುಗಳಲ್ಲಿಯೂ ವಾಸಿಸುತ್ತಿದ್ದರು. ಮೂರು ಉಪ್ಪರಿಗೆಯ ಮನೆಗಳಿದ್ದವು. ಭದ್ರವಾದ ತಳಹದಿಯಮೇಲೆ ಕಟ್ಟಿದ ಜೋಡುಮನೆಗಳಿದ್ದವು. ನೂರು ಬಾಗಿಲು ಗಳಿರುವ ಮನೆಗಳಿದ್ದವು. ಲೋಹ ಭಂಗಾರಗಳಿಂದ ನಿರ್ಮಿತವಾದ ಮನೆಗಳಿದ್ದವು. ಒಂದುನೂರು ಲೋಹ ನಿರ್ಮಿತವಾದ ನಗರಗಳಿದ್ದವು. ಕಾರಾಗೃಹಗಳಲ್ಲಿ ಶತ್ರುಗಳನ್ನಿಡುತ್ತಿದ್ದರು. ಬಾಗಿಲಿನ ಹೊರಗೆ ಕಾವಲು ಗಾರರಿರುತ್ತಿದ್ದರು. ಭೃತ್ಯರಿಗೆ ವೇತನವನ್ನು ಕೊಡುತ್ತಿದ್ದರು.

ಉತ್ತಮವಾದ ಬಟ್ಟೆಗಳನ್ನು ಧರಿಸುತ್ತಿದ್ದರು. ನೇಕಾರರಿದ್ದರು. ಹೆಂಗಸರೂ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಭಂಗಾರದ ಆಭರಣ ಗಳನ್ನು ಧರಿಸುತ್ತಿದ್ದರು. ಹೆಂಗಸರು ಕತ್ತಿನಲ್ಲಿ ಭಂಗಾರದ ಹಾರಗಳನ್ನೂ ಕೈಗೆ ಬಳೆಗಳನ್ನೂ ಹಾಕಿಕೊಳ್ಳುತ್ತಿದ್ದರು; ಸ್ತ್ರೀಯರು ಪುರುಷರ ಜೊತೆಗೆ ಯಜ್ಞಾದಿ ಕರ್ಮಗಳಲ್ಲಿ ಭಾಗವಹಿಸುತ್ತಿದ್ದರು. ಕಸೂತಿಯ ಕೆಲಸವನ್ನು ಹೆಂಗಸರು ಮಾಡುತ್ತಿದ್ದರು, ಮನೆಯೊಳಗೆ ಸ್ತ್ರೀಯರ ಯಾಜಮಾನ್ಯವಿದ್ದಿತು. ಸ್ತ್ರೀಯರು ವಿದ್ಯಾವತಿಯರಾಗಿದ್ದರು. ವೇದ ಮಂತ್ರ ದ್ರಷ್ಟಾರರೂ ಸ್ತ್ರೀಯರಿದ್ದರು.

ಔರಸ ಪುತ್ರರನ್ನೂ, ದೌಹಿತ್ರರರನ್ನೂ ಉತ್ತರಾಧಿಕಾರಿಗಳನ್ನಾಗಿ ಮಾಡುತ್ತಿದ್ದರು. ವೀರಸಂತತಿಯನ್ನು ಬಯಸುತ್ತಿದ್ದರು. ಸಾಲಂಕೃತ ಕನ್ಯಾದಾನ ಮಾಡುತ್ತಿದ್ದರು. ಪರ್ದಾ ಪದ್ಧತಿಯೂ ಕ್ವಚಿತ್ತಾಗಿದ್ದಿತು.

ವ್ಯವಸಾಯವನ್ನೂ ಮಾಡುತ್ತಿದ್ದರು. ನೇಗಿಲಿನಿಂದ ಉಳುತ್ತಿದ್ದರು. ಚರ್ಮದ ಬಾರುಕೋಲು, ಹಗ್ಗ ಮೊದಲಾದುವುಗಳನ್ನು ಉಪಯೋಗಿಸುತ್ತಿದ್ದರು. ವ್ಯವಸಾಯಕ್ಕೆ ನೇಗಿಲು, ನೊಗ, ಗುದ್ದಲಿ, ಪಿಕಾಸು, ಹಗ್ಗ, ಬಾರುಕೋಲು ಮೊದಲಾದುವುಗಳನ್ನು ಉಪಯೋಗಿಸುತ್ತಿದ್ದರು. ಧಾನ್ಯಗಳನ್ನು ಕೊಠಡಿಗಳಲ್ಲಿಯೂ, ನೆಲಮಾಳಿಗೆ, ಗುಹೆಯಲ್ಲಿಯೂ ಇಟ್ಟು

ರಕ್ಷಿಸುತ್ತಿದ್ದರು; ಕಂಬಳಿಗಳನ್ನು ಉಪಯೋಗಿಸುತ್ತಿದ್ದರು. ಜವೆಗೋಧಿಯನ್ನು ಉಪಯೋಗಿಸುತ್ತಿದ್ದರು. ಹುರಿಹಿಟ್ಟು, ತಂಬಿಟ್ಟುಗಳನ್ನು ಉಪಯೋಗಿಸುತ್ತಿದ್ದರು. ಹುರಿಗಾಳಿನ ಅಂಗಡಿಗಳಿದ್ದವು.

ವೇದಗಳ ಕಾಲದಲ್ಲಿ ಜನರು ಸಮುದ್ರಯಾನ ಮಾಡುತ್ತಿದ್ದರು. ತುಗ್ರಪುತ್ರ ಭೃಜ್ಯು ಸಮುದ್ರಯಾನ ಮಾಡಿದ್ದನು. ಊರಿಂದ ಊರಿಗೆ ಲೋಹ, ಭಂಗಾರಗಳನ್ನು ಸಾಗಿಸುತ್ತಿದ್ದರು. ದನ, ಒಂಟೆ, ಕುದುರೆ, ಕತ್ತೆ, ನಾಯಿಗಳನ್ನು ಸಾಕುತ್ತಿದ್ದರು. ಸಿಂಹಗಳನ್ನು ಕೊಲ್ಲುತ್ತಿದ್ದರು. ಹುಲಿಯನ್ನು ಪಂಜರದಲ್ಲಿಡುತ್ತಿದ್ದರು. ನಾಪಿತನು ಕ್ಷೌರಕರ್ಮ ಮಾಡುತ್ತಿದ್ದನು. ವಸಿಷ್ಠನ ಮಕ್ಕಳು ಹಿಂದುಗಡೆ ಜುಟ್ಟು ಬಿಡುತ್ತಿದ್ದರು. ಮೂಗಿಲ್ಲದ, ಮಾತುಬಾರದ ಮನುಷ್ಯ ಜಾತಿಗಳಿದ್ದವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲದೆ, ಐದನೆಯ ಒಂದು ಜಾತಿಯಿದ್ದಿತು. ಕಟ್ಟಿಗೆಗಳನ್ನು ತಿಕ್ಕಿ ಬೆಂಕಿಯನ್ನು ತೆಗೆಯುತ್ತಿದ್ದರು. ವನಸ್ಪತಿಗಳಿಂದ ರೋಗಚಿಕಿತ್ಸೆ ಮಾಡುತ್ತಿದ್ದರು. ಅಂಕುಶದಿಂದ ಆನೆಯನ್ನು ಪಳಗಿಸುತ್ತಿದ್ದರು. ದ್ಯೂತಕ್ರೀಡೆಯನ್ನು ಆಡುತ್ತಿದ್ದರು.

ರಾಮ, ಚೇನ, ಊರ್ವಶಿ–ಪುರೂರವ, ಧ್ವಸ್ರ, ಪುರುಷಂತಿ, ಮರುತ್ತ, ನಹುಷ, ಭೃಜ್ಯು, ಕಶ, ಆಸಂಗ, ವಿಭೇದು ಮೊದಲಾದ ರಾಜರ ವಿಷಯಗಳು ವೇದಗಳಲ್ಲಿವೆ.

(ಋ.ಸಂ ೧೦-೯೭,) ಸೂಕ್ತದಲ್ಲಿ ರೋಗ, ಔಷಧಿ, ವೈದ್ಯರುಗಳಿಗೆ ಸಂಬಂಧಪಟ್ಟ ವಿಷಯಗಳಿವೆ ವಿಷನಾಶಕ, ಅಪಶಕುನನಿವಾರಣೆ, ದಾರಿದ್ರ್ಯನಾಶಕ, ಚಃಕ್ಷುಪ್ರಾಪ್ತಿ, ಗರ್ಭರಕ್ಷಣೆ, ಶತ್ರುನಾಶ, ರಾಜ್ಯಾವಾಪ್ತಿಗಳಿಗೆ ಸಂಬಂಧಪಟ್ಟ ಸೂಕ್ತಗಳೂ ಸಹ ವೇದಗಳಲ್ಲಿವೆ.

## ವೇದಾಭ್ಯಾಸ ಕ್ರಮ.

ಅತ್ಯಂತ ಪ್ರಾಚೀನ ಕಾಲದಲ್ಲಿ ವೇದಾಭ್ಯಾಸವು ಬಹು ವ್ಯಾಪಕವಾಗಿಯೂ, ಮುಖ್ಯವಾಗಿಯೂ ನಮ್ಮ ಭಾರತ ದೇಶದಲ್ಲಿ ನಡೆಯುತ್ತಿದ್ದಿತು. ಸಂಸ್ಕೃತವು ವ್ಯಾವಹಾರಿಕ ಭಾಷೆಯಾಗಿದ್ದಾಗಲೂ, ಆಮೇಲೆ ಕೆಲವು ಶತ

ಮಾನಗಳವರೆಗೂ ಸಹ ವೇದಗಳನ್ನು ಅರ್ಥಸಹಿತವಾಗಿ ಓದುವ ಕ್ರಮವು ಇದ್ದಿತೆಂದು ನಿರ್ವಿವಾದವಾಗಿ ಹೇಳಬಹುದು. ವೇದಗಳನ್ನು ಹಿಂದೆ ಕೇವಲ ಬ್ರಾಹ್ಮಣರು ಮಾತ್ರ ಓದುತ್ತಿರಲಿಲ್ಲ. ತ್ರಿವರ್ಣದವರು – ಬ್ರಾಹ್ಮಣ, ಕ್ಷತ್ರಿಯ ವೈಶ್ಯರೆಲ್ಲರೂ ಓದುತ್ತಿದ್ದರು; ಅಷ್ಟೇ ಅಲ್ಲದೆ, ಹೆಂಗಸರೂ ಸಹ ವೇದಾಭ್ಯಾಸ ಮಾಡುತ್ತಿದ್ದರೆಂಬುದಕ್ಕೆ ಪರ್ಯಾಯದಿಂದ ಆಧಾರಗಳು ದೊರೆಯುತ್ತವೆ. ಬ್ರಾಹ್ಮಣನಿಗೆ ಅಧ್ಯಯನ ( ಕಲಿಯುವುದು ) ಅಧ್ಯಾಪನ (ಕಲಿಸುವುದು) ದಾನ(ಕೊಡುವುದು) ಪ್ರತಿಗ್ರಹ(ದಾನಸ್ವೀಕಾರಮಾಡುವುದು) ಯಜನ (ಯಜ್ಞಕರ್ಮಗಳನ್ನು ಮಾಡುವುದು) ಯಾಜನ (ಯಜ್ಞ ಕರ್ಮಗಳನ್ನು ಮಾಡಿಸುವುದು) ಈ ಆರು ಕರ್ಮಗಳು ಕ್ರಮಪ್ರಾಪ್ತವಾದ ಅನಿವಾರ್ಯವಾದ ಕರ್ಮಗಳೆಂದು ಹೇಳಿದಂತೆ, ಕ್ಷತ್ರಿಯ ವೈಶ್ಯರಿಗೆ ಅಧ್ಯಯನ, ದಾನ, ಯಜನ ಈ ಮೂರು ಕರ್ಮಗಳು ಮಾತ್ರ ಅವಶ್ಯಕವಾದ ಕರ್ಮಗಳಾಗಿದ್ದವು. ಅದರಂತೆಯೇ ಸ್ತ್ರೀಯರೂ ಸಹ ವೇದಾಭ್ಯಾಸ ಮಾಡುತ್ತಿದ್ದರೆಂದು ಹೇಳುವುದಕ್ಕೆ ವೇದದ ಅನೇಕ ಮಂತ್ರಗಳನ್ನು ಕಂಡುಹಿಡಿದವರು ಸ್ತ್ರೀಯರಿರುವರೆಂಬ ಒಂದೇ ಉದಾಹರಣೆಯು ಪ್ರತಿಪ್ರಶ್ನೆ ಏಳದಂತಹ ದೃಷ್ಟಾಂತವಾಗುವಂತಿದೆ. ಅದಲ್ಲದೆ ಇಂದಿನ ವಿವಾಹ, ಗರ್ಭಾಧಾನಾದಿ ಸಂಸ್ಕಾರಗಳ ಸಮಯದಲ್ಲಿ ಕೆಲವು ಮಂತ್ರಗಳನ್ನು ಸ್ತ್ರೀಯರಿಂದ ಹೇಳಿಸುವುದನ್ನೂ ಮಂತ್ರಪುರಸ್ಸರವಾಗಿ ಆಚಮನಾದಿ ಕ್ರಿಯೆಗಳನ್ನು ಮಾಡಿಸುವ ಸಂದರ್ಭವನ್ನೂ ನೋಡಿದರೆ, ಅದರ ಐತಿಹಾಸಿಕ ಹಿನ್ನೆಲೆಗಳನ್ನು ಊಹಿಸಿದರೆ, ಹಿಂದೆ ಒಂದುಕಾಲದಲ್ಲಿ ಸ್ತ್ರೀಯರೂ ಸಹ ವೇದಾಭ್ಯಾಸ ಮಾಡುತ್ತಿದ್ದರೆಂದು ತಿಳಿದುಬರುವಂತಿದೆ. ಆದರೆ ದುರ್ದೈವವಾದ ಕಾಲದುರ್ವಿಪಾಕದಿಂದ ವೇದಾಭ್ಯಾಸವು ಸಂಕುಚಿತವಾಗಿ ಸ್ತ್ರೀಯರನ್ನು ಶೂದ್ರ ದ್ವಿಜಬಂಧುಗಳ ಜೊತೆಗೆ ಸೇರಿಸಿ ಇವರಿಗೂ ಸಂಬಂಧವಾಗಕೂಡದೆಂದು ತೀರ್ಮಾನವಾಗಿಬಿಟ್ಟಿದೆ. ಆದರೆ ಇಂದು ಸ್ವತಂತ್ರ ಭಾರತದಲ್ಲಿ ಐತಿಹಾಸಿಕ ಹಿನ್ನೆಲೆಗಳನ್ನು ಕಂಡುಹಿಡಿದು ನಮ್ಮ ಪ್ರಾಚೀನ ಪರಂಪರೆಗೆ ಗೌರವವು ಬರುವಂತೆ ಪುನಃ ಈ ವಿಷಯವಾಗಿ, ಒಂದು ಸರಿಯಾದ ವ್ಯವಸ್ಥೆಗೊಳಿಸುವುದು ಅವಶ್ಯಕವಾಗಿದೆ. ಅರ್ಥಸಹಿತವಾದ ವೇದಾಭ್ಯಾಸ ಪದ್ಧತಿಯನ್ನೇ

ಕಿರುಗಿ ಜಾರಿಗೆ ತರಬೇಕಾಗಿದೆ; ಎಂದು ಹೇಳದಿದ್ದರೆ, ಅಪರಾಧವಾದೀತು. ವೇ ಧರ್ಮಕ್ಕೆ ಸಂಪ್ರದಾಯಕ್ಕೆ ದ್ರೋಹ ಬಗೆದಂತಾದೀತು; ಇರಲಿ.

ಅತ್ಯಂತ ಪ್ರಾಚೀನ ಕಾಲದಲ್ಲಿ ಅರ್ಥಸಹಿತವಾಗಿಯೇ ವೇದಾಭ್ಯಾಸವನ್ನು ಮಾಡುವ ಕ್ರಮವಿದ್ದಿತು. ಬ್ರಾಹ್ಮಣರು ಅಡವಿಯ ಮಧ್ಯದಲ್ಲಿ ನದೀ ಕಿನಾರಗಳಲ್ಲಿ ಇದ್ದು ಪ್ರಕೃತಿಯ ಮಡಿಲಿನಲ್ಲಿ ಜ್ಞಾನೋಪಾಸನೆಯನ್ನು ಮಾಡುತ್ತಿದ್ದಕಾಲದಲ್ಲಿ ವೇದಾಭ್ಯಾಸವು ಅರ್ಥಸಹಿತವಾಗಿಯೇ ನಡೆಯುತ್ತಿದ್ದಿತು. ಬ್ರಾಹ್ಮಣರು ಪಟ್ಟಣಗಳನ್ನು ಆಶ್ರಯಿಸಿ ಬಾಳ ಹತ್ತಿದ ಕಾಲದಿಂದ ವೇದಾಭ್ಯಾಸವು ಅರ್ಥವಿರಹಿತವಾಗಿ ನಡೆಯುವ ಪದ್ಧತಿಯು ಆರಂಭವಾಗಿರಬೇಕೆಂದು ತೋರುತ್ತದೆ. ಜನರು ಐಹಿಕ ಸುಖಸಂಪತ್ತುಗಳ ಕಡೆಗೆ ಗಮನವನ್ನು ಹೆಚ್ಚುಹೆಚ್ಚಾಗಿ ಕೊಡುತ್ತಾ ಬಂದಂತೆ ವೇದ ಶಾಸ್ತ್ರಾದಿಗಳ ಅಭ್ಯಾಸಗಳು ಒಂದು ಸಾಂಪ್ರದಾಯಿಕವಾದ, ಅನಿವಾರ್ಯವಾದ ಕರ್ತವ್ಯವೆಂದು ತಿಳಿದು ಅಭ್ಯಾಸ ಮಾಡುವ ಕ್ರಮವು ಬಂದಿರಬೇಕು. ಅದರಿಂದ ಅರ್ಥರಹಿತವಾದ ವೇದಾಭ್ಯಾಸಕ್ರಮವು ಯಾವ ಕಾಲದಿಂದ ಆರಂಭವಾಯಿತೆಂದು ಹೇಳುವುದಕ್ಕೆ ಸರಿಯಾದ ಆಧಾರಗಳು ಯಾವುವೂ ಸಿಗುವುದಿಲ್ಲ. ಇತಿಹಾಸಗಳ ಅವಶೇಷಗಳಲ್ಲಾಗಲೀ, ಪುರಾಣ, ಧರ್ಮಶಾಸ್ತ್ರಗಳಲ್ಲಾಗಲೀ ಈ ಬಗ್ಗೆ ಯಾವ ಆಧಾರವೂ ಕಂಡುಬರುವುದಿಲ್ಲ. ಆದರೆ ನಾವು ಒಂದು ದೃಷ್ಟಿಯಿಂದ ವಿಚಾರ ಮಾಡಿದರೆ ಮಹಾಭಾರತ ಯುದ್ಧಕಾಲದ ಸ್ವಲ್ಪ ಹಿಂದು ಮುಂದೆ ಈ ಕ್ರಮವು ಆರಂಭವಾಗಿರಬೇಕೆಂದು ತೋರುತ್ತದೆ. ಮಹಾಭಾರತದಲ್ಲಿ ಅಂದಿನ ಕಾಲದ ನಮ್ಮ ಭಾರತದ ರಾಜ ಮಹಾರಾಜರೆಲ್ಲರೂ ಭಾರತಾಹವದಲ್ಲಿ ಆಹುತಿಯಾದರು. ಉಳಿದವರು ಚಿಕ್ಕಮಕ್ಕಳು, ವೃದ್ಧರು, ವಿಧವೆಯರಾದ ರಾಜಪತ್ನಿಯರು ಮಾತ್ರ. ಇದರಿಂದ ಅರಣ್ಯವಾಸಿಗಳಾದ ಋಷಿಗಳಿಗೆ ಆಶ್ರಮಗಳಲ್ಲಿ ಕುಳಿತು ನಿರಾತಂಕವಾಗಿ ಅಶನ ವಶನಾದಿಗಳ ಚಿಂತೆಯಿಲ್ಲದೆ ವೇದಶಾಸ್ತ್ರಾದಿಗಳನ್ನು ಓದುವುದಕ್ಕೆ, ಜ್ಞಾನೋಪಾಸನೆಯನ್ನು ಮಾಡಿಕೊಂಡು ಬರುವುದಕ್ಕೆ ಸಹಾಯ, ಸೌಕರ್ಯಗಳು ಮೊದಲಿನಂತೆ ಸಿಗದಾಯಿತು. ಇದರಿಂದ ಆರ್ಯ ಋಷಿಗಳು ನಗರಗಳನ್ನು

ಆಶ್ರಯಿಸ ಹತ್ತಿದರು. ಅಂದಿನಿಂದ ಅರ್ಥವಿದೂರವಾದ ವೇದಾಭ್ಯಾಸಮಾಡುವ ಪದ್ಧತಿಯು ಇದಂಪ್ರಾಥಮ್ಯವಾಗಿ ಆರಂಭವಾಗಿರಬೇಕೆಂದು ತೋರುತ್ತದೆ.

ಇದಲ್ಲದೆ ಪ್ರಾಚೀನ ಕಾಲದಿಂದ ವ್ಯವಹಾರದ ಭಾಷೆಯಾಗಿದ್ದ ಸಂಸ್ಕೃತ ಭಾಷೆಯು ಕವಲೊಡೆದು ಅದರ ಅಪಭ್ರಂಶವಾದ ಅಥವಾ ಸಂಸ್ಕೃತಜನ್ಯವಾದ ಪ್ರಾಕೃತಭಾಷೆಗಳುವ್ಯಾವಹಾರಿಕಭಾಷೆಗಳಾಗಿ, ಸಾರ್ವತ್ರಿಕ ಬಳಕೆಯ ಭಾಷೆಗಳಾಗಿ ಏರ್ಪಟ್ಟಕಾಲದ ಮಧ್ಯದ ಕಾಲಾವಧಿಯಲ್ಲಿ ಅರ್ಥರಹಿತವಾಗಿ ವೇದಾಭ್ಯಾಸ ಮಾಡುವ ಪದ್ಧತಿಯು ಹೆಚ್ಚುಹೆಚ್ಚಾಗಿ ಪ್ರಚಾರವಾಗುತ್ತಾ ಕಾಲಕ್ರಮೇಣ ಅದೇ ಸಾರ್ವತ್ರಿಕವಾಗಿ ವ್ಯಾಪಿಸಿ ಕೊಂಡಿರಬಹುದೆಂದುಮಾತ್ರ ಊಹಿಸಬಹುದಷ್ಟೇ ಅಲ್ಲದೆ ಇದರ ಕಾಲದ ಬಗ್ಗೆ ಸರಿಯಾಗಿ ಊಹಿಸಲಾಗಲೀ, ಖಚಿತವಾದ ನಿರ್ಣಯ, ಅಭಿಪ್ರಾಯ ಗಳನ್ನು ಕೊಡಲಾಗಲೀ ಸಾಧ್ಯವಾಗುವಂತಿಲ್ಲ. ಅಂದರೆ ವಿಕ್ರಮಶಕ ಪೂರ್ವ ಮೂರುಸಾವಿರ ವರ್ಷಗಳಲ್ಲಿ ಆರಂಭವಾದ ಅರ್ಥರಹಿತವಾದ ವೇದಾ-ಭ್ಯಾಸ ಮಾಡುವ ಪದ್ಧತಿಯು ವಿಕ್ರಮಶಕ ಪೂರ್ವ ಎಂಟು ಅಥವಾ ಆರನೆಯ ಶತಮಾನದ ಹೊತ್ತಿಗೆ ಬಹುಮಟ್ಟಿಗೆ ಜಾರಿಯಲ್ಲಿ ಬಂದಿದ್ದಿತೆಂದು ಊಹಿಸಬಹುದಾಗಿದೆ.

ಅರ್ಥರಹಿತವಾದ ವೇದಾಭ್ಯಾಸಮಾಡುವುದು ಸರಿಯಲ್ಲನೆಂಬ ನಿರ್ಧಾರವು ನಮ್ಮ ಆರ್ಯ ಋಷಿಗಳಿಗೆ ವೇದಕಾಲದಿಂದಲೂ ಇದ್ದಿತು. ಅರ್ಥರಹಿತವಾಗಿ ವೇದಾಭ್ಯಾಸ ಮಾಡುವುದು ಅಪರಾಧವೆಂದು ಅನೇಕ ವೇದ ಮಂತ್ರಗಳಲ್ಲಿಯೂ ಸಹ ಸ್ಪಷ್ಟವಾಗಿ ಹೇಳಿರುವುದನ್ನು ನಾವು ಕಾಣುತ್ತೇವೆ. ಒಮ್ಮೆ ಅರ್ಥರಹಿತವಾಗಿ ವೇದಾಭ್ಯಾಸ ಮಾಡುವ ಪದ್ಧತಿಯು ಜಾರಿಗೆ ಬಂದು ದೃಢಮೂಲವಾಗಿಬಿಟ್ಟರೆ ಕೊನೆಗೆ ಅದು ಸಾರ್ವತ್ರಿಕವಾಗಿ ಹಬ್ಬಿ ಕೊಂಡು, ಕೊನೆಗೊಂದುಕಾಲಕ್ಕೆ ವೇದಗಳ ಅರ್ಥವನ್ನು ತಿಳಿಯುವುದಕ್ಕೆ ಸಾಧ್ಯವಾಗಲಿಕ್ಕಿಲ್ಲವೆಂದು ನಮ್ಮ ಪ್ರಾಚೀನರು ಎಷ್ಟೋ ಕಾಲದ ಹಿಂದೆಯೇ ಯೋಚಿಸಿದ್ದರು. ಹೀಗೆ ನಮ್ಮ ಪೂರ್ವಿಕರು ಬಹಳ ಎಚ್ಚರಿಕೆಯಿಂದ ನಡೆದುಕೊಂಡು ಬಂದಿದ್ದರೂ ಸಹ ನಿರರ್ಥಕವಾದ ವೇದಾಭ್ಯಾಸ ಕ್ರಮವು ಮಾತ್ರ ಹೇಗೋ, ಯಾವಾಗಲೋ ಜಾರಿಯಲ್ಲಿ ಬಂದು ಸಾರ್ವತ್ರಿಕವಾಗಿ

ದೃಢಮೂಲವಾಗಿಬಿಟ್ಟಿದೆ. ಅದರ ಫಲವನ್ನು ಇಂದಿನವರಾದ ನಾವು ಅನುಭವಿಸುತ್ತಿದ್ದೇವೆ. ವೇದಗಳ ಅರ್ಥವು ಇದೇ ಎಂದು ಖಚಿತವಾಗಿ, ಸುಲಭವಾಗಿ ತಿಳಿದುಕೊಳ್ಳಲು ಇಂದಿನವರಾದ ನಮಗೆ ದಾರಿಯೇ ಇಲ್ಲವಾಗಿದೆ.

ಹಿಂದೊಂದು ಕಾಲದಲ್ಲಿ ವೇದಾಭ್ಯಾಸವನ್ನು ಅರ್ಥಸಹಿತವಾಗಿಯೇ ಮಾಡುತ್ತಿದ್ದರೆಂಬುದಕ್ಕೆ ಅರ್ಥಸಹಿತವಾಗಿ ವೇದಾಭ್ಯಾಸ ಮಾಡುವುದರ ಪ್ರಾಶಸ್ತ್ಯ, ನಿರರ್ಥಕವಾಗಿ ವೇದಾಭ್ಯಾಸ ಮಾಡುವುದರ ನಿಂದೆಗಳನ್ನು ಮಾಡಿರುವ ಪ್ರಾಚೀನವಾದ ಕೆಲವು ವಾಕ್ಯಗಳನ್ನು ಉದಾಹರಿಸಬಹುದಾಗಿದೆ. ಅಂತಹ ವಾಕ್ಯಗಳು, ವೇದ, ಪುರಾಣ, ಸ್ಮೃತಿ, ಧರ್ಮ ಶಾಸ್ತ್ರಾದಿಗಳೆಲ್ಲದರಲ್ಲಿಯೂ ದೊರೆಯುತ್ತವೆ.

" ಉತತ್ವಃ ಪಶ್ಯನ್ನದದರ್ಶವಾಚಮುತತ್ವಃ ಶೃಣ್ವನ್ನಶೃಣೋತ್ಯೇನಾಂ ||
ಉತೋತ್ವಸ್ಮೈ ತನ್ವಂ ವಿಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ||

ಅರ್ಥವನ್ನು ತಿಳಿಯದೆ ವೇದಾಭ್ಯಾಸ ಮಾಡಿದವನು ವೇದವಾಣಿಯನ್ನು ಕಂಡರೂ ಕಾಣದವನಾಗುತ್ತಾನೆ. ಅಂತಹ ಇನ್ನೊಬ್ಬನು ಕೇಳಿದರೂ ಕೇಳದವನಾಗುತ್ತಾನೆ. ಆದೇ ವೇದಾರ್ಥವನ್ನು ತಿಳಿದ ವೇದಪಾಠಿಯು ಋತುಸ್ನಾತಳಾದ ಪತ್ನಿಯು ಸರ್ವಾಲಂಕೃತಳಾಗಿ ಪತಿಯಬಳಿಗೆ ಬಂದು ತನ್ನ ಸರ್ವ ಅವಯವಗಳನ್ನೂ ಪ್ರದರ್ಶಿಸುವಂತೆ ಆತ್ಮ ಶರೀರಗಳ ಸೂಕ್ಷ್ಮ ಸ್ವರೂಪಗಳನ್ನು ತಿಳಿದು ವೇದಾಭ್ಯಾಸದ ಪೂರ್ಣ ಪ್ರಯೋಜನವನ್ನು ಪಡೆಯುತ್ತಾನೆ.

ಯದ್ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ ||
ಅನಗ್ನಾವಿವ ಶುಷ್ಕೇಂಧೋ ನ ತಜ್ಜ್ವಲತಿ ಕರ್ಹಿಚಿತ್ ||

ಅರ್ಥಗ್ರಹಣಮಾಡದ ವೇದಾಭ್ಯಾಸವು ಕೇವಲ ಶಬ್ದಗಳನ್ನು ಉಸಿರಿಸಿದಂತಾಗುವುದು. ಅಗ್ನಿರಹಿತವಾದ ಕಟ್ಟಿಗೆಯಮೇಲೆ ಆಹುತಿಯನ್ನು ಹಾಕಿದರೆ ಹೇಗೆ ಉರಿಯುವುದಿಲ್ಲವೋ ಅದರಂತೆಯೇ ಅರ್ಥರಹಿತವಾಗಿ ಓದಿದ ವೇದವು ಆತ್ಮವನ್ನು ಬೆಳಗಿಸಲಾರದು ಎಂದು ಒಂದುಕಡೆ ಹೇಳಿವರೆ, ಇನ್ನೊಂದುಕಡೆಯಲ್ಲಿ ವೇದಾಭ್ಯಾಸಮಾಡಿ ಅದರ ಅರ್ಥವನ್ನು ತಿಳಿಯದವನು ಭಾರವನ್ನು ಹೊರುವ ಮೋಟುಮರಕ್ಕೆ ಸಮಾನನೆಂದೂ, ಅದೇ

ಅರ್ಥಸಹಿತವಾಗಿ ವೇದಾಭ್ಯಾಸಮಾಡಿದವನು ಇಹದಲ್ಲಿ ಸಕಲವಿಧವಾದ ಕಲ್ಯಾಣವನ್ನೂ ಅನುಭವಿಸಿ, ಜ್ಞಾನದಿಂದ ನಾಶಹೊಂದಿದ ಸಕಲಪಾಪವುಳ್ಳವನಾಗಿ ಸ್ವರ್ಗವನ್ನು ಹೊಂದುವನೆಂದೂ ಹೇಳಿದೆ.

"ಸ್ಥಾಣು ರಯಂ ಭಾರವಹಃ ಕಿಲೋಭೂತ್
ಅಧೀತ್ಯ ವೇದಾನ್ನವಿಜಾನಾತಿ ಯೋಽರ್ಥಂ॥
ಯೋಽರ್ಥಜ್ಞಃ ಇತ್ಸಕಲಂಭದ್ರಮಶ್ನುತೇ
ನಾಕಮೇತಿ ಜ್ಞಾನವಿಧೂತಪಾಪ್ಮಾ" ॥

ಇನ್ನೊಂದು ಕಡೆಗೆ ಅರ್ಥತಿಳಿಯದೇ ವೇದಾಭ್ಯಾಸಮಾಡಿದವನು ಭಾರವನ್ನು ಹೊರುವ ಗರ್ದಭಕ್ಕೆ ಸಮಾನನೆಂದು ಹೇಳಿದೆ.

ಅಧೀತ್ಯಯೋ ವೇದಾನ್ನ ವಿಜಾನಾತಿ ಅರ್ಥಾನ್
ಸ ಗರ್ದಭೋ ಭಾರವಹಶ್ಚ ವಿಶ್ರುತಃ॥

ಮತ್ತೊಂದುಕಡೆಗೆ ಅರ್ಥತಿಳಿಯದೆ ವೇದಾಭ್ಯಾಸಮಾಡುವವನು ಪಾತಕಾಧಮನೆಂದು ಹೇಳಿದೆ.

ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇಪಾತಕಾಧಮಾಃ ॥

ಹೀಗೆ, ಅರ್ಥತಿಳಿದು ವೇದಾಭ್ಯಾಸ ಮಾಡುವುದು ಉತ್ತಮವೆಂದೂ, ಅರ್ಥತಿಳಿಯದೇ ಓದುವುದು ಪ್ರಯೋಜನವಿಲ್ಲವೆಂದೂ ಅನೇಕ ಕಡೆಗಳಲ್ಲಿ ಹೇಳಿರುವುದನ್ನು ನೋಡಿದರೆ ಹಿಂದೊಂದು ಕಾಲದಲ್ಲಿ ಅರ್ಥಸಹಿತವಾಗಿ ವೇದಾಭ್ಯಾಸಮಾಡುವ ಕ್ರಮವು ಸಾರ್ವತ್ರಿಕವಾಗಿದ್ದಿತೆಂದು ಸ್ವತಸ್ಸಿದ್ಧವಾಗುತ್ತದೆ.

ವೇದಾಭ್ಯಾಸವನ್ನು ಅನೇಕ ರೀತಿಗಳಿಂದ ಮಾಡುವ ಪದ್ಧತಿಯು ಭಾರತೀಯರಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ಬಂದಿದೆ. ವೇದಾಭ್ಯಾಸವನ್ನು ಸುಮಾರು ಹತ್ತು ಹನ್ನೆರಡು ತರಹ ಮಾಡುವ ಪದ್ಧತಿಯು ಪ್ರಾಚೀನ ಕಾಲದಲ್ಲಿದ್ದಿತೆಂದು ತಿಳಿದುಬರುತ್ತದೆ. ವೇದಗಳು ಅಭ್ಯಾಸಕ್ರಮದಿಂದ "ನಿರ್ಭುಜ ಸಂಹಿತಾ", "ಪ್ರತೃಣ ಸಂಹಿತಾ" ಎಂದು ಎರಡು ವಿಧವಾದ ಸಂಹಿತೆಗಳಾಗುವವೆಂದು ಹೇಳಿದೆ. ನಿರ್ಭುಜ ಸಂಹಿತೆಯೆಂದರೆ ವೇದಮಂತ್ರಗಳೊಳಗಿನ ಪದಗಳನ್ನು ಹಿಂದು ಮುಂದು ಮಾಡದೆ ಮಂತ್ರಗಳನ್ನು ಇದ್ದಂತೆಯೇ

ಕ್ರಮವಾಗಿ ಹೇಳುವುದು. ಪ್ರತ್ಯಣ ಸಂಹಿತೆಯೆಂದರೆ, ಒಂದೊಂದು ವಿಧವಾದ ನಿಯಮಿತ ಪದ್ಧತಿಗಳಂತೆ, ಮಂತ್ರಗಳ ಪದಗಳನ್ನು ಹಿಂದು ಮುಂದು ಮಾಡಿ ಹೇಳುವುದು. ಪದವಿಭಾಗಾದಿಗಳನ್ನು ಮಾಡದೆ ಮಂತ್ರ ಗಳನ್ನು ಹೇಳುವ ಮೂಲಪಾಠ, ಪದಪಾಠ, ಕ್ರಮಪಾಠ ಇವು ಮೂರು ವಿಧವಾದ ಪಾಠಕ್ರಮಗಳು ನಿರ್ಭುಜ ಪಾಠಕ್ರಮಗಳು. ಹಾಗೆಯೇ ಜಟಾ ಮಾಲಾ, ಶಿಲಾ, ಲೇಖಾ, ಧ್ವಜ, ದಂಡ, ರಥ, ಘನ ಇವು ಎಂಟುವಿಧ ವಾದ ಪಾಠಪದ್ಧತಿಗಳು ಕ್ರಮವಾಗಿ ಬಂದಿರುವ ಪ್ರತ್ಯಣ, ಎಂದರೆ ವಿಕೃತಿಯನ್ನು ಹೊಂದಿದ ಪಾಠಕ್ರಮಗಳೆಂದು ಹೇಳಿದೆ.

"ಜಟಾ ಮಾಲಾ ಶಿಲಾ ಲೇಖಾ ಧ್ವಜೋ ದಂಡೋ ರಥೋ ಘನಃ ||

ಅಷ್ಟಾವಿಕೃತಯಃ ಪ್ರೋಕ್ತಾಃ ಕ್ರಮಪೂರ್ವಾ ಮನೀಷಿಭಿಃ ||

ಒಟ್ಟು ಇವು ಹನ್ನೊಂದು ವಿಧವಾದ ಪಾಠಕ್ರಮಗಳಲ್ಲದೇ ದಂಡಕ್ರಮ, ವರ್ಣ ಕ್ರಮಗಳೆಂಬ ಪಾಠಪದ್ಧತಿಗಳೂ ಸಹ ಇದ್ದವೆಂದು ತಿಳಿದುಬರುತ್ತದೆ- ಆದರೆ ಇಂದು ವ್ಯವಹಾರದಲ್ಲಿ ಮೂಲಪಾಠ, ಪದಪಾಠ, ಕ್ರಮಪಾಠ, ಜಟಾಪಾಠ, ಘನಪಾಠ, ಈ ಐದು ವಿಧವಾದ ಪಾಠಕ್ರಮಗಳು ಮಾತ್ರ ಇಂದಿನ ವೇದಾಭ್ಯಾಸ ಪದ್ಧತಿಯಲ್ಲಿ ಉಳಿದುಕೊಂಡಿವೆ.

೧ **ಮೂಲಪಾಠ;**— ಮೇಲಿನ ಐದು ವಿಧವಾದ ಪಾಠಕ್ರಮದ ಭೇದಗ ಳಲ್ಲಿ, ಮೂಲಪಾಠಕ್ರಮವು ಎಲ್ಲಕ್ಕಿಂತಲೂ ಅತ್ಯಂತ ಪ್ರಾಚೀನವಾದುದು. ಉದಾತ್ತಾನುದಾತ್ತ ಸ್ವರಿತಸ್ವರಗಳ ಸಹಿತವಾಗಿ ವೇದಗಳ ಮಂತ್ರಗಳನ್ನು ಅಭ್ಯಾಸಮಾಡುವುದು ಮೂಲಪಾಠಕ್ರಮವು. "ಅಗ್ನಿ ಮೀಳೇ ಪುರೋಹಿತಂ"

೨ **ಪದಪಾಠ:—** ಮಂತ್ರಗಳು ಸಂಧಿಸಹಿತವಾಗಿರುತ್ತವೆ. ಕೆಲವುಶಬ್ದ ಗಳು ಸಣ್ಣ ಸಣ್ಣ ಸಮಾಸದೊಂದಿಗೂ ಉಪಸರ್ಗ, ಅವ್ಯಯಗಳೊಂದಿಗೂ ಕೂಡಿರುತ್ತವೆ. ಹೀಗೆ ಸಂಧಿ ಸಮಾಸಬದ್ಧವಾದ ಮಂತ್ರಗಳ ಪದಗ ಳನ್ನು ಬಿಡಿಸಿ ಹೇಳುವ ಪದ್ಧತಿಗೆ, ಪದಪಾಠವೆಂದು ಹೆಸರು. ಅಗ್ನಿಂ, ಈಳೇ, ಪುರೋಹಿತಂ ಇತ್ಯಾದಿ. ವಿಸರ್ಗ ಅವ್ಯಯಗಳಿಂದ ಸಮಸ್ತವಾದ ಪದಗಳನ್ನು ಬಿಡಿಸಿ ತೋರಿಸುವ ಪದ್ಧತಿಗೆ ಮಃಖಂಡವೆಂದು ಹೇಳುತ್ತಾರೆ. ಪುರೋಹಿತಂ ಇತಿ- ಪುರೋಹಿತಂ.

೩ **ಕ್ರಮಪಾಠ:—** ಪದಪಾಠ ಪದ್ಧತಿಯಲ್ಲಿ ಬಿಡಿಸಿರುವ ಪದಗಳನ್ನು ಕೂಡಿಸಿಹೇಳುವುದೇ ಇದರ ಮುಖ್ಯ ಉದ್ದೇಶವಾಗಿರುವುದು. ಈ ಕ್ರಮ ಪಾಠಪದ್ಧತಿಯಲ್ಲಿ ಪೂರ್ವೋತ್ತರ ಪದಗಳನ್ನು ಸೇರಿಸಿ, ಹಿಂದಿನದನ್ನು ಬಿಡುತ್ತಾ ಮುಂದಿನದನ್ನು ಸೇರಿಸುತ್ತಾ ಎರಡು ಪದಗಳನ್ನು ಕೂಡಿಸಿ ಹೇಳುತ್ತಾ ಹೋಗುತ್ತಾರೆ. ಇದರಲ್ಲಿ ಪ್ರತಿಯೊಂದು ಪದವನ್ನೂ ಸಾಮಾನ್ಯವಾಗಿ ಎರಡೆರಡು ಸಲ ಉಚ್ಚರಿಸುತ್ತಾರೆ. ಪ್ರತಿಯೊಂದು ಮಂತ್ರಾರ್ಧದ ಮೊದಲಿನ ಮತ್ತು ಕೊನೆಯ ಎರಡು ಪದಗಳನ್ನು ಮಾತ್ರ ಒಂದೊಂದೇ ಸಲ ಉಚ್ಚರಿಸಬೇಕಾಗುತ್ತದೆ. ಅಗ್ನಿಂ, ಈಳೇ, ಈಳೇ, ಪುರೋಹಿತಂ, ಪುರೋಹಿತಂ, ಯಜ್ಞಸ್ಯ, ಇತ್ಯಾದಿ,.

೪. **ಜಟಾಪಾಠ:—** ನಾಲ್ಕನೆಯದು ಜಟಾಪಾಠಕ್ರಮವು. ಇದು ಕ್ರಮ ಪಾಠಪದ್ಧತಿಯನ್ನು ಅನುಸರಿಸಿದೆ. ಎರಡೆರಡು ಪದಗಳ ಪ್ರತಿಯೊಂದು ಗುಂಪನ್ನೂ, ಒಟ್ಟಿಗೆ ಮೂರು ಮೂರು ಆವರ್ತಿಯಾಗಿ ಹೇಳಬೇಕಾಗುತ್ತದೆ. ಎರಡನೆಯ ಆವರ್ತಿಯಲ್ಲಿ ಶಬ್ದಗಳನ್ನು ಹಿಂದು ಮುಂದಾಗಿ ಹೇಳುವ ಪದ್ಧತಿಯಿದೆ. ಅಗ್ನಿಂ + ಈಳೇ, ಈಳೇ + ಅಗ್ನಿಂ = ಅಗ್ನಿಮೀಳೇ, ಈಳೇ + ಪುರೋಹಿತಂ, ಪುರೋಹಿತಂ + ಈಳೇ, = ಈಳೇ ಪುರೋಹಿತಂ. ಇತ್ಯಾದಿ.,
ಇದರಲ್ಲಿ ಪ್ರತಿಯೊಂದು ಅರ್ಧ ಮಂತ್ರಗಳ ಮೊದಲನೆಯ ಮತ್ತು ಕೊನೆಯ ಶಬ್ದಗಳು ಮೂರು ಮೂರು ಸಲವೂ, ಮಧ್ಯದ ಪದಗಳು ಆರು ಆರು ಸಲವೂ ಉಚ್ಚಾರವಾಗುತ್ತವೆ.

೫. **ಘನಪಾಠ:—** ಇದರೊಳಗಿನ ಸಂಧಿಯ ಕ್ರಮವು ಅತಿ ತೀವ್ರವಾಗಿ ನಡೆಯುತ್ತದೆ. ಇದರಲ್ಲಿ ಮೂರು ಮೂರು ಪದಗಳನ್ನು ಒಂದೊಂದು ಗುಂಪಾಗಿ ಹಿಂದು ಮುಂದು ಮಾಡಿ ಹೇಳುತ್ತಾರೆ. ಜಟಾಪಾಠದಂತೆಯೇ ಇದರಲ್ಲಿಯೂ ಹಿಂದಿನ ಒಂದೊಂದು ಪದಗಳನ್ನು ಬಿಡುತ್ತಾ ಮುಂದಿನ ಒಂದೊಂದು ಪದಗಳನ್ನು ಸೇರಿಸಿಕೊಳ್ಳುತ್ತಾ ಹಿಂದು ಮುಂದಾಗಿ ಹೇಳುತ್ತಾರೆ. ಮೊದಲು ೧-೨-೨-೧ ನೆಯ ಪದಗಳನ್ನು ಹೇಳಿ, ಎರಡನೆಯ ಸಲ ೧-೨-೩, ೩-೨-೧ ನೆಯ ಪದಗಳನ್ನು ಹೇಳಬೇಕು. ಕೊನೆಗೆ ೧-೨-೩ ನೆಯ ಪದಗಳನ್ನು ಹೇಳಿ ನಿಲ್ಲಿಸಿದರೆ, ಒಂದು ಆವರ್ತವು ಮುಗಿದಂ

ತಾಗುತ್ತದೆ. ಹಾಗೆಯೇ ೨-೩-೩-೨ ನೆಯ ಪದಗಳನ್ನು ಮೊದಲು ಹೇಳಿ ೨-೩-೪ ೪-೩-೨ ನೆಯ ಪದಗಳನ್ನು ಹೇಳಬೇಕು. ಕೊನೆಗೆ ೨-೩-೪ ನೆಯ ಪದಗಳನ್ನು ಹೇಳಿ ನಿಲ್ಲಿಸಬೇಕು. ಹೀಗೆ ಪ್ರತಿಯೊಂದು ಮೂರು ಪದಗಳ ಗುಂಪನ್ನು ಒಂದು ಆವರ್ತಿಯಾಗಿ ಮುಗಿಸುವುದರೊಳಗೆ ಒಟ್ಟು ಹದಿಮೂರು ಪದಗಳ ಉಚ್ಚಾರವಾಗುತ್ತದೆ. ಇದರಲ್ಲಿ ಪ್ರತಿಯೊಂದು ಅರ್ಧಮಂತ್ರಗಳ ಮೊದಲನೆಯ ಮತ್ತು ಕೊನೆಯ ಪದಗಳು ಐದು ಸಲವೂ ಮಧ್ಯದಪದಗಳು ಹತ್ತತ್ತು ಸಲವೂ ಉಚ್ಚಾರವಾಗುತ್ತವೆ. ಅಗ್ನಿಂ-ಈಳೇ-ಈಳೇ-ಅಗ್ನಿಂ-ಅಗ್ನಿಮೀಳೇ ಪುರೋಹಿತಂ ಪುರೋಹಿತಂ-ಈಳೇ-ಅಗ್ನಿಂ, ಅಗ್ನಿಮೀಳೆ ಪುರೋಹಿತಂ; ಈಳೇ-ಪುರೋಹಿತಂ-ಪುರೋಹಿತಂ-ಈಳೇ, ಈಳೇ-ಪುರೋಹಿತಂ-ಯಜ್ಞಸ್ಯ-ಯಜ್ಞಸ್ಯ-ಪುರೋಹಿತಂ-ಈಳೇ—ಈಳೇ, ಪುರೋಹಿತಂ ಯಜ್ಞಸ್ಯ; ಪುರೋಹಿತಂ-ಯಜ್ಞಸ್ಯ-ಯಜ್ಞಸ್ಯ-ಪುರೋಹಿತಂ,- ಇತ್ಯಾದಿ.

ಇವುಗಳಲ್ಲಿ ಪದಪಾಠ, ಕ್ರಮಪಾಠಗಳಿಗೆ ಮಾತ್ರ ಲಕ್ಷಣ ಗ್ರಂಥಗಳು ಪ್ರಾಚೀನವಾದವು ಸಿಗುತ್ತವೆ. ಇವೆರಡು ಪದ್ಧತಿಯ ಪಾಠಕ್ರಮಗಳು ಮಂತ್ರಾರ್ಥಗಳನ್ನು ತಿಳಿಯಲು ಅನುಕೂಲವಾಗಲೆಂದು ವ್ಯವಹಾರದಲ್ಲಿ ಬಂದಿರಬೇಕೆಂದು ತೋರುತ್ತದೆ. ಇವು ಈ ಕೆಲಸವನ್ನು ಸಾಕಷ್ಟು ಸಮರ್ಥವಾಗಿ ಮಾಡಲು ಅರ್ಹವಾಗಿವೆ. ಇಂದೂ ಸಹ ಮಾಡುತ್ತಿವೆ. ಮುಂದಿನ ಜಟಾಪಾಠ, ಘನಪಾಠಗಳು ಕೇವಲ ವೇದರಕ್ಷಣೆಯ ಉಪಾಯಕ್ಕೆಂದು ಮಾಡಿದವಿರಬೇಕೆಂದು ಇಂದಿನ ವಿಮರ್ಶಕರ ಅಭಿಪ್ರಾಯವಿದೆ. ಇವಕ್ಕೆ ಲಕ್ಷಣ ಗ್ರಂಥಗಳಾವುವೂ ದೊರೆತಿಲ್ಲ. ಈ ಎಲ್ಲಾ ವಿಧವಾದ ಪಾಠಕ್ರಮಗಳಿಗೂ ಅದೃಷ್ಟ-ಪುಣ್ಯಗಳೇ,-ಪ್ರಯೋಜನ-ಫಲವೆಂದು ಸಾಂಪ್ರದಾಯಿಕರು ಹೇಳುತ್ತಾರೆ. ಹೀಗೆ ಕಷ್ಟಸಾಧ್ಯವಾದ ಪ್ರಯತ್ನಗಳಿಂದ ವೇದ ರಕ್ಷಣೆಯನ್ನು ಮಾಡಿಕೊಂಡು ಬಂದ ಸನಾತನಿಗಳನ್ನು ಎಷ್ಟು ಗೌರವಿಸಿದರೂ, ಹೊಗಳಿದರೂ ಕಡಿಮೆ ಎಂದು ಹೇಳಲೇಬೇಕಾಗುತ್ತದೆ.

---

# ೮. ವೇದಗಳ ಕಾಲ



ವೇದಗಳನ್ನು ಯಾವ ಕಾಲದಲ್ಲಿ ರಚಿಸಿದರೆಂಬುದು ಒಂದು ಬಿಡಿಸಲಾಗದ ಒಗಟಿನ ಪ್ರಶ್ನೆಯಾಗಿದೆ. ಭಾರತೀಯರು ಪ್ರಾಚೀನ ಕಾಲದಿಂದಲೂ "ವೇದಗಳು ಅಪೌರುಷೇಯವಾದವು. ಯಾವ ಮನುಷ್ಯನೂ ವೇದಗಳನ್ನು ರಚಿಸಲಿಲ್ಲ. ಇವು ಅನಾದಿಕಾಲದಿಂದ ಇವೆ" ಎಂದು ತಿಳಿಯುತ್ತಾ, ಸಾರುತ್ತಾ ಬಂದಿರುವರು. ಈ ದೃಷ್ಟಿಯಿಂದ ನಿತ್ಯವಾದ ವೇದಗಳ ಕಾಲವನ್ನು ವಿಮರ್ಶಿಸುವ, ನಿರ್ಣಯಿಸುವ ಆವಶ್ಯಕತೆಯೇ ಬರುವುದಿಲ್ಲ.

ಆದರೆ ಪಾಶ್ಚಿಮಾತ್ಯ ವಿದ್ವಾಂಸರು ಮತ್ತು ಪಾಶ್ಚಾತ್ಯ ವಿದ್ಯಾ ವಿಶಾರದರಾದ ಭಾರತೀಯರನೇಕರು ಮೇಲಿನ ಸಿದ್ಧಾಂತವನ್ನು ನಂಬುವುದಿಲ್ಲ. ನಮ್ಮ ಭಾರತೀಯರು ಅನಾದಿಯಾದ, ಅಪೌರುಷೇಯವಾದ ಮಂತ್ರಗಳನ್ನು ಕಂಡುಹಿಡಿದವರು ಋಷಿಗಳು ಎಂದು ಹೇಳಿದರೆ ಇವರು ಈ ಮಂತ್ರಗಳನ್ನು ರಚಿಸಿದವರು ಋಷಿಗಳೆಂದು ಹೇಳುತ್ತಾರೆ. ಈ ದೃಷ್ಟಿಯಿಂದ ಇವರು ವೇದಗಳ ಕಾಲನಿರ್ಣಯ ಮಾಡುವುದಕ್ಕೆ ವಿವಿಧ ಮುಖವಾಗಿ ಪ್ರಯತ್ನ ಮಾಡಿದ್ದಾರೆ. ಮತ್ತು ಆ ಪ್ರಯತ್ನದಲ್ಲಿ ಬಹುಮಟ್ಟಿಗೆ ವಿಫಲರಾಗಿದ್ದಾರೆ. ಇವರ ಅಭಿಪ್ರಾಯಗಳನ್ನು, ವಿಚಾರದ ರೀತಿಗಳನ್ನು

ಇಂದಿನವರಾದ ನಾವು ಸ್ವಲ್ಪ ತಿಳಿದು ವಿಚಾರಮಾಡುವದು ಅವಶ್ಯಕವೆನಿ ಸುವುದರಿಂದ ವೇದಗಳ ರಚನಾ ಕಾಲದ ಬಗ್ಗೆ ಯಾರು ಯಾರು ಯಾವ ರೀತಿ ಅಭಿಪ್ರಾಯ ಪಟ್ಟಿದ್ದಾರೆಂಬುದನ್ನು ಸ್ವಲ್ಪ ವಿವರಿಸುವ.

## ಆಧುನಿಕ ದೃಷ್ಟಿಯಿಂದ

ಪಾಶ್ಚಿಮಾತ್ಯ ವಿದ್ವಾಂಸರು ವೇದಗಳ ರಚನಾ ಕಾಲವನ್ನು ನಿರ್ಣಯಿಸುವಾಗ ವೇದಗಳ ಭಾಷೆ, ಶೈಲಿ, ವೇದಗಳಲ್ಲಿರುವ ದೇವತೆಗಳು ಆಮೇಲೆ ಕಾಣಿಸಿಕೊಂಡ ಹೊಸದೇವತೆಗಳ ಕಲ್ಪನೆ ಮತ್ತು ಪರಸ್ಪರ ವೇದ ಗಳಲ್ಲಿ ಕಾಣಬರುವ ಮಂತ್ರಗಳು, ದೇವತೆಗಳ ರೂಪಾಂತರ ಪ್ರಾಪ್ತಿಯೇ ಮೊದಲಾದ ದೃಷ್ಟಿಗಳನ್ನು ಪ್ರಧಾನವಾಗಿ ಮುಂದಿಟ್ಟುಕೊಂಡು ವೇದಗಳ ರಚನಾ ಕಾಲವನ್ನು ಶೋಧಿಸಲು ಪ್ರಯತ್ನಪಟ್ಟಿದ್ದಾರೆ. ಈ ತರಹದ ವಿಚಾರ ದೃಷ್ಟಿಯಿಂದ ವಿಮರ್ಶಿಸಿ ವೇದಗಳಲ್ಲಿ ಋಗ್ವೇದವೇ ಎಲ್ಲಕ್ಕಿಂತಲೂ ಪ್ರಾಚೀನವಾದುದೆಂದು ತಮ್ಮ ಸಿದ್ಧಾಂತವನ್ನು ಹೇಳಿದ್ದಾರೆ. ಭಾರತೀ ಯರ ಕಾವ್ಯ, ನಾಟಕ, ಇತಿಹಾಸ, ಪುರಾಣ, ಸ್ಮೃತಿ, ಸೂತ್ರ, ಧರ್ಮ ಶಾಸ್ತ್ರಗಳೇ ಮೊದಲಾದ ಭಾರತೀಯ ಸಂಸ್ಕೃತಿಯ ಆಕರವಾದ ಸಂಸ್ಕೃತ ವಾಙ್ಮಯದಲ್ಲಿ ವೇದಗಳು ಅತ್ಯಂತ ಪ್ರಾಚೀನವಾದವುಗಳೆಂದು ಈವರೆಗಿನ ಎಲ್ಲಾ ವಿಮರ್ಶಕ ಪಂಡಿತರೂ ಒಮ್ಮುಖದ ಸಿದ್ಧಾಂತಕ್ಕೆ ಬಂದಿ ದ್ದಾರೆ. ವೇದಗಳ ರಚನಾ ಕಾಲದ ವಿಷಯದಲ್ಲಿ ಅನೇಕರು ಅನೇಕ ವಿಧವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರೂ, ವೇದಗಳ ಕಾಲವನ್ನು ಇದೇ ಎಂದು ನಿರ್ಣಯಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ವೇದ ಗಳಲ್ಲಿ ಋಗ್ವೇದವು, ಅದರಲ್ಲಿಯೂ ಋಗ್ವೇದದ ಸಂಹಿತೆಯು ಎಲ್ಲಕ್ಕೂ ಅತ್ಯಂತ ಪ್ರಾಚೀನವಾದುದೆಂದು ನಿಶ್ಚಯಿಸಿಕೊಂಡು ಅದರ ಕಾಲವನ್ನು ಹುಡುಕಲು ವಿಮರ್ಶಕರಾದ ವಿದ್ವಾಂಸರೆಲ್ಲರೂ ಪ್ರಯತ್ನಪಟ್ಟು ವಿಮುಖ ರಾಗಿದ್ದಾರೆ, ವಿಫಲರಾಗಿದ್ದಾರೆ. ಇದರಲ್ಲಿ ಭಾರತೀಯ ಸಂಸ್ಕೃತಿ ಮತ್ತು ಸಂಸ್ಕೃತ ವಾಙ್ಮಯದ ಬಗ್ಗೆ ಅನೇ ವರ್ಷಗಳವರೆಗೆ ಪರಿಶ್ರಮ ಪಟ್ಟು, ವಿಮರ್ಶೆ ಮಾಡಿದವರಲ್ಲಿ ಮುಖ್ಯನಾದವನು ಜರ್ಮನ್ ದೇಶದ

ಪ್ರಸಿದ್ಧ ವಿದ್ವಾಂಸನಾದ "ಮೋಕ್ಷಮುಲ್ಲರ" ಎಂಬ ಪಂಡಿತನು. ಇವನ ವಿಚಾರ ಸರಣಿಯನ್ನು ಮೊದಲು ತಿಳಿಯುವ.

"ಪ್ರಾಚೀನಭಾರತದ ಚರಿತ್ರೆಯನ್ನೂ, ಸಂಸ್ಕೃತಿಯ ಇತಿಹಾಸವನ್ನೂ, ತಿಳಿಯಲು, ಶೋಧಿಸಲು, ಇತಿಹಾಸಕಾಲಕ್ಕಿಂತ (ಕ್ರಿ.ಪೂ. ೫ನೇಯ ಶತಮಾನ) ಹಿಂದಿನ ಆಧಾರಗಳಾವುವೂ ದೊರೆಯುವುದಿಲ್ಲ. ಇತಿಹಾಸ ಕಾಲದಲ್ಲಿ ದೊರೆಯುವ ಆಧಾರಗಳಮೇಲೆ ಅದರ ಹಿಂದಿನ ಸಂಸ್ಕೃತಿ ಸಾಹಿತ್ಯಗಳನ್ನೂ, ಅವುಗಳ ಕಾಲಗಳನ್ನೂ ಊಹಿಸಬೇಕಾಗುತ್ತದೆ. ಇತಿಹಾಸಕಾಲದಲ್ಲಿಯಾದರೂ ಸಿಗುವ ಆಧಾರಗಳು ಅನಿಶ್ಚಿತನಾದವುಗಳು. ಇಂತಹ ಆಧಾರಗಳಮೇಲಿಂದ ವಿಮರ್ಶಿಸುವುದಾದರೆ ನಮಗೆ ಪ್ರಧಾನವಾಗಿ ಮೂರು ಆಧಾರ ಸ್ತಂಭಗಳು ದೊರೆಯುತ್ತವೆ. ೧) ಬ್ರಾಹ್ಮಣ ಮತ್ತು ಜೈನರ ಧರ್ಮಗ್ರಂಥಗಳು ೨) ಶಿಲಾಶಾಸನಗಳು, ತಾಮ್ರಶಾಸನಗಳು, ನಾಣ್ಯಗಳು, ಮತ್ತು ಇವುಗಳಲ್ಲಿರುವ ಲಿಪಿಗಳು. ೩) ಗ್ರೀಕ್, ಚೀನಾ, ಮೊದಲಾದ ಹೊರದೇಶದವರು ಭಾರತಕ್ಕೆ ಬಂದಾಗ ಬರೆದುಕೊಂಡು ಹೋದ ಲೇಖನಗಳು, ವರದಿಗಳು, ದಿನಚರಿಗಳು, ಟಿಪ್ಪಣಿಗಳು. ಇವು ಮೂರು ಮುಖ್ಯ ಆಧಾರಗಳಮೇಲೆ ಕಾಲನಿರ್ಣಯವನ್ನು ಮಾಡಬೇಕಾಗುತ್ತದೆ.

ಮೇಲಿನ ಮೂರು ಅಧಾರಗಳ ದೃಷ್ಟಿಯಿಂದ ಹೇಳುವುದಾದರೆ ಋಗ್ವೇದದ ರಚನಾಕಾಲವು, ಕ್ರಿ. ಪೂ. ೧೨೦೦ಕ್ಕಿಂತ ಪೂರ್ವವೆಂದು ಮೋಕ್ಷಮುಲ್ಲರಭಟ್ಟಾಚಾರ್ಯನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಇವನ ವಿಚಾರಕ್ರಮವನ್ನು ಕೆಳಗಿನಂತೆ ಸಂಗ್ರಹಿಸಬಹುದು.

ಕಥಾ ಸರಿತ್ಸಾಗರ ಗ್ರಂಥವನ್ನು ಬರೆದ ಸೋಮದೇವಭಟ್ಟನ (ಕ್ರಿ. ಶ. ೧೦೬೬) ಋಗ್ವೇದ, ಸಾಮವೇದಗಳ ವಿಷಯವನ್ನು ತಿಳಿಸುವ "ಸರ್ವಾನುಕ್ರಮಣಿಕಾ" ಎಂಬ ಗ್ರಂಥವನ್ನು ಬರೆದ ವರರುಚಿಯು ಕಾತ್ಯಾಯನ ಮುನಿಗಿಂತ ಬೇರೆಯವನು ಎಂದು ಹೇಳಿರುವನು. ಕಾತ್ಯಾಯನ ಮತ್ತು ಶೌನಕಾಚಾರ್ಯರು ಒಂದೇ ಶಾಖೆಯವರಿರಬೇಕೆಂದು ತೋರುತ್ತದೆ. ಷಡ್ಗುರುಶಿಷ್ಯನೆಂಬಾತನು ಬರೆದ ಸರ್ವಾನುಕ್ರಮಣಿಕಾ ಗ್ರಂಥದ

ವ್ಯಾಖ್ಯಾನವನ್ನು ನೋಡಿದರೆ ಪತಂಜಲಿಯು ಶೌನಕಾಚಾರ್ಯರಿಂದ ನಾಲ್ಕನೆಯ ತಲೆಯವನೆಂದು ತಿಳಿದು ಬರುತ್ತದೆ. ಸೋಮದೇವಭಟ್ಟನು ವರರುಚಿಯು ಪಾಟಲೀಪುತ್ರದ (ಪಾಟನಾ) ದೊರೆಯಾದ ನಂದನ ಮಂತ್ರಿಯು ಎಂದು ಹೇಳಿರುವನು. ಆದ್ದರಿಂದ ನಂದರಾಜರ ಕಾಲವು ಯಾವುದೆಂಬುದನ್ನು ಮೊದಲು ನಿರ್ಣಯಿಸಬೇಕಾದುದು ಆವಶ್ಯಕವಾಗುತ್ತದೆ.

ಭಾರತೀಯರ ಚರಿತ್ರೆಗಳನ್ನು ನಿರ್ಣಯಿಸುವುದಕ್ಕೆ ಮೇಲಿನ ಮೂರು ಆಧಾರಗಳ ಜೊತೆಗೆ ಬುದ್ಧ ಮತ್ತು ಅಶೋಕ ಇವರಿಬ್ಬರ ಶಕಗಳು ಸಹಾಯವಾಗುತ್ತವೆ. ಇವುಗಳಲ್ಲಿ ಮೊದಲಿನದಾದ ಬುದ್ಧನ ನಿರ್ಯಾಣವು ಕ್ರಿ. ಪೂ. ೪೮೩ರಲ್ಲಿ ಎಂದು ನಿರ್ಣಯವಾಗಿದೆ. ಅಶೋಕಚಕ್ರವರ್ತಿಯ ಪಟ್ಟಾಭಿಷೇಕವು ಕ್ರಿ. ಪೂ. ೨೭೦ರಲ್ಲಿ ಆಯಿತೆಂಬುದು ಸಹ ನಿರ್ಣಯವಾಗಿಯೇ ಇದೆ. ಅಶೋಕನು ಮೌರ್ಯವಂಶದ ಚಂದ್ರಗುಪ್ತ ಮಹಾರಾಜನ ಮೊಮ್ಮಗನೆಂದು ಸಹ ಸಿದ್ಧವಾಗಿದೆ. ವರರುಚಿಯು ನಂದರಾಜನ ಮಂತ್ರಿಯಾಗಿದ್ದು, ಚಂದ್ರಗುಪ್ತನು ನಂದರ ಸಮಕಾಲೀನನಾದುದರಿಂದಲೂ, ಚಂದ್ರಗುಪ್ತನು ಅಶೋಕನ ಪಿತಾಮಹನಾದುದರಿಂದಲೂ, ಚಂದ್ರಗುಪ್ತನ ಸಮಕಾಲಿಕನಾದ ವರರುಚಿಯ ಕಾಲವು ಸುಮಾರು ಕ್ರಿ. ಪೂ. ೩೭೫ರಿಂದ ೩೫೦ರ ಮಧ್ಯಕಾಲವಿರಬೇಕೆಂದು ಊಹಿಸಬೇಕಾಗುತ್ತದೆ. ಇದಲ್ಲದೆ ಪತಂಜಲಿಯ ಕಾಲವು ಕ್ರಿ.ಪೂ. ಎರಡನೆಯ ಶತಮಾನವಿರಬೇಕೆಂದು ಚರಿತ್ರಕಾರರು ನಿರ್ಣಯಿಸುತ್ತಾರೆ. ಆದ್ದರಿಂದ ಪತಂಜಲಿಯ ಹಿಂದಿನ ನಾಲ್ಕನೆ ತಲೆಮಾರಿನವನಾದ ಶೌನಕನು ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಇದ್ದನೆಂದು ಊಹಿಸಬೇಕಾಗುತ್ತದೆ. ಹೀಗೆ ವಿಚಾರಮಾಡಿ ಹೇಳುವುದಾದರೆ ಸೂತ್ರಕಾರ ಕಾತ್ಯಾಯನ ಮತ್ತು ಈ ಕಾತ್ಯಾಯನನಿಗೀತ ಆಧುನಿಕನಾದ ಶೌನಕಾಚಾರ್ಯ; ಇವರಿಬ್ಬರ ಅಂತರದ ಮಧ್ಯಕಾಲವು ಸೂತ್ರಗ್ರಂಥಗಳ ಕಾಲವೆಂದು ಹೇಳಬೇಕಾಗುತ್ತದೆ. ಅಂದರೆ, ಕ್ರಿ. ಪೂ. ಆರನೆಯ ಶತಮಾನದಿಂದ ಮೊದಲ್ಗೊಂಡು, ಕ್ರಿ. ಪೂ. ಎರಡನೆಯ ಶತಮಾನದವರೆಗಿನ ಮಧ್ಯಕಾಲವು ಸೂತ್ರಗ್ರಂಥಗಳ ನಿರ್ಮಾಣ ಕಾಲವಾಗಿರಬೇಕೆಂದು ನಿರ್ಣಯವಾಗುತ್ತದೆ. ಪರಿಶಿಷ್ಟ ಗ್ರಂಥಗಳ ಭಾಷಾಶೈಲಿಯು

ಸೃಷ್ಟಿಯಿಂದಲೂ, ಸೂತ್ರಗ್ರಂಥಗಳ ರಚನಾಕಾಲವು ಇದೇ ಇರಬೇಕೆಂಬ ಅಭಿಪ್ರಾಯಕ್ಕೆ ಪುಷ್ಟಿಯು ದೊರೆಯುತ್ತದೆ. ಇದೇ ಸಮಯದಲ್ಲಿ ಉದಯ ಹೊಂದಿದ ಬೌದ್ಧಮತವನ್ನು ಖಂಡಿಸುವುದಕ್ಕೆ ಅತ್ಯಂತ ಸ್ಪಷ್ಟವಾದ ಪ್ರಭಾವಶಾಲಿಯಾದ ಬ್ರಾಹ್ಮಣ ಮತದ ಗ್ರಂಥಗಳ ಆವಶ್ಯಕತೆಯು ಇದ್ದಿತು. ಸೂತ್ರಗ್ರಂಥಗಳು ಸರಳವಾಗಿಯೂ, ಸ್ಪಷ್ಟವಾದ ಅಭಿಪ್ರಾಯಯುತವಾಗಿಯೂ, ಅದಕ್ಕೆ ತಕ್ಕ ಭಾಷಾಶೈಲಿಯುತವಾಗಿಯೂ ರಚಿತವಾಗಿವೆ.

ಈ ಸೂತ್ರ ಗ್ರಂಥಗಳ ಕಾಲಕ್ಕಿಂತ ಕಡಿಮೆ ಎಂದರೆ ಎರಡು ಶತಮಾನಗಳ ಪೂರ್ವದಲ್ಲಿ, ಎಂದರೆ, ಕ್ರಿ. ಪೂ. ಎಂಟನೆ ಶತಮಾನದಿಂದ ಆರನೆಯ ಶತಮಾನದ ಅಂತರದ ಕಾಲದಲ್ಲಿ ಬ್ರಾಹ್ಮಣ ಗ್ರಂಥಗಳು ನಿರ್ಮಿತವಾಗಿರಬೇಕು. ಇದಕ್ಕಿಂತ ಎರಡು ಶತಮಾನಗಳ ಪೂರ್ವದಲ್ಲಿ ಅಂದರೆ ಕ್ರಿ. ಪೂ ೧೦೦೦ ದಿಂದ ಎಂಟನೆ ಶತಮಾನದ ಅಂತರದ ಕಾಲವು, ಮಂತ್ರಗಳ ರಚನಾ ಕಾಲವಿರಬೇಕು. ಇದಕ್ಕಿಂತ ಎರಡು ಶತಮಾನಗಳ ಅಂದರೆ ಕ್ರಿ. ಪೂ. ೧೨೦೦ ರಿಂದ ೧೦೦೦ ವರ್ಷದ ಅಂತರದ ಕಾಲದಲ್ಲಿ ಛಂದಸ್ಸುಗಳ ಕಾಲವಿರಬೇಕು. ಮಂತ್ರ, ಛಂದಸ್ಸುಗಳ ಅಂತರದ ಕಾಲವು ಇದು ಕೇವಲ ಕಡಿಮೆ ಎಂದು ತೋರಿ ಒಪ್ಪಲು ಸಾಧ್ಯವಿಲ್ಲವೆಂದು ಹೇಳುವುದಾದರೆ ಮತ್ತೆ ಮುನ್ನೂರು ವರ್ಷಗಳನ್ನು ಛಂದಸ್ಸಿನ ಕಾಲಕ್ಕೆ ಸೇರಿಸಿಕೊಂಡರೆ ಕಿ. ಪೂ. ೧೫೦೦ ರ ಕಾಲವು ಛಂದಸ್ಸಿನ ಕಾಲವೆಂದು ಹೇಳಬಹುದು." ಎಂದು ವೇದಗಳ ರಚನಾ ಕಾಲದ ಬಗ್ಗೆ ಜರ್ಮನಿಯ ಪಂಡಿತನಾದ ಮೋಕ್ಷಮುಲ್ಲರ ಭಟ್ಟನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

ಇವನ ಅಭಿಪ್ರಾಯವನ್ನು ಒಪ್ಪದ ಕೆಲವು ಪಂಡಿತರು ಇವನ ಸಿದ್ಧಾಂತದ ಮೇಲೆ ಮತ್ತು ಇವನ ಸಿದ್ಧಾಂತಕ್ಕೆ ತಳಹದಿಯ ಆಧಾರಗಳ ಮೇಲೆ ಕೆಲವು ಆಕ್ಷೇಪಗಳನ್ನು ಎತ್ತಿರುವರು.

೧) ಭಾಷಾಶೈಲಿಯನ್ನು ಮಾತ್ರ ನೋಡಿ ಯಾವುದರ ಕಾಲವನ್ನೂ ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಭಾಷಾಶೈಲಿಯು ಗ್ರಂಥ ಕರ್ತೃವಿನ ಪಾಂಡಿತ್ಯ ಮತ್ತು ಸಾಹಿತ್ಯದ ಅಭ್ಯಾಸ, ಪರಿಚಯಗಳನ್ನು ಅವಲಂಬಿಸಿಕೊಂಡಿರುತ್ತದೆ. ಅನೇಕ ಶಾಸ್ತ್ರಗಳನ್ನು ಓದಿ ಕಾವ್ಯಗಳನ್ನು ಬರೆದರೆ ಆವನ ಕಾವ್ಯವು

ಪ್ರೌಢವಾದ ಭಾಷಾಶೈಲಿಯಿಂದ ಕೂಡಿರುತ್ತದೆ. ಆದರಂತೆಯೇ ಅಲಂಕಾರಸಾಹಿತ್ಯಗಳನ್ನು ಹೆಚ್ಚಾಗಿ ಓದಿದ ಒಬ್ಬನು ಶಾಸ್ತ್ರವನ್ನು ಬರೆದರೆ ಅವನು ಬರೆದ ಶಾಸ್ತ್ರದ ಭಾಷೆಯು ಸ್ವಲ್ಪ ಸರಳವಾಗುವುದು. ಆದ್ದರಿಂದ ಭಾಷಾಶೈಲಿಯು ಕಾಲವಿಮರ್ಶೆಗೆ ಸಹಾಯವಾಗುವುದಿಲ್ಲ.

೨) ಶ್ರೌತಸೂತ್ರಗಳನ್ನು ಬರೆದ ಕಾತ್ಯಾಯನನೂ, ವ್ಯಾಕರಣದ ವಾರ್ತಿಕಕಾರನಾದ ವರರುಚಿಯೂ, ಇಬ್ಬರೂ ಒಂದೇ ಎಂದು ಹೇಳುವುದಕ್ಕೆ ಸರಿಯಾದ ಚರಿತ್ರೆಯ ಆಧಾರಗಳಾವುವೂ ದೊರೆತಿಲ್ಲ.

೩) ಸೂತ್ರಗ್ರಂಥಗಳ ಕಾಲಕ್ಕೂ, ಬ್ರಾಹ್ಮಣಗ್ರಂಥಗಳ ಕಾಲಕ್ಕೂ; ಬ್ರಾಹ್ಮಣಗ್ರಂಥಗಳ ಕಾಲಕ್ಕೂ, ಮಂತ್ರಗಳಕಾಲಕ್ಕೂ; ಮಂತ್ರಗಳ ಕಾಲಕ್ಕೂ ಛಂದಸ್ಸುಗಳ ಕಾಲಕ್ಕೂ ಮಧ್ಯದಲ್ಲಿ ಎರಡುನೂರು ವರ್ಷಗಳ ಅಂತರವಿದೆ ಎನ್ನುವುದಕ್ಕೆ ನಿಯಾಮಕವಾವುದೂ ಇಲ್ಲ. ೫೦೦ ವರ್ಷಗಳಕಾಲ ಅಂತರಗಳು ಏಕಿರಬಾರದು?

೪) ಇನ್ನೊಂದು ವಿಶೇಷವೇನೆಂದರೆ ಬ್ರಾಹ್ಮಣ ಗ್ರಂಥಗಳ ನಂತರ ಆರಣ್ಯಕ ಉಪನಿಷತ್ತುಗಳ ಕಾಲವು ಬರುತ್ತದೆ. ಇವುಗಳ ಮಧ್ಯಕಾಲವು ಎಷ್ಟೆಷ್ಟು ಅಂತರವಿರಬೇಕೆಂದು ಹೇಗೆ ಹೇಳುವುದು ?. ಎಂದು ಕೇಳಿ ಮೋಕ್ಷಮುಲ್ಲರಭಟ್ಟನ ಸಿದ್ಧಾಂತವನ್ನು ಬಹುಜನರು ಅಲ್ಲಗಳೆದಿದ್ದಾರೆ.

೧) ಮೇಲಿನ ಆಕ್ಷೇಪಗಳನ್ನು ಮಾಡಿಕೊಂಡು " ಹೆಟ್ಟಿ " ಎಂಬ ವಿದ್ವಾಂಸನು ಋಗ್ವೇದದ ಕಾಲವನ್ನು ಕ್ರಿ. ಪೂ. ೨೦೦೦ ವರ್ಷಗಳಿಂದ ೧೫೦೦ ವರ್ಷಗಳ ಮಧ್ಯಕಾಲವಾಗಿರಬೇಕೆಂದು ನಿರ್ಣಯ ಮಾಡಿದ್ದಾನೆ.

೨) ಹಾಗ್ ಎಂಬ ಪಾಶ್ಚಿಮಾತ್ಯ ಪಂಡಿತನು ಹೆಟ್ಟಿಯ ಅಭಿಪ್ರಾಯವನ್ನು ಒಪ್ಪಿಕೊಂಡು ವೇದಾಂಗ ಜ್ಯೋತಿಷದ ಆಧಾರದ ಮೇಲೆ ಋಗ್ವೇದದ ಕಾಲ ನಿರ್ಣಯ ಮಾಡಲು ಪ್ರಯತ್ನಿಸಿದ್ದಾನೆ. ವೇದಾಂಗ ಜ್ಯೋತಿಷದ ಕಾಲವು ಕ್ರಿ.ಪೂ.೮೦೦ ಎಂದು ನಿರ್ಣಯಿಸಿ ಬ್ರಾಹ್ಮಣಗ್ರಂಥಗಳ ಕಾಲವು ಕ್ರಿ. ಪೂ. ೧೪೦೦ ರಿಂದ ೧೨೦೦ ರ ಅಂತರದ ಕಾಲವಿರಬೇಕೆಂದೂ ಸಂಹಿತೆಗಳ ಕಾಲವು ಕ್ರಿ. ಪೂ. ೨೦೦೦ ರಿಂದ ೧೪೦೦ ರ ಕಾಲವಿರಬೇಕೆಂದೂ ಛಂದಸ್ಸುಗಳ ರಚನಾ ಕಾಲವು ಕ್ರಿ. ಪೂ.೨೪೦೦ ರಿಂದ ೨೦೦೦ ದ ಮಧ್ಯಕಾಲವಿರಬೇಕೆಂದೂ ಸಹ ಊಹಿಸಿದ್ದಾನೆ.

೩) ಶಂಕರಬಾಲಕೃಷ್ಣ ದೀಕ್ಷಿತರು ಶತಪಥ ಬ್ರಾಹ್ಮಣದ ಒಂದು ವಾಕ್ಯ ಸಮುದಾಯವನ್ನು ಆಧಾರವಾಗಿಟ್ಟುಕೊಂಡು ಶತಪಥ ಬ್ರಾಹ್ಮಣದ ರಚನಾ ಕಾಲವು ಕ್ರಿ.ಪೂ. ಮೂರುಸಾವಿರ ವರ್ಷಗಳ ಪೂರ್ವವೆಂದು ಹೇಳುತ್ತಾರೆ. ಇದಕ್ಕಿಂತ ಎರಡು ಶತಮಾನಗಳ ಪೂರ್ವದಲ್ಲಿ ತೈತ್ತಿರೀಯ (ಕೃಷ್ಣಯಜು ರ್ವೇದ) ಸಂಹಿತೆಯ ಕಾಲವು. ಋಗ್ವೇದದ ಕಾಲವು ಇದಕ್ಕಿಂತಲೂ ಅತ್ಯಂತ ಪ್ರಾಚೀನವಾದುದೆಂದು ಊಹಿಸಿದ್ದಾರೆ.

೪) ತಿಲಕರು:- ಲೋಕಮಾನ್ಯ ಬಾಲಗಂಗಾಧರತಿಲಕರು ಋಗ್ವೇದದಲ್ಲಿ ಸೂಚಿತವಾದ ನಕ್ಷತ್ರಗಳ ಆಧಾರದಮೇಲೆ ತಾವು ಬರೆದ "ಓರಿಯನ್" ಎಂಬ ಗ್ರಂಥದಲ್ಲಿ ಋಗ್ವೇದದ ಕಾಲ ವಿಚಾರವನ್ನು ಮಾಡಿದ್ದಾರೆ. ಅದರಲ್ಲಿ ಜ್ಯೋತಿಷ ಶಾಸ್ತ್ರದ ಆಧಾರ ಮತ್ತು ಇತರ ಯುಕ್ತಿಗಳಿಂದ ಆಳವಾಗಿ ವಿಚಾರ ಮಾಡಿ ಕ್ರಿ. ಪೂ. ೬೦೦೦ ವರ್ಷಗಳಿಂದ ಕ್ರಿ. ಪೂ. ೪೦೦೦ ವರ್ಷಗಳ ಮಧ್ಯ ಕಾಲದಲ್ಲಿ ಋಗ್ವೇದ ಮಂತ್ರಗಳ ರಚನಾಕಾಲವಿರಬೇಕು; ಉಳಿದ ವೇದ ಗಳ ಕಾಲವು ಕ್ರಿ. ಪೂ. ೪೦೦೦ ದಿಂದ ೩೦೦೦ ವರ್ಷಗಳ ಮಧ್ಯದ ಒಂದು ಸಾವಿರ ವರ್ಷವು. ಬ್ರಾಹ್ಮಣ ಗ್ರಂಥಗಳಲ್ಲಿ ಶತಪಥ ಬ್ರಾಹ್ಮಣವು ಅತ್ಯಂತ ಪ್ರಾಚೀನವಾದುದು. ಅದರ ಕಾಲ ಕ್ರಿ.ಪೂ. ೨೫೦೦ ವರ್ಷಗಳಿಗಿಂತ ಹಿಂದಿರ ಬೇಕು ಮತ್ತು ಉಳಿದ ಬ್ರಾಹ್ಮಣಗ್ರಂಥಗಳು ಕ್ರಿ. ಪೂ. ೨೫೦೦ ರಿಂದ ೧೪೦೦ ವರ್ಷಗಳ ಮಧ್ಯಕಾಲದಲ್ಲಿ ರಚಿತವಾಗಿರಬೇಕು. ಕ್ರಿ ಪೂ. ೧೪೦೦ರಿಂದ ಕ್ರಿ ಪೂ. ೫೦೦ ವರ್ಷಗಳ ಮಧ್ಯಕಾಲದಲ್ಲಿ ಸೂತ್ರಗ್ರಂಥಗಳು ರಚಿತವಾಗಿರ ಬೇಕೆಂದು ತಿಲಕರು ಅಭಿಪ್ರಾಯಪಟ್ಟಿದ್ದಾರೆ.

೫) ಜಾಕೋಬಿ ಎಂಬ ಪಾಶ್ಚಿಮಾತ್ಯ ವಿದ್ವಾಂಸನು ತಿಲಕರ ಅಭಿಪ್ರಾ ಯವನ್ನು ಪುಷ್ಟೀಕರಿಸಿ ಋಗ್ವೇದದ ಕಾಲವು ಕ್ರಿ. ಪೂ. ೪೦೦೦ ವರ್ಷಗಳ ಪೂರ್ವದಲ್ಲಿರಬೇಕೆಂದು ಅಭಿಪ್ರಾಯಪಟ್ಟಿದ್ದಾನೆ.

೬) ಡಾಕ್ಟರ್ ಅವಿನಾಶಚಂದ್ರದಾಸರು "ವೇದಗಳಲ್ಲಿ ಭೂಗರ್ಭ ಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಸಿದ್ಧಾಂತಗಳು ದೊರೆಯುತ್ತವೆ. ಅವುಗಳ ಆಧಾ ರದ ಮೇಲೆ ವೇದಗಳ ಕಾಲವನ್ನು ನಿರ್ಣಯಿಸುವುದಾದರೆ ವೇದಗಳ ರಚನಾ

ಕಾಲವು ಲಕ್ಷಾಂತರ ವರ್ಷಗಳ ಪೂರ್ವದ್ದೆಂದು ಹೇಳಬೇಕಾಗುತ್ತದೆ." ಎಂ
ಅಭಿಪ್ರಾಯಪಟ್ಟಿದ್ದಾರೆ.

ಇಂತಹ ವಿವಿಧವಾದ ಪರಸ್ಪರ ವಿರುದ್ಧವಾದ ಅಭಿಪ್ರಾಯಗಳಿಂ
ಕೂಡಿದ ವಿಚಿತ್ರವಾದ ಪರಿಸ್ಥಿತಿಯಲ್ಲಿ ವೇದಗಳ ರಚನಾಕಾಲವನ್ನು ನಿರ್ಣ
ಸುವುದು ಅತ್ಯಂತ ಕಠಿನವಾದ ಕೆಲಸವಾಗಿದೆ. ಅಸಾಧ್ಯವಾದ ಕೆಲಸವಾಗಿ

## ಪ್ರಾಚೀನ ದೃಷ್ಟಿ

ಭಾರತೀಯರು ಪ್ರಾಚೀನ ಕಾಲದಿಂದ ಇಂದಿನವರೆಗೂ ( ಕೆಲ
ಆಧುನಿಕರನ್ನು ಬಿಟ್ಟು ) ಎಲ್ಲರೂ "ವೇದಗಳು ನಿತ್ಯವಾದವುಗಳು. ಅವನ
ಯಾವ ಮನುಷ್ಯರೂ ರಚಿಸಿಲ್ಲ. ಕಾರಣ ಬ್ರಹ್ಮನ (ನಿರಾಕಾರ ವಸ್ತು) ಪ್ರೇ
ಣೆಯಿಂದ, ಕಾರ್ಯಬ್ರಹ್ಮನ (ಚತುರ್ಮುಖ ಬ್ರಹ್ಮ ಅಥವಾ ವಿರಾಡ್ಬ್ರಹ್ಮನ
ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಪ್ರಕಾಶಕ್ಕೆ ಬಂದಿವೆ. ಶಬ್ದ
ಗುಣಾಶ್ರಯವಾದ ಆಕಾಶದಲ್ಲಿ ಅವ್ಯಕ್ತವಾಗಿರುವ ವೇದಗಳನ್ನು ಋಷಿಗಳ
ತಮ್ಮ ತಪೋಮಹಿಮೆಯಿಂದ ಕಂಡು ಹಿಡಿದರು. ಪ್ರಪಂಚವು ಲಯ
ಹೊಂದುವಾಗ ಪ್ರಳಯವಾಗುವಾಗ—ವೇದಗಳು ಸಹ ಇತರ ಪ್ರಪಂಚ
ದಂತೆ ನಿರ್ಗುಣ ಬ್ರಹ್ಮನಲ್ಲಿ ಲಯ ಹೊಂದುತ್ತವೆ.

ತಿರುಗಿ ಸೃಷ್ಟಿಯಾದಮೇಲೆ ಚತುರ್ಮುಖ ಬ್ರಹ್ಮನ ಮುಖಾಂತರ
ವಾಗಿ ವೇದಗಳು ಪ್ರಪಂಚದಲ್ಲಿ ವ್ಯಕ್ತವಾಗಿ ಕ್ರಮೇಣ ವ್ಯವಹಾರಕ್ಕೆ
ಬರುತ್ತವೆ. ಪ್ರಪಂಚದಲ್ಲಿ ಉತ್ಪತ್ತಿಲಯಗಳು ಅನಾದಿಕಾಲದಿಂದ ನಡೆದು
ಬಂದಿರುವುದರಿಂದ ವೇದಗಳು ಅನಾದಿಯಾಗಿವೆ. ಇವರ ಕಾಲ ನಿರ್ಣಯಕ್ಕೆ
ಹೊರಡುವುದು, ಪ್ರಯತ್ನಪಡುವುದು ವೃಥಾ ಶ್ರಮವೆಂದು ಭಾರತೀಯರು
ಸಾಮಾನ್ಯವಾಗಿ ತಿಳಿಯುತ್ತಾರೆ. ಈ ದೃಷ್ಟಿಯಿಂದ ವೇದಗಳಿಗೆ ನಿತ್ಯತ್ವ
ವನ್ನು ಪ್ರತಿಪಾದಿಸುವ ಸನಾತನಭಾರತೀಯವಾದ ಕ್ರಮ, ತರ್ಕಸರಣಿ
ಯನ್ನು ಸ್ವಲ್ಪಮಟ್ಟಿಗಾದರೂ ಭಾರತೀಯರಾದ ಪ್ರತಿಯೊಬ್ಬ ಆಧುನಿಕರೂ
ತಿಳಿಯುವುದು ಅವಶ್ಯವಿದೆ. ಆದ್ದರಿಂದ ಇವರ ವಾದಸರಣಿಯನ್ನು
ಸ್ವಲ್ಪಮಟ್ಟಿಗೆ ವಿಶದೀಕರಿಸುವ.

ಯೋವೈ ಬ್ರಹ್ಮಾಣಂ ವಿದಧಾತಿ ಪೂರ್ವಂ
ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ||
ತಂ ಹ ದೇವಮಾತ್ಮಬುದ್ಧಿಪ್ರಕಾಶಂ
ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ|| (ಮಂತ್ರೋಪನಿಷತ್)

ವಿಶ್ವವ್ಯಾಪಕನಾದ ನಿರ್ಗುಣ ಬ್ರಹ್ಮನು ಸೃಷ್ಟಿಯ ಆರಂಭದಲ್ಲಿ ಚತುರ್ಮುಖ (ಕಾರ್ಯ ಬ್ರಹ್ಮ) ಬ್ರಹ್ಮನನ್ನು ಸೃಷ್ಟಿಸಿದನು. ಅನಂತರ ತನ್ನ ಜ್ಞಾನದ ಪ್ರತಿರೂಪವಾದ ವೇದಗಳನ್ನು ಚತುರ್ಮುಖ ಬ್ರಹ್ಮನಿಗೆ ಕಲಿಸಿದನು. ತನ್ನ ಆತ್ಮಸ್ವರೂಪವನ್ನು ತಿಳಿದುಕೊಳ್ಳಲು ಸಹಾಯಕವಾದ, ಆತ್ಮಸ್ವರೂಪವನ್ನು ತಿಳಿಸುವ ಆ ದೇವನನ್ನು ಮುಮುಕ್ಷುವಾದ ನಾನು ಮರೆಹೋಗುವೆನು; ಎಂದು ಶ್ವೇತಾಶ್ವತರ ಶಾಖೆಯ ಮಂತ್ರೋಪನಿಷತ್ತಿನಲ್ಲಿ ಹೇಳಿದೆ. ಈ ಉಪನಿಷತ್ತಿನ ವಾಕ್ಯದಿಂದ ಸೃಷ್ಟಿಯ ಆರಂಭದಲ್ಲಿ ವಿರಾಡ್ಬ್ರಹ್ಮನು ಜನಿಸಿದನು; ಅವನಿಗೆ ವಿಶ್ವವ್ಯಾಪಿಯಾದ ಬ್ರಹ್ಮವಸ್ತುವು ವೇದಗಳನ್ನು ಉಪದೇಶ ಮಾಡಿತು; ಎಂದು ವ್ಯಕ್ತವಾಗುತ್ತದೆ. ಆರಂಭದಲ್ಲಿ ವೇದಗ್ರಹಣಮಾಡಿದ ವಿರಾಡ್ರೂಪ ಅಥವಾ ಚತುರ್ಮುಖ ಬ್ರಹ್ಮನು ಯಾವ ಸ್ವರೂಪದವನೆಂಬುದನ್ನು ನೋಡುವ.

"ಕ್ಲೇಶಕರ್ಮವಿಪಾಕಾಶಯೈ ಪರಾಮೃಷ್ಟಃ ಪುರುಷವಿಶೇಷಃ ಈಶ್ವರಃ|| "

"ಕ್ಲೇಶದಾಯಕವಾದ ಕರ್ಮಗಳಿಂದುಟಾಗುವ ಪಾಪಪುಣ್ಯಗಳಿಂದ ದೂರನಾದ ಪುರುಷ ವಿಶೇಷನು ಈ ವಿರಾಡ್ಬ್ರಹ್ಮನು" ಎಂದು ಯೋಗದರ್ಶನದಲ್ಲಿ ( ೧-೨೪ ), ಈ ಆದಿ ದೇವನ ಸ್ವರೂಪವನ್ನು ಹೇಳಿದೆ. ಇವನು ಪ್ರಪಂಚದ ಎಲ್ಲಾ ಗುರುಗಳಿಗೂ ಗುರುವಾಗಿದ್ದಾನೆ. ಇವನಿಗೆ ಕಾಲಪರಿಚ್ಛೇದವು ಇರುವುದಿಲ್ಲ.

" ಪೂರ್ವೇಷಾಮಾಪಿ ಗುರುಃ ಕಾಲೇನಾನವಚ್ಛೇದಾತ್ " (೧-೨೬)

ಪ್ರಪಂಚದ ಸೃಷ್ಟಿಯ ಆದಿಯಲ್ಲಿ ಈ ಹಿರಣ್ಯಗರ್ಭನೊಬ್ಬನೇ ಇದ್ದನು.

" ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ '
( ಋ. ಸಂ. ೮ ಅಷ್ಟ, ೭ ಅಧ್ಯಾಯ, ೩ ವರ್ಗ )

ದೇವತೆಗಳಿಗೆ ಆದಿಭೂತನಾದ ಸರ್ವೇಶನಾದ ಬ್ರಹ್ಮನೇ ಮೊದಲನೆಯ

ಶರೀರಿಯು. (ಆದಿಮಾನವನೆಂದು ಬೇಕಾದರೆ ಇಂದಿನವರ ದೃಷ್ಟಿಯಿಂದ ಹೇಳಬಹುದು) ಇವನು ಇದ್ದುದು ಸೃಷ್ಟಿಯ ಆರಂಭದಲ್ಲಿ. ಇವನಿಂದ ಉಳಿದ ದೇವತೆಗಳೆಲ್ಲವೂ ಆವಿರ್ಭವಿಸಿದವು. ಇವನಿಗಿಂತ ಹಿಂದೆ ಬ್ರಹ್ಮ ವಸ್ತುವು ಮಾತ್ರ ಇದ್ದಿತು.

"ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ"||

ಆದಿಭೂತಃ ಸ ದೇವಾನಾಂ ಬ್ರಹ್ಮಾಗ್ರೇ ಸಮವರ್ತತ"||

ಎಂದು ಸ್ಮೃತಿಗಳು ಹೇಳುತ್ತವೆ. ಆದ್ದರಿಂದ ಸೃಷ್ಟಿಯ ಆರಂಭ ಕಾಲದಲ್ಲಿಯೇ ಪ್ರಾದುರ್ಭವಿಸಿದ ಬ್ರಹ್ಮನು ಗ್ರಹಣಮಾಡಿದ ವೇದಗಳು ಸೃಷ್ಟಿಯ ಆರಂಭದಲ್ಲಿಯೇ ಪ್ರಾದುರ್ಭವಿಸಿದವು ಎಂಬುದು ವ್ಯಕ್ತವಾಗುತ್ತದೆ. ಇದನ್ನೇ ಭಾಗವತದ ಮಂಗಲ ಪದ್ಯದಲ್ಲಿ "ತೇನೇ ಬ್ರಹ್ಮ ಹೃದಾಯ ಆದಿಕವಯೇ||" ಬ್ರಹ್ಮನು ಆದಿಕವಿಯಾದುದರಿಂದ ಅವನ ಹೃದಯದಲ್ಲಿ ವೇದಗಳು ವಿಸ್ತಾರಗೊಂಡವು ಎಂದು ಹೇಳಿದೆ. ಈ ವೇದಮಯವಾದ ಋಕ್ಕುಗಳನ್ನು ಗ್ರಹಣಮಾಡುವ ಯೋಗ್ಯತೆಯನ್ನು ಯಜ್ಞದಿಂದ-ತಪಸ್ಸಿನ ಮಹಿಮೆಯಿಂದ ಋಷಿಗಳು ಪಡೆದರು.

ಇಂತಹ ಋಷಿಗಳು ಗ್ರಹಣ ಮಾಡಿದ ವೇದಗಳನ್ನು ಯಾಜ್ಞಿಕರು ಪ್ರವೇಶಿಸಿ ವಿಸ್ತಾರವಾದ ಪದವಿಯನ್ನು ಹೊಂದಿದರು. "ಯಜ್ಞೇನ ವಾಚಃ ಪದವೀಯಮಾಯನ್ ತಾಮನ್ವವಿಂದನ್ನೃಷಿಷು ಪ್ರವಿಷ್ಟಾಂ" ಎಂದು (ಋ.ಸಂ೮ ಅಷ್ಟ ೨ ಅ. ೨೩ ಸೂಕ್ತದಲ್ಲಿ) ಹೇಳಿದೆ. ಯುಗಾಂತ್ಯದಲ್ಲಿ ಅಂತರ್ಹಿತವಾದ (ಕಾರಣಬ್ರಹ್ಮನಲ್ಲಿ ವಿಲೀನವಾದ) ವೇದ ಇತಿಹಾಸಗಳನ್ನು ಮಹರ್ಷಿಗಳು ತಮ್ಮ ತಪಸ್ಸಿನ ಮಹಿಮೆಯಿಂದ ವಿರಾಡ್ಬ್ರಹ್ಮನಿಂದ ಪಡೆದರು ಎಂದು ಸ್ಮೃತಿಗಳಲ್ಲಿ ಹೇಳಿದೆ.

"ಯುಗಾಂತೇಂತರ್ಹಿತಾನ್ವೇದಾನ್ಸೇತಿಹಾಸಾನ್ಮಹರ್ಷಯಃ"

"ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ"||

ಈ ರೀತಿಯ ಮೇಲಿನ ವಿವರಣೆಯಿಂದ ವೇದಗಳೂ, ಸ್ಮೃತಿಗಳೂ, ಸೂತ್ರ ಗ್ರಂಥಗಳೂ ಎಲ್ಲವೂ ಬಹುಮುಖದಿಂದ ವೇದಗಳು ನಿತ್ಯವಾದವುಗಳೆಂದು ಹೇಳುತ್ತವೆಯಾದರೂ, ಸೃಷ್ಟಿಯ ಆದಿಯೇ ವೇದಗಳ ರಚನಾಕಾಲವೆಂದು

ಹಿಂದಿನ ವಿವರಣೆಯಿಂದ ತೋರುತ್ತದೆಯೆಂದು ಹೇಳಲಿಕ್ಕೆ ಬಾರದು.
" ವಾಚಾ ವಿರೂಪ ನಿತ್ಯಯಾ "(ಋ. ಸಂ. ೬-೫-೩೩)
ಮೊದಲಾದ ಮಂತ್ರಗಳಿಂದ ವೇದಗಳಿಗೆ ನಿತ್ಯತ್ವವನ್ನು ವೇದವೇ ಹೇಳಿಕೊಳ್ಳುತ್ತದೆ. ಪೂಜ್ಯನಾದ ಜೈಮಿನಿ ಮುನಿಯು ಪೂರ್ವ ಮೀಮಾಂಸಾ ಸೂತ್ರಗಳಲ್ಲಿ ಇದೇ ಅಭಿಪ್ರಾಯವನ್ನು ಕ್ರೋಢೀಕರಿಸಿ "ಕರ್ಮೈಕೇ ತತ್ರ ದರ್ಶನಾತ್" (೧-೧-೬) (ಅನೇಕ ಕರ್ಮಗಳು ವೇದದಲ್ಲಿ ಕಾಣುವುದರಿಂದ) ಮೊದಲಾದ ಹನ್ನೆರಡು ಸೂತ್ರಗಳಲ್ಲಿ ವೇದಗಳು ಅನಿತ್ಯವೆಂದು ಪೂರ್ವ ಪಕ್ಷವನ್ನು ಮಾಡಿಕೊಂಡು "ನಿತ್ಯಸ್ತು ಸ್ಯಾದ್ದರ್ಶನಸ್ಯ ಪರಾರ್ಥತ್ವಾತ್ " (೧-೧-೧೮) (ಪರಾರ್ಥ ದರ್ಶನಗಳನ್ನು ಮಾಡಿಕೊಡುವುದರಿಂದ ವೇದಗಳು ನಿತ್ಯವಾಗಿವೆ.) ಮೊದಲಾದ ಆರು ಸೂತ್ರಗಳ ವಿವೇಚನೆಯಲ್ಲಿ ವೇದಗಳಿಗೆ ನಿತ್ಯತ್ವವನ್ನು ಸ್ಥಾಪಿಸಿದ್ದಾರೆ. ಇವರಂತೆಯೇ ಉತ್ತರ ಮೀಮಾಂಸಾ ಶಾಸ್ತ್ರದ ಸೂತ್ರ ( ಬ್ರಹ್ಮಸೂತ್ರ ) ಕರ್ತೃಗಳಾದ ಪಾರಾಶರ್ಯ ಮುನಿಗಳು ಶಾಸ್ತ್ರಯೋನಿತ್ವಾಧಿಕರಣದಲ್ಲಿ ವೇದಗಳ ನಿತ್ಯಾನಿತ್ಯತ್ವದ ಬಗ್ಗೆ ವಿವೇಚಿಸಿ ಕೊನೆಗೆ " ಅತ ಏವ ಚ ನಿತ್ಯತ್ವಂ " "ಆದ್ದರಿಂದ ವೇದಗಳು ನಿತ್ಯವಾದವುಗಳು" ಎಂದು ಸಿದ್ಧಾಂತ ಮಾಡಿದ್ದಾರೆ. ನಮ್ಮ ಪ್ರಾಚೀನರು ಈ ರೀತಿಯ ವಾದ ಸರಣಿಯಿಂದ ವೇದಗಳು ನಿತ್ಯವಾದವುಗಳೆಂದು ಸಿದ್ಧ ಮಾಡಿದ್ದರಿಂದಲೇ ಈ ಸೃಷ್ಟಿಯ ಆರಂಭ ಕಾಲವೇ ವೇದಗಳ ರಚನಾ ಕಾಲವೆಂದು ಹೇಳಲು ಬರುವುದಿಲ್ಲ.

ಆದರೆ ಈ ಸಿದ್ಧಾಂತದ ಮೇಲೆ ವೇದಗಳಲ್ಲಿ ಕಾಣಬರುವ ಋಷಿಗಳು, ರಾಜರು, ಇವರ ಕಥೆಗಳು ಹೇಗಾದರೂ, ಎಂದಾದರೂ ಐತಿಹಾಸಿಕವಾಗಿರಬೇಕಾದುದು ಅವಶ್ಯವಿರುತ್ತದೆಂಬ ಆಕ್ಷೇಪವು ಸಹಜವಾಗಿ ಬರುತ್ತದೆ.

"ಉತಾಸಿ ಮೈತ್ರಾವರುಣೋ ವಸಿಷ್ಠೋ-
ರ್ವಶ್ಯಾ ಬ್ರಹ್ಮನ್ಮನಸೋಽಧಿಜಾತಃ||
ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ
ವಿಶ್ವೇದೇವಾಃ ಪುಷ್ಕರೇ ತ್ವಾದದಂತಃ|| (ಋ. ಸಂ.೫, ೩೩೪)

ಮಿತ್ರಾವರುಣನಾದ ಆ ವಸಿಷ್ಠನು ಬ್ರಹ್ಮನ ಮನಸ್ಸಿನಿಂದ ಆ ಊರ್ವಶಿ ಯಲ್ಲಿ ಜನಿಸಿದನು. ಎಂದು ಋಗ್ವೇದದಲ್ಲಿ ಹೇಳಿದೆ. ಇದನ್ನು ಶತಪಥ ಬ್ರಾಹ್ಮಣದಲ್ಲಿಯೂ, ನಿರುಕ್ತದಲ್ಲಿಯೂ ವಿವರವಾಗಿ ವರ್ಣಿಸಿದ್ದಾರೆ. ಇದ ರಂತೆಯೇ ವಿಶ್ವಾಮಿತ್ರನ ವಿಷಯದ ಕಥೆಯು ನಿರುಕ್ತದಲ್ಲಿ ವರ್ಣಿತವಾ ಗಿದೆ. ಇಂದ್ರನು ದಧೀಚಿ ಋಷಿಯ ಅಸ್ಥಿ (ಎಲುಬು) ಯಿಂದ ಮಾಡಿದ ಆಯುಧದಿಂದ ವೃತ್ರಾಸುರನನ್ನು ನಾಶಮಾಡಿದ ಕಥೆಯು ಕೃಷ್ಣಯಜು ರ್ವೇದದ ಬ್ರಾಹ್ಮಣದಲ್ಲಿ ವರ್ಣಿತವಾಗಿದೆ. ಊರ್ವಶೀ ಪುರೂರವರ ಕಥೆಯು ಋಗ್ವೇದದ ಸಂಹಿತೆಯಲ್ಲಿಯೂ, ಇತರ ಬ್ರಾಹ್ಮಣ ಗ್ರಂಥಗಳಲ್ಲಿಯೂ ವರ್ಣಿತವಾಗಿದೆ. ಇವುಗಳಂತೆಯೆ ಇನ್ನೂ ಅನೇಕ ಕಥೆಗಳು, ಋಷಿಗಳೂ ರಾಜರೂ ವೇದಗಳಲ್ಲಿ ಕಾಣುತ್ತಾರೆ. ಇದರಿಂದ ವೇದಗಳು ನಿತ್ಯವಾದ ವುಗಳೆಂದು ಹೇಳಲು ಹೇಗೆ ಸಾಧ್ಯ ? ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಬರುವ ಪುರುಷರಂತೆ, ವ್ಯಕ್ತಿಗಳಂತೆ ಇವರೂ ಸಹ ವ್ಯಕ್ತಿ ಗಳಾಗಿರಬೇಕಾಗುತ್ತದೆ. ಇವುಗಳ ವಿಷಯವನ್ನು ಚಿತ್ರಿಸುವ, ವರ್ಣಿ ಸುವ ವೇದಗಳು ಅವರ ಅನಂತರದವಾಗಿರಬೇಕಾಗುತ್ತವೆ. ಅಂದಮೇಲೆ ವೇದಗಳು ನಿತ್ಯವಾಗಿರುವುದು ಸಾಧ್ಯವಿಲ್ಲವೆಂಬ ಆಕ್ಷೇಪಗಳು ಸಹ ಸಹಜ ವಾಗಿ ಬಂದು ನಿಲ್ಲುವುದು ಸ್ವಾಭಾವಿಕವಿದೆ.

ಆದರೆ ವೇದೋಕ್ತವಾದ ವಸಿಷ್ಠಾದಿ ವ್ಯಕ್ತಿಗಳು ಕೆಲವು ಐತಿಹಾ ಸಿಕ ವ್ಯಕ್ತಿಗಳಿಗೆ ಹೊಂದಿಕೊಳ್ಳುವಂತೆ ಕಂಡರೂ ವೇದೋದಿತವಾದ ವ್ಯಕ್ತಿ ಗಳು ಸಾಂಕೇತಿಕವಾದವುಗಳೆಂದು ವೇದಾರ್ಥಗಳನ್ನು ಉಪಪಾದನೆ ಮಾಡುವ ಕೆಲವು ಪ್ರಾಚೀನ ಕಾಲದ ಗ್ರಂಥಗಳು ವಿವರಿಸುತ್ತವೆ. ನಿರುಕ್ತ ಮತ್ತು ಪೂರ್ವೋತ್ತರ ಮೀಮಾಂಸಾ ಗ್ರಂಥಗಳಲ್ಲಿ ವಸಿಷ್ಠಾದಿ ಶಬ್ದ ಗಳು ಮತ್ತು ಇಂತಹ ಶಬ್ದಗಳಿಂದ ಕೂಡಿದ ವೇದಮಂತ್ರಗಳು, ಬ್ರಾಹ್ಮ ಣಗಳು ಸಹ ನಿತ್ಯವಾದವುಗಳೆಂದು ವಿವರಣೆ ಮಾಡಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಛಾಂದೋಗ್ಯೋಪನಿಷತ್ತಿನಲ್ಲಿ

"ಯೋಹವೈ ವಸಿಷ್ಠಂ ವೇದ ವಸಿಷ್ಠೋ ಹ
ಸ್ವಾನಾಂ ಭವತಿ ವಾಗ್ವಾವ ವಸಿಷ್ಠಃ"

'ಉತ್ತಮವಾದ ವಾಸಸ್ಥಾನ, ಆವರಣ, ಸಂಪತ್ತುಗಳನ್ನು ಕೊಡುವವನನ್ನು ಯಾವನು ಸರಿಯಾಗಿ ತಿಳಿಯುತ್ತಾನೆಯೋ ಅವನು ವಸಿಷ್ಠನಾಗುವನು ಎಂದರೆ ಸಂಪತ್ಪ್ರದನಾಗುವನು.' ಎಂದು ವಸಿಷ್ಠ ಶಬ್ದಾರ್ಥವನ್ನು ವಿವರಿಸಿದ್ದಾರೆ.

ವೇದದಲ್ಲಿರುವ ಇಂದ್ರ ವೃತ್ರಾಸುರರ ಯುದ್ಧದ ವರ್ಣನೆಯ ಬಗ್ಗೆ ನಿರುಕ್ತದಲ್ಲಿ ಇಂದ್ರಶತ್ರುವಾದ ವೃತ್ರನು ಮೇಘವು "ಇಂದ್ರ ಶತ್ರುಃ ವೃತ್ರೋ ಮೇಘಃ" ಎಂದು ಬರೆದಿದೆ. ತ್ವಷ್ಟೃವಿನ ಮಗನಾದ ವೃತ್ರನು ಅಸುರನೆಂದು ಇತಿಹಾಸ ಪುರಾಣಾದಿಗಳು ಹೇಳುವುವು. ಜಲ ಮತ್ತು ತೇಜಸ್ಸುಗಳ ಮಿಶ್ರಣದಿಂದ ಮಳೆಯು ಉಂಟಾಗುತ್ತದೆ. ಇದನ್ನು ಯುದ್ಧಕ್ಕೆ ಹೋಲಿಸಿ ವೇದಗಳಲ್ಲಿ ಹೇಳಿದೆ,

"ಅಪಾಂ ಚ ಜ್ಯೋತಿಷಾಂಚ ಮಿಶ್ರೀಭಾವಕರ್ಮಣೋ ವರ್ಷಕರ್ಮ ಜಾಯತೇ॥ ತತ್ರೋಪಮಾರ್ಥೇನ ಯುದ್ಧ ವರ್ಣಾ ಭವಂತಿ ॥
(೨—೫—೨೯)

ಎಂದು ನಿರುಕ್ತವು ವ್ಯಕ್ತಪಡಿಸುತ್ತದೆ. ಇದರಂತೆಯೇ ಪ್ರಜಾಪತಿಯು ಸುತಾಗಮನ ಮಾಡಿದ್ದು, ಇಂದ್ರನ ಅಹಲ್ಯಾ ಜಾರತೆ, ಮೊದಲಾದವುಗಳು ನಿರುಕ್ತದಲ್ಲಿ ಬೇರೆಯ ಅಭಿಪ್ರಾಯದಿಂದ ವೇದಗಳಲ್ಲಿ ವರ್ಣಿತವಾಗಿವೆ ಎಂದು ವಿವರಿಸಿರುವರು.

"ಶಕ್ರಃ ಶುಶುಕ್ವಾಂ ಉಷೋ ನ ಜಾರಃ" (ಋ. ಸಂ.-೧೫-೧೩) "ಉಷೋ ನ ಜಾರಃ ಪೃಥುವಾಜೋ" (ಯ. ಸಂ. ೫-೨-೧೩), ಮೊದಲಾದ ಸಂಹಿತೆಯೊಳಗಿನ ಮಂತ್ರಗಳ ಅಭಿಪ್ರಾಯಗಳನ್ನು ಋಗ್ವೇದದ ಐತರೇಯ ಬ್ರಾಹ್ಮಣದಲ್ಲಿ ಪ್ರಕಾರಾಂತರವಾಗಿ ಹೇಳಿರುವುದನ್ನು ನಾವು ಪರಿಶೀಲಿಸಬೇಕು. ಐತರೇಯ ಬ್ರಾಹ್ಮಣದಲ್ಲಿ

"ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯತ್, ದಿವಮಿತ್ಯನ್ಯೇ ಆಹುರುಷಸಮಿತ್ಯನ್ಯೇ, ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್'

ಪ್ರಜಾಪತಿಯು ತನ್ನ ಮಗಳನ್ನು ಕೂಡಿದನೆಂಬುವುದನ್ನು ಆಕಾಶವನ್ನು ಕೂಡಿದನೆಂದು ಕೆಲವರು, ಮತ್ತೆ ಕೆಲವರು ಉಷೆಯನ್ನು ಕೂಡಿದನೆಂದು ಹೇಳುವರು ಎಂದು ಕಥಾರೂಪವಾಗಿ ವಿವರಿಸಿದೆ.

ಇದೇ ವಿಷಯವನ್ನು ಜೈಮಿನಿ ಸೂತ್ರ ಭಾಷ್ಯದ ವಾರ್ತಿಕಕಾರರು ಪ್ರಜಾಪತಿಯು ಪ್ರಜೆಗಳನ್ನುಪಾಲಿಸುವ ಅಧಿಕಾರಿಯಾದುದರಿಂದ ಅವನು ಆದಿತ್ಯನು. ಅವನು ಅರುಣೋದಯ ಸಮಯದಲ್ಲಿ ಉಷೆಯನ್ನು ಕೂಡುವನು. ಉಷೆಯು (ಉಷಃಕಾಲವು) ಅರುಣೋದಯ ಸಮಯದಲ್ಲಿಯೇ ಮೂಡಿಬರುವುದು. (ಆರಂಭವಾಗುವುದು) ಆದ್ದರಿಂದ ಉಷೆಯು ಪ್ರಜಾಪತಿಯ ಮಗಳೆಂದು ಆಲಂಕಾರಿಕವಾಗಿ ಹೇಳಿರುವರು. ಉಷೆಯಲ್ಲಿ ಅರುಣಕಿರಣವೆಂಬ ಬೀಜವನ್ನು ಇಡುವುದರಿಂದ ಸ್ತ್ರೀ ಪುರುಷರ ಸಂಬಂಧವಾದಂತೆ ಇದನ್ನು ಸಹ ಔಪಚಾರಿಕವಾಗಿ ಕರೆಯಲಾಗಿದೆ.

"ಆದಿತ್ಯೋತ್ರ ಜಾರ ಉಚ್ಯತೇ ರಾತ್ರೇರ್ಜರಯಿತಾ" ರಾತ್ರಿಯನ್ನು ಕೊನೆಗಾಣಿಸುವವನಾದ್ದರಿಂದ ಆದಿತ್ಯನಿಗೆ ಜಾರನೆಂದು ಕರೆಯುತ್ತಾರೆ. (ವಿ ೩-೩-೪)ಎಂದು ಹೇಳಿದೆ. ವಾರ್ತಿಕಕಾರು ಈ ವಿಷಯವನ್ನು ಉಪಸಂಹಾರ ಮಾಡುತ್ತಾ "ಬ್ರೈನಲ್ಲಿ ಎಲ್ಲಾ ವಿಧವಾದ ಮಹಾ ತೇಜಸ್ಸುಗಳೂ ಅತಿಶಯವಾದ ಶಕ್ತಿಯುತವಾಗಿರುವುದರಿಂದ ಅವೆಲ್ಲವೂ ಇಂದ್ರ ಶಬ್ದದಿಂದ ಕರೆಸಿಕೊಳ್ಳುವುದಕ್ಕೆ ಅರ್ಹವಾಗಿವೆ. ಸಾಯಂಕಾಲದಲ್ಲಿ ಪಶ್ಚಿಮದಿಕ್ಕಿನಲ್ಲಿ ಮರೆಯಾಗುವ ಸೂರ್ಯನಿಂದ ರಾತ್ರಿಯು ಆರಂಭವಾಗುತ್ತದೆ. ರಾತ್ರಿಗೆ ಅಹಲ್ಯೆ ಎಂಬ ಹೆಸರನ್ನು ಕೊಟ್ಟು ಅದರ ಅವಸಾನವೂ ಸಹ ಉದಯ ಹೊಂದುವ ತೇಜಃಪುಂಜನಾದ ಆದಿತ್ಯನಿಂದಲೇ ಉಂಟಾಗವುದರಿಂದ ಅಹಲ್ಯಾಜಾರನೆಂಬ ಹೋಲಿಕೆಯನ್ನು ಇಂದ್ರನಿಗೆ ಮಾಡಿರುವರೇ ಹೊರತು ಪರಸ್ತ್ರೀ ಸಂಗಮರೂಪವಾದ ವ್ಯಭಿಚಾರದ ವರ್ಣನೆ ಮಾಡುವುದು ವೇದಗಳ ಉದ್ದೇಶವಲ್ಲ" ಎಂದು ಜೈಮಿನಿ ಸೂತ್ರದ ಭಾಷ್ಯಕ್ಕೆ ವಾರ್ತಿಕವನ್ನು ಬರೆಯುವಾಗ ವಿಷಯೋಪಸಂಹಾರವನ್ನು ಮಾಡಿದ್ದಾರೆ. ಆದ್ದರಿಂದ ವೇದದಲ್ಲಿ ಕಾಣುವ ಋಷಿಗಳು, ಕಥೆಗಳು, ರಾಜರು ಮೊದಲಾದವರ ವರ್ಣನೆಗಳಿಂದ ನಶ್ವರವಾದ ಶರೀರಗಳನ್ನು ಧರಿಸಿದ ವ್ಯಕ್ತಿಗಳೆಂದು

ಆದರ ಆಧಾರದ ಮೇಲೆ ವೇದಗಳ ಕಾಲವನ್ನು ನಿರ್ಣಯಿಸಲು ಬರುವುದಿಲ್ಲ. ಮತ್ತು ವೇದಗಳ ನಿತ್ಯತ್ವವನ್ನು ಅಲ್ಲೆಗಳೆಯಲು ಸಹ ಬರುವುದಿಲ್ಲ. ಈಶ್ವರನಿಂದ ಪ್ರಕಾಶಕ್ಕೆಬಂದ ವೇದಗಳು ನಿತ್ಯವಾದವುಗಳು ಎಂಬುದಕ್ಕೆ ವೇದಗಳಲ್ಲಿಯೇ ಅನೇಕ ಮಂತ್ರಗಳು ಹಾಗೆ ಹೇಳಿರುವುದನ್ನು ದೃಷ್ಟಾಂತಕ್ಕಾಗಿ ಇಲ್ಲಿ ಕೆಲವನ್ನು ಕೊಡಬಹುದಾಗಿದೆ. ಋಗ್ವೇದದ ಪುರುಷಸೂಕ್ತದಲ್ಲಿ ಸರ್ವಭಕ್ಷಕನಾದ, ಯಜ್ಞಸ್ವರೂಪಿಯಾದ ಪರಮಾತ್ಮನಿಂದ ಋಕ್, ಯಜುಃ, ಸಾಮ, ಛಂದಸ್ಸುಗಳು ಹುಟ್ಟಿವೆಯೆಂದು ಹೇಳಿದೆ.

ತಸ್ಮಾದ್ಯಜ್ಞಾತ್ಸರ್ವಹುತಃ
ಋಚಃ ಸಾಮಾನಿ ಜಜ್ಞಿರೇ||

ಛಂದಾಂಸಿ ಜಜ್ಞಿರೇ ತಸ್ಮಾತ್
ಯಜುಸ್ತಸ್ಮಾದ ಜಾಯತಃ ||

(ಋ. ಸಂ. ದ ಮಂ,| ಯ. ಸಂ ೩೧ ಪ್ರ| ಅ. ಸಂ. ೧೯ ಕಾಂಡ)

ಎಂದು ಅನೇಕ ಕಡೆಗಳಲ್ಲಿ ಹೇಳಿದೆ. ಹಾಗೆಯೇ ಋಗ್ವೇದವು ಅಗ್ನಿಯಿಂದಲೂ, ಯಜುರ್ವೇದವು ವಾಯುವಿನಿಂದಲೂ, ಸಾಮವೇದವು ಆದಿತ್ಯನಿಂದಲೂ, ಪ್ರಕಾಶಕ್ಕೆ ಬಂದಿವೆಯೆಂದು ಐತರೇಯ ಸಂಹಿತೆಯಲ್ಲಿ (೫-೫-೨)

"ಋಗ್ವೇದ ಏವಾಗ್ನೇರಜಾಯತ ಯಜುರ್ವೇದೋ
ವಾಯೋಃ ಸಾಮವೇದ ಆದಿತ್ಯಾತ್"

ಎಂದು ಹೇಳಿದೆ. ಇದನ್ನೇ ಮನು ಸ್ಮೃತಿಯಲ್ಲಿಯೂ ಸಹ ಹೇಳಿದೆ.

"ಅಗ್ನಿವಾಯುರವಿಭ್ಯಸ್ತು ತ್ರಯಂ ಬ್ರಹ್ಮ ಸನಾತನಂ||
ದುದೋಹ ಯಜ್ಞ ಸಿಧ್ಯರ್ಥಮೃಗ್ಯಜುಃ ಸಾಮಲಕ್ಷಣಂ|| "

ಸನಾತನವಾದ, ಅನಾದಿಯಾದ ಋಗ್ಯಜುಃ ಸಾಮಗಳೆಂಬ ಮೂರು ವೇದಗಳನ್ನು ಅಗ್ನಿ, ವಾಯು, ಆದಿತ್ಯರಿಗೆ ಯಜ್ಞಕ್ಕಾಗಿ ಬ್ರಹ್ಮನು ಸೃಷ್ಟಿಸಿದನು ಎಂದು ಹೇಳಿದೆ. ಭೂಃ, ಭುವಃ, ಸುವಃ ಎಂಬ ಮೂರು ಮಹಾ ವ್ಯಾಹೃತಿಗಳಿಗೆ ಅಧಿ ದೇವತೆಗಳಾದ ಅಗ್ನಿ, ವಾಯು, ಆದಿತ್ಯರನ್ನು ಯಜ್ಞಗಳಾಗಿ ರೂಪಿಸಿ ಮೇಲಿನ ಮನು ಸ್ಮೃತಿಯ ವಾಕ್ಯದಲ್ಲಿ ಹೇಳಿದೆ. ಇದರಂತೆಯೇ ಮುಂಡುಕೋಪನಿಷತ್ತಿನಲ್ಲಿ ಈ ವಿಷಯದ ಬಗ್ಗೆ ಹೀಗೆ ಹೇಳಿದೆ.

ಬ್ರಹ್ಮಾ ದೇವಾನಾಂ ಪ್ರಥಮಃ ಸುಂಬಭೂವ ಸರ್ವವಿದ್ಯಾಪ್ರತಿಷ್ಠಾ-
ಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ|| ಅಥರ್ವಣೇ ಯಾಂ
ಪ್ರವದೇತ ಬ್ರಹ್ಮಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಂ||
ಸ ಭರದ್ವಾಜಾಯ ಸತ್ಯವಾಹಾಯ ಪ್ರಾಹ ಭರದ್ವಾಜೋಂಽ-
ಗಿರಸೇ ಪರಾವರಾಃ ||"

"ಪ್ರಪಂಚವನ್ನು ಸೃಷ್ಟಿಸುವವನೂ, ರಕ್ಷಿಸುವವನೂ ಆದ ಬ್ರಹ್ಮನು ಎಲ್ಲ ದೇವತೆಗಳಿಗಿಂತಲೂ ಮೊದಲು ಆವಿರ್ಭವಿಸಿದನು. ಅವನು ಎಲ್ಲಾ ವಿದ್ಯೆಗಳಲ್ಲಿಯೂ ಶ್ರೇಷ್ಠವಾದ ಬ್ರಹ್ಮವಿದ್ಯೆ (ವೇದ – ವೇದಾಂತ ಅಥವಾ ಉಪನಿಷತ್ತುಗಳು.) ಯನ್ನು ಹಿರಿಯ ಮಗನಾದ ಅಥರ್ವನಿಗೆ ಉಪದೇಶ ಮಾಡಿದನು. ಅಥರ್ವನು ತಾನು ಬ್ರಹ್ಮನಿಂದ ಪಡೆದ ವಿದ್ಯೆಯನ್ನು ಅಂಗಿರನಿಗೆ ಮೊದಲು ಕಲಿಸಿದನು. ಅಂಗಿರನು ಸತ್ಯಕಾಮನಾದ ಭರದ್ವಾಜನಿಗೆ ಹೇಳಿಕೊಟ್ಟನು. ಭರದ್ವಾಜನು ಶ್ರೇಷ್ಠವಾದ ಆ ವಿದ್ಯೆಯನ್ನು ಅಂಗಿರಸನಿಗೆ ಹೇಳಿದನು" ಎಂದು ವೇದ ಉಪನಿಷತ್ತುಗಳು ಪ್ರಪಂಚಕ್ಕೆ ಬಂದ ಕ್ರಮವನ್ನು ಮೇಲಿನ ಉಪನಿಷದ್ವಾಕ್ಯದಲ್ಲಿ ಹೇಳಿದೆ.

ಹೀಗೆ ವೇದಗಳ ಆವಿರ್ಭಾವ ಮತ್ತು ಪ್ರಚಾರಗಳ ಬಗ್ಗೆ ಇಂದು ನಾವು ಐತಿಹಾಸಿಕ ದೃಷ್ಟಿಯಿಂದ ಅತ್ಯಂತ ಪ್ರಾಚೀನವಾದುದೆಂದು ಹೇಳುವ ಋಗ್ವೇದದಿಂದ ಮೊದಲುಗೊಂಡು ಇಂದಿನವರೆಗಿನ ಸ್ಮೃತಿ ಶಾಸ್ತ್ರ ಪುರಾಣಗಳೆಲ್ಲವೂ ವೇದಗಳು ಅಪೌರುಷೇಯವಾದವು ಮತ್ತು ನಿತ್ಯವಾದವುಗಳೆಂದು ಒಂದೇ ಸ್ವರದಿಂದ ಹೇಳುತ್ತಾ ಬಂದಿರುವುದನ್ನೂ ಕಾಣಬಹುದು. ಆಧುನಿಕ ವಿಮರ್ಶಕ ಪಂಡಿತರ ಅಭಿಪ್ರಾಯವೂ ಸಹ ಯಾವ ವಿಧದಿಂದಲೂ ವೇದಗಳ ಕಾಲದ ಬಗ್ಗೆ ಒಂದು ನಿಲುಮೆಗೆ ಬಂದು ಮುಟ್ಟಿದಂತೆ ಅಥವಾ ಮುಟ್ಟುವಂತೆ ಕಾಣುವುದಿಲ್ಲ. ಯಾವನೊಬ್ಬ ವಿಮರ್ಶಕನೂ ಇಷ್ಟು ಕಾಲದಿಂದ ಈಚೆಗೆ ವೇದಗಳು ರಚಿತವಾಗಿವೆಯೆಂದು ಹೇಳಲು ಸಮರ್ಥನಾಗಲಿಲ್ಲ. ಇವಲ್ಲದೆ ನಾಲ್ಕು ವೇದಗಳ ರಚನಾ ಕಾಲದ ಬಗ್ಗೆ ವಿಮರ್ಶಿಸುವಾಗ ಕಾಲದ ಅಂತರವನ್ನು ಒಂದೊಂದಕ್ಕೂ ಇಟ್ಟುಕೊಂಡು ಋಗ್ವೇದದ ಕಾಲವು ಉಳಿದ ಎಲ್ಲಾ ವೇದಗಳ ಕಾಲಕ್ಕಿಂತಲೂ ಪ್ರಾಚೀನವೆಂದೂ ಋಗ್ವೇದ

ದಲ್ಲಿಯೂ ಸಹ ಎರಡರಿಂದ ಆರು ಮಂಡಲಗಳು ಎಲ್ಲಕ್ಕಿಂತಲೂ ಪ್ರಾಚೀನವು. ಒಂದು, ಎಂಟು, ಒಂಭತ್ತನೆಯ ಮಂಡಲಗಳು ಅವಾರಕ್ಕಿಂತ ನವೀನವಾದವು. ದಶಮ ಮಂಡಲವು ಉಳಿದ ಒಂಬತ್ತು ಮಂಡಲಗಳಿಗಿಂತಲೂ ನವೀನವೆಂದೂ ಒಂದು ವಿಧವಾದ ಪೂರ್ವಗೃಹೀತ ಸಿದ್ಧಾಂತದ ಮೇಲೆ ವಿಮರ್ಶಿಸುತ್ತಾರೆ. ಆದರೆ ಋಗ್ವೇದ ಮಂತ್ರಗಳನ್ನು ಕಂಡು ಹಿಡಿದ ಋಷಿಗಳನೇಕರು ಇತರ ವೇದ ಮಂತ್ರಗಳನ್ನು ಕಂಡುಹಿಡಿದವರಾಗುತ್ತಾರೆ. ಹಾಗೆಯೇ ಋಗ್ವೇದದ ಎರಡರಿಂದ ಆರು ಮಂಡಲಗಳ ಮಂತ್ರ ದ್ರಷ್ಟಾರರನೇಕರು ಉಳಿದ ಮಂಡ ಲಗಳ ಮತ್ತು ಕೊನೆಯದೆಂದು ಹೇಳುವ ದಶಮ ಮಂಡಲದ ಮಂತ್ರ ದಷ್ಟಾರರಾಗಿಯೂ ಇದ್ದಾರೆ ಎಂಬುದನ್ನು ಇವರು ಕಡೆಗಾಣಿಸಿದಂತೆ ಕಾಣುತ್ತದೆ. ಇದಲ್ಲದೆ ಸಾಮೂಹಿಕವಾಗಿರುವ ವೇದ ಮಂತ್ರಗಳ ರಾಶಿ ಯನ್ನು ಇಂದು ನಾವು ಕಾಣುತ್ತಿರುವ ನಾಲ್ಕು ವೇದಗಳನ್ನಾಗಿ ಮತ್ತು ಮಂಡಲ ಖಂಡಗಳಾಗಿ ಒಂದು ವ್ಯವಸ್ಥಿತ ರೀತಿಯಿಂದ ವಿಭಾಗಿಸಿದ ವನು ಬಾದರಾಯಣ ವ್ಯಾಸನೆಂಬುದನ್ನು ತಿಳಿದು ಜ್ಞಾಪಕದಲ್ಲಿಟ್ಟುಕೊಂ ಡರೆ ನಾಲ್ಕು ವೇದಗಳಲ್ಲಾಗಲೀ ಮಂಡಲ ಖಂಡಗಳಲ್ಲಾಗಲೀ ಕಾಲದ ಪೂರ್ವಾಪರ ಕಲ್ಪನೆಯು ಅತ್ಯಂತ ಅಸಂಗತ ಮತ್ತು ಭ್ರಾಂತಿಮಯವಾ ಗಿರುತ್ತದೆಂಬುದು ಸ್ಪಷ್ಟವಾಗುತ್ತದೆ.

ವೇದಗಳ ರಚನಾ ಕಾಲವನ್ನು ನಿರ್ಣಯಿಸುವಾಗ ಅವಶ್ಯವಾಗಿ ವಿಮರ್ಶಿಸುವ ಇನ್ನೂ ಕೆಲವು ವಿಷಯಗಳಿವೆ. ಇವುಗಳಲ್ಲಿ ಮೊದಲನೆ ಯದಾಗಿ ಪುರಾಣಗಳಲ್ಲಿ ವರ್ಣಿತರಾದ ರಾಜರೂ, ಋಷಿಗಳೂ ಇವರಲ್ಲಿ ವೇದ ಮಂತ್ರಗಳನ್ನು ಕಂಡುಹಿಡಿದವರು ಯಾವ ಕಾಲದಲ್ಲಿದ್ದಿರಬಹುದೆಂಬುದನ್ನು ನೋಡಬೇಕಾಗುತ್ತದೆ. ಕಲಿಯುಗವು ಆರಂಭವಾಗಿ ಇಂದಿಗೆ ೫೦೭೫ ವರ್ಷ ಗಳಾದವು. ಇದನ್ನು ಕೇವಲ ಪೌರಾಣಿಕವೆಂದಾಗಲೀ ಅಷ್ಟು ಪ್ರಾಮಾ ಣಿಕವಾದುದಲ್ಲವೆಂದಾಗಲೀ ಉಪೇಕ್ಷಿಸುವಂತಿಲ್ಲ. ಇಂದು ನಾವು ಕ್ರಿಸ್ತ ಶಕ, ವಿಕ್ರಮ ಶಕ, ಶಾಲಿವಾಹನ ಶಕ ಮೊದಲಾದ ಶಕಗಳನ್ನು ಎಣಿಸುವಂತೆ ಕಲಿಯುಗದ ಆರಂಭದಿಂದ ತಲೆತಲಾಂತರವಾಗಿ ಈವರೆಗೆ ನಮ್ಮ ಪೂರ್ವಿ ಕರು ವರ್ಷಕ್ಕೆ ಒಂದೊಂದರಂತೆ ವರ್ಷಗಳನ್ನು ಸೇರಿಸುತ್ತಾ ಎಣಿಸಿಕೊಂಡು

ಬಂದಿರುತ್ತಾರೆ. ಈ ಕಲಿಯುಗವು ಆರಂಭವಾದದ್ದು ಮಹಾಭಾರತ ಯುದ್ಧವಾದಮೇಲೆ ಸುಮಾರು ೩೦ ವರ್ಷಗಳನಂತರ. ಭಾರತ ಯುದ್ಧ ದಲ್ಲಿ ಸೂರ್ಯ ವಂಶದ ಬೃಹದ್ಬಲನೆಂಬ ರಾಜನು ಅಭಿಮನ್ಯುವಿನಿಂದ ಹತ ನಾಗಿರುವನು. ಇವನು ದಾಶರಥಿ ರಾಮನಿಂದ ೩೧ ತಲೆಮಾರಿನ ಅನಂತ ರನವನು. ರಾಮನು ಮನುವಿನಿಂದ ಸುಮಾರು ೯೦ ತಲೆಮಾರಿನನಂತರದವನು. ಅಂದರೆ ಬೃಹದ್ಬಲನಿಗಿಂತ ಸುಮಾರು ೧೨೦ ತಲೆಮಾರಿನ ಹಿಂದಿನವನು ವೈವಸ್ವತ ಮನುವು. ಈ ಮನುವೂ, ಇವನಿಗಿಂತ ಪ್ರಾಚೀನರೂ ಮತ್ತು ಅನಂತರದ ಕೆಲವರೂ ಋಗ್ವೇದ ಮಂತ್ರಗಳ ದ್ರಷ್ಟಾರರಾಗಿರುವರು. ಇವರ ಒಂದೊಂದು ತಲೆಮಾರಿಗೂ ಸರಾಸರಿ ೪೦ ವರ್ಷಗಳೆಂದು ಇಟ್ಟುಕೊಂಡರೆ ೪೮೦೦ ವರ್ಷಗಳಾಗುತ್ತವೆ. ಪುರಾಣಗಳಲ್ಲಿ ವರ್ಣಿತರಾದ ರಾಜರ ಹೆಸ ರುಗಳು ಆ ವಂಶದಲ್ಲಿ ಪ್ರಸಿದ್ಧರಾದವರು ಮಾತ್ರವಲ್ಲದೆ ಕ್ರಮಶಃ ಪ್ರತಿ ಯೊಂದು ತಲೆಮಾರಿನ ರಾಜರನ್ನು ಹೆಸರಿಸಿರುವ ಸಂಭವವಿರುವುದಿಲ್ಲ. ಆದ್ದ ರಿಂದ ಅಪ್ರಸಿದ್ಧರಾದ ಕೆಲವು ತಲೆಮಾರಿನ ಹೆಸರುಗಳನ್ನು ಇಲ್ಲಿ ಕೈಬಿಟ್ಟಿ ರಬಹುದೆಂಬುದನ್ನು ಒಪ್ಪಿಕೊಳ್ಳುವುದಾದರೆ ಸರಾಸರಿ ಒಬ್ಬರಿಗೆ ಒಬ್ಬರಂತೆ ಕೈಬಿಟ್ಟಿರಬಹುದೆಂದು ಊಹಿಸಬಹುದು. ಆಗ ಮನುವಿನಿಂದ ಬೃಹದ್ಬ ಲನ ತಲೆಯು ಸುಮಾರು ೨೪೦ ತಲೆಗಳ ನಂತರದ್ದಾಗುವುದು. ಅಂದರೆ ಮನುವು ಭಾರತ ಯುದ್ಧಕ್ಕಿಂತ ಮುಂಚೆ ೯೬೦೦ ವರ್ಷಗಳಿಗಿಂತ ಹಿಂದೆ ಇದ್ದನೆಂದಾಗುತ್ತದೆ. ಇದರ ಜೊತೆಗೆ ಭಾರತ ಯುದ್ಧದ ನಂತರ ಯುಧಿ ಷ್ಠಿರನು ರಾಜ್ಯಭಾರ ಮಾಡಿದ ಕಾಲ, ಮತ್ತು ಕಲಿಯುಗದ ಈವರೆಗಿನ ಕಾಲವನ್ನು ಸೇರಿಸಿದರೆ ಸುಮಾರು ೧೪೬೦೦ ವರ್ಷಗಳು ಆಗುತ್ತವೆ. ಇದರಿಂದ ವೇದಗಳ ರಚನಾ ಕಾಲವೂ ಸಹ ಇಂದಿಗೆ ಸುಮಾರು ೧೫೦೦೦ ವರ್ಷಗಳಷ್ಟು ಹಿಂದಿನದಾಗಿರಬೇಕೆಂದು ಹೇಳಬೇಕಾಗುತ್ತದೆ.

ಎರಡನೆಯ ವಿಷಯವೆಂದರೆ ಸರಸ್ವತೀ ನದಿಯ ವಿಚಾರ. ಋಗ್ವೇ ದದ ಕಾಲದಲ್ಲಿ ಸರಸ್ವತೀ ನದಿಗೆ ಅತಿಶಯವಾದ ಪ್ರಾಶಸ್ತ್ಯವಿದ್ದಿತು. ವೇದ ಕಾಲದ ಋಷಿಗಳು ಸರಸ್ವತೀ ನದಿಯ ದಡದಲ್ಲಿ ಕುಳಿತು ತಪಸ್ಸು ಮಾಡುವಾಗ ಅದರ ಪ್ರಾಶಸ್ತ್ಯವನ್ನು ಅನೇಕ ಕಡೆಗಳಲ್ಲಿ ಹೊಗಳಿದ್ದಾರೆ. ಋಗ್ವೇದದಲ್ಲಿ

ಸರಸ್ವತೀ ನದಿಯ ವರ್ಣನೆಯು ಸುಮಾರು ಇಪ್ಪತ್ತೈದು ಕಡೆಗಳಲ್ಲಿ ಬರುತ್ತದೆ. ಇಂದು ಬಹಳ ಪ್ರಸಿದ್ಧಿಯನ್ನು ಹೊಂದಿರುವ ಗಂಗಾನದಿಯು ಹೆಸರು ಋಗ್ವೇದದಲ್ಲಿ ಕೇವಲ ಒಂದುಕಡೆ ಮಾತ್ರ ಬರುತ್ತದೆ. ಇದರಿಂದ ಋಗ್ವೇದದ ಕಾಲದಲ್ಲಿ ಗಂಗಾನದಿಗೆ ಅಷ್ಟು ಪ್ರಾಶಸ್ತ್ಯವಿರಲಿಲ್ಲವೆಂದು ತೋರುತ್ತದೆ. ರಾಮಾಯಣದ ಕಾಲದಲ್ಲಾಗಲೀ, ಮಹಾಭಾರತದ ಕಾಲದಲ್ಲಾಗಲೀ ಸರಸ್ವತೀ ನದಿಯ ಪ್ರಸ್ತಾಪವು ಬರುವುದಿಲ್ಲ. ರಾಮಾಯಣದ ಕಾಲಕ್ಕೆ ಆಗಲೇ ಗಂಗಾನದಿಗೆ ಪ್ರಾಶಸ್ತ್ಯವು ಬಂದಿದ್ದಿತು, ಸರಸ್ವತೀ ನದಿಯು ಗುಪ್ತಗಾಮಿನಿ ಎಂಬ ಶಾಸ್ತ್ರ, ಪುರಾಣ, ಸಂಪ್ರದಾಯಗಳ ನುಡಿಗೆ ಮನ್ನಣೆಯನ್ನು ಕೊಟ್ಟು ವಿಚಾರಿಸುವುದಾದರೆ ರಾಮಾಯಣದ ಕಾಲಕ್ಕೆ ಸರಸ್ವತೀ ನದಿಯು ಆಗಲೇ ಮುಚ್ಚಿಹೋಗಿರಬೇಕೆಂದು ತೋರುತ್ತದೆ. ಅತ್ಯಂತ ಪ್ರಾಚೀನ ಕಾಲದಲ್ಲಿ ಗಂಗಾನದಿಯು ಸರಸ್ವತೀ ನದಿಯ ಉಪನದಿಯಾಗಿದ್ದು ಕಾಲಾಂತರದಲ್ಲಿ ಭೂಕಂಪವೋ ಅಥವಾ ಮತ್ತಾವ ಕಾರಣದಿಂದಲೋ ಸರಸ್ವತೀ ನದಿಯ ಪ್ರವಾಹಮಾರ್ಗವು ಮುಚ್ಚಿಹೋಗಿ ಗಂಗಾನದಿಯ ಪ್ರವಾಹವು ಬೇರೆಕಡೆಗೆ ತಿರುಗಿರಬೇಕು. ಆಗ ಸರಸ್ವತೀನದಿಯೂ ಸಹ ಗಂಗಾನದಿಗೆ ಬಂದು ಸೇರಿ ಗಂಗಾನದಿಯ ಉಪನದಿಯಾಗಿರಬೇಕೆಂದು ತೋರುತ್ತದೆ. ಅಥವಾ ಭಗೀರಥನು ಗಂಗೆಯನ್ನು ಭೂಮಿಗೆ ತಂದನೆಂಬ ಪುರಾಣದ ಕಥೆಯಲ್ಲಿ ಸರಸ್ವತೀ ನದಿಯ ಉಪನದಿಯಾದ ಗಂಗಾನದಿಯನ್ನು ತಿರುಗಿಸಿ ಪೂರ್ವದಿಕ್ಕಿಗೆ ಹರಿಸಿದ ಐತಿಹಾಸಿಕ ಘಟನೆಯೇನಾದರೂ ಅಡಗಿ ಕುಳಿತಿರಬಹುದೇ ? ಅಂತೂ ಒಂದು ಕಾಲದಲ್ಲಿ ಅತ್ಯಂತ ಪ್ರಸಿದ್ಧವಾಗಿದ್ದ ಪವಿತ್ರವೆಂದು ಹೆಸರು ಪಡೆದಿದ್ದ ಸರಸ್ವತೀ ನದಿಯು ರಾಮಾಯಣ ಕಾಲಕ್ಕಿಂತ ಬಹಳ ಪೂರ್ವದಲ್ಲಿಯೇ ಮುಚ್ಚಿಹೋಗಿ ಗುಪ್ತಗಾಮಿನೀ ಎಂಬ ಹೆಸರು ಪಡೆದಿರಬೇಕೆಂದು ತೋರುತ್ತದೆ.

ಸರಸ್ವತೀ ನದಿಯು ಗುಪ್ತಗಾಮಿನಿಯಾಗಿ ಮುಂದೆ ಎಲ್ಲಿಯೋ ತಿರುಗಿ ಕಾಣಿಸಿಕೊಳ್ಳುತ್ತದೆ ಎಂಬ ಐತಿಹ್ಯವು ನಿಜವಿದ್ದರೆ ಇಂದಿನ ಸ್ವತಂತ್ರ ಭಾರತದ ಸರ್ಕಾರವು ಈ ವಿಷಯದಲ್ಲಿ ಅವಶ್ಯವಾಗಿ ವಿಶೇಷ ಗಮನ ಕೊಡಬೇಕಾಗಿದೆ. ಸರಸ್ವತೀ ನದಿಯು ಗುಪ್ತಗಾಮಿನಿಯಾಗಿದೆ ಎನ್ನುವ

ಸ್ಥಳಕ್ಕೂ, ತಿರುಗಿ ಅದು ಕಾಣಿಸಿಕೊಳ್ಳುತ್ತಿದೆ ಎಂಬ ಸ್ಥಳಕ್ಕೂ ಇರುವ ಮಧ್ಯಪ್ರದೇಶದಲ್ಲಿ ಅದು ಯಾವ ಮಾರ್ಗವಾಗಿ ಹರಿಯುತ್ತಿದ್ದಿತೆಂಬುದನ್ನು ಪತ್ತೆ ಹಚ್ಚಬೇಕು. ಸರಸ್ವತೀ ನದಿಯು ಹರಿಯುತ್ತಿದ್ದ ಸ್ಥಳವನ್ನು ಕೆಲವು ಕಡೆಗಳಲ್ಲಿ ತಳದವರೆಗೂ ಅಗೆಸಬೇಕು. ಯಾವ ಯಾವ ಪ್ರಮಾಣದಲ್ಲಿ ಮುಚ್ಚಿಕೊಂಡಿದೆ ಎಂಬುದನ್ನು ತಿಳಿದು ಆ ಮಣ್ಣುಗಳ ಆಯುಸ್ಸನ್ನು ಕಂಡುಹಿಡಿದರೆ ಸರಸ್ವತೀ ನದಿಯು ಮುಚ್ಚಿಕೊಂಡು ಎಷ್ಟು ಕಾಲವಾಯಿತೆಂಬುದು ತಿಳಿದು ಬರುತ್ತದೆ. ಅದರಿಂದ ಭಾರತೀಯ ಸಂಸ್ಕೃತಿಯ ನಿಜವಾದ ಕಾಲವು, ಪ್ರಾಚೀನತೆಯು ಕೆಲವು ಸಾವಿರ ವರ್ಷಗಳ ಅಂತರದಲ್ಲಿ ಯಾದರೂ ನಿಗದಿಯಾಗಬಹುದು.

ಇನ್ನೊಂದು ಗಣನೀಯವಾದ ವಿಷಯವೆಂದರೆ ಇಂದಿನ ವಿಮರ್ಶಕರು ವೇದ ಮಂತ್ರಗಳ ರಚನಾ ಕಾಲವು ಸುಮಾರು ೨೦೦ ವರ್ಷಗಳ ಅವಧಿಯುಳ್ಳದ್ದಿರಬೇಕೆಂದು ಹೇಳುವ ವಿಷಯ. ಈ ವಿಷಯವನ್ನು ಸ್ವಲ್ಪ ವಿಮರ್ಶಿಸಬೇಕಾದುದು ಅವಶ್ಯವಿರುತ್ತದೆ. ವೇದ ಮಂತ್ರಗಳನ್ನು ರಚಿಸಿದ ಕೆಲವು ವಂಶದ ಋಷಿಗಳ ಸಂಖ್ಯೆಯು ೪೦-೫೦ ರ ವರೆಗೆ ಇದೆ. ಅತ್ರಿ ವಂಶದ ಋಷಿಗಳು ೩೭ ಜನರೂ, ಆಂಗಿರಸ ವಂಶದವರು ೪೭ ಜನರೂ, ಋಗ್ವೇದದ ಮಂತ್ರ ದ್ರಷ್ಟಾರರಾಗಿರುವರು. ಇವರೆಲ್ಲರೂ ಒಬ್ಬ ಅಥವಾ ಎರಡು, ಮೂರು ಋಷಿಗಳ ಮಕ್ಕಳೇ ಆಗಿರುವುದಕ್ಕೆ ಸಾಧ್ಯವಿಲ್ಲ. ಮತ್ತು ಒಬ್ಬನಾದಮೇಲೆ ಒಬ್ಬನಂತೆ ಕ್ರಮವಾಗಿ ಇಷ್ಟು ತಲೆಮಾರಿನವರು ಮಂತ್ರ ದ್ರಷ್ಟಾರರಾಗಿರಲೂ ಶಕ್ಯವಿಲ್ಲ. ಇಲ್ಲಿಯೂ ಸಹ ಸರಾಸರಿ ಎರಡು ತಲೆಮಾರಿಗೆ ಒಬ್ಬರಂತೆ ಮಂತ್ರ ದ್ರಷ್ಟಾರರಾಗಿರಬಹುದೆಂದು ಇಟ್ಟುಕೊಂಡರೆ ಅತ್ರಿವಂಶದವರು ಸುಮಾರು ೭೫ ತಲೆಮಾರಿನವರೂ, ಆಂಗಿರಸ ವಂಶದವರು ಸುಮಾರು ೯೫ ತಲೆಮಾರಿನವರೂ ಋಗ್ವೇದದ ಮಂತ್ರ ದ್ರಷ್ಟಾರರಾಗಿರುವರೆಂದು ಅರ್ಥವಾಗುತ್ತದೆ. ಇಲ್ಲಿಯೂ ಸಹ ಒಂದು ತಲೆಮಾರಿಗೆ ೪೦ ವರ್ಷಗಳೆಂದು ಇಟ್ಟುಕೊಂಡರೆ ಅತ್ರಿ ವಂಶದವರು ಸುಮಾರು ೩೦೦೦ ವರ್ಷಗಳ ಕಾಲಾವಧಿಯಲ್ಲಿಯೂ ಅಂಗಿರಸ ಋಷಿವಂಶದವರು ಸುಮಾರು ೩೮೦೦ ವರ್ಷಗಳ ಕಾಲಾವಧಿಯಲ್ಲಿಯೂ ಮಂತ್ರಗಳನ್ನು ರಚಿಸಿರಬಹುದೆಂದು

ಅರ್ಥವಾಗುತ್ತದೆ. ಇದಲ್ಲದೆ ಇಲ್ಲಿ ಉಕ್ತವಾಗಿರುವ ಋಷಿಗಳಲ್ಲಿ ಕೆಲವರು ಒಬ್ಬನಿಗಿಂತ ಹೆಚ್ಚು ಜನರು ಒಬ್ಬ ಋಷಿಯ ಮಕ್ಕಳಿರಬಹುದೆಂದು ಇಟ್ಟುಕೊಂಡರೂ ಅತ್ರಿ ವಂಶದವರು ೩೭ ತಲೆಮಾರಿನವರೂ, ಅಂಗಿರಸ ಋಷಿ ವಂಶದವರು ೪೭ ತಲೆಮಾರಿನವರೂ ಮಂತ್ರ ದ್ರಷ್ಟಾರರಾಗಿರಬಹುದೆಂದು ಇಟ್ಟುಕೊಂಡರೂ ಅತ್ರಿವಂಶದವರು ಸುಮಾರು ೧೫೦೦ ವರ್ಷಗಳ ಕಾಲಾವಧಿಯಲ್ಲಿಯೂ, ಅಂಗಿರಸ ಋಷಿ ವಂಶದವರು ಸುಮಾರು ೨೦೦೦ ವರ್ಷಗಳ ಕಾಲಾವಧಿಯಲ್ಲಿಯೂ ಋಗ್ವೇದದ ಮಂತ್ರಗಳನ್ನು ರಚಿಸಿರಬೇಕೆಂದು ಹೇಳಲೇ ಬೇಕಾಗುತ್ತದೆ. ವಿಷಯವು ಹೀಗಿರುವುದರಿಂದ ಇಂದಿನ ವಿಮರ್ಶಕರು ೨೦೦ ವರ್ಷಗಳ ಅವಧಿಯಲ್ಲಿ ಋಗ್ವೇದದ ಎಲ್ಲಾ ಮಂತ್ರಗಳನ್ನೂ ರಚಿಸಿರಬಹುದೆಂಬ ಊಹೆಯು ಅರ್ಥವಿಲ್ಲದ ಮಾತಾಗುತ್ತದೆ.

ಭಾರತ ವರ್ಷದಲ್ಲಿ ಹೊಸ ಹೊಸ ಸಂಶೋಧನೆಗಳು ನಡೆದಂತೆ ಹೊಸದಾಗಿ ದೊರೆಯುತ್ತಿರುವ ಅವಶೇಷಗಳಿಂದ ವೇದಗಳ ಕಾಲವು ಮತ್ತಷ್ಟು ಹಿಂದಕ್ಕೆ ಹೋಗುತ್ತಿದೆ. ಹೊಸತಾಗಿ ದೊರೆತ ಎಲ್ಲಾ ಅವಶೇಷಗಳಲ್ಲಿಯೂ ವೈದಿಕ ಸಂಸ್ಕೃತಿಯ ಪ್ರತಿಬಿಂಬವು ಕಾಣುತ್ತಲೇ ಇದೆ. ಇದಲ್ಲದೆ ಡಾ|| ಅವಿನಾಶಚಂದ್ರದಾಸರು ಹೇಳಿದ ಭೂಗರ್ಭ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳ ದೃಷ್ಟಿಯಿಂದ ವೇದಗಳನ್ನು ಪರಿಶೀಲಿಸಿದರೆ ಅವರು ಹೇಳಿದ ಲಕ್ಷಾಂತರ ವರ್ಷಗಳೆಂಬ ಮಾತನ್ನು ಅದಕ್ಕಿಂತ ಹಿಂದೆ ಮತ್ತೊಂದು ಸಂಖ್ಯೆಯನ್ನು ಸೇರಿಸಿ ವ್ಯವಹರಿಸಬೇಕಾಗುವುದೋ ಅಥವಾ ಸಂಶೋಧನೆಯ ಪಥದಲ್ಲಿಯೇ ಅತ್ಯಂತ ಗಾಢಾಂಧತಮಸ್ಸನ್ನು ತಂದೊಡ್ಡುವುದೋ ಹೇಳಬಲ್ಲವರಾರು ?

ಆದ್ದರಿಂದ ವೇದಗಳ ಕಾಲವು ಇಂದಿನ ವಿಮರ್ಶಕರಿಗೆ, ಆಧುನಿಕರಾದ ಐತಿಹಾಸಿಕ ದೃಷ್ಟಿಯವರಿಗೆ " ಬಿಡಿಸಲಾಗದ ಒಗಟಿನ ಪ್ರಶ್ನೆಯಾಗಿದೆ " ಎಂಬ ಈ ಪ್ರಕರಣದ ಆರಂಭದಲ್ಲಿ ಹೇಳಿದ ಮಾತು ಮಾತ್ರ ಸೂರ್ಯ ಪ್ರಕಾಶದಷ್ಟು ಸತ್ಯವಾಗಿದೆ.



# ೯. ವೇದಾಂಗಗಳು



ವೇದಗಳ ಪರಿಚಯ ಮಾಡಿಕೊಂಡ ನಂತರ ವೇದಾಂಗಗಳ ಪರಿಚಯ ಮಾಡಿಕೊಳ್ಳುವುದು ಅವಶ್ಯವಿರುತ್ತದೆ. ವೇದಗಳ ಅರ್ಥವನ್ನು ತಿಳಿಸುವುದಕ್ಕಾಗಿಯೂ ಮತ್ತು ವೇದಗಳನ್ನು ರಕ್ಷಿಸುವುದಕ್ಕಾಗಿಯೂ ಹೊರಟಿರುವ ವೇದಾಂಗಗಳು ವೈದಿಕ ವಾಙ್ಮಯದೊಳಗೆ ಸೇರಲು ಅತ್ಯಂತ ಅರ್ಹವಾಗಿವೆ. ಆದ್ದರಿಂದ ಇವುಗಳ ಸ್ವರೂಪವನ್ನೂ ಸಹ ಸ್ವಲ್ಪಮಟ್ಟಿಗೆ ತಿಳಿದುಕೊಳ್ಳಲು ಪ್ರಯತ್ನಿಸುವ.

ವೇದಗಳ—ಸಂಹಿತೆಗಳ ಕಾಲದಲ್ಲಿಯೇ ಆರಂಭವಾದ ಯಜ್ಞಗಳು ಬ್ರಾಹ್ಮಣಗ್ರಂಥಗಳ ಕಾಲದ ಹೊತ್ತಿಗೆ ವಿವಿಧಮುಖವಾಗಿ ಬೆಳೆದಿದ್ದವು. ಹಿಂದೆ ಈ ಯಜ್ಞಗಳ ನಿಯಮ ನಿಬಂಧನೆಗಳನ್ನು ಸಾಮಾನ್ಯವಾಗಿ ಬ್ರಾಹ್ಮಣ ಗ್ರಂಥಗಳ ಆಧಾರದಿಂದ ನೆನಪಿನಲ್ಲಿಟ್ಟುಕೊಳ್ಳುತ್ತಿದ್ದರು. ಆದರೆ ಕಾಲಕ್ರಮದಲ್ಲಿ ದೀರ್ಘವಾದ ಬ್ರಾಹ್ಮಣ ಗ್ರಂಥಗಳ ವಾಕ್ಯಗಳಿಂದಲೇ ಯಜ್ಞಗಳ ರೀತಿ ನೀತಿಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಕಷ್ಟಸಾಧ್ಯವಾಗಹತ್ತಿತು. ಈ ತೊಂದರೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಸಂಕ್ಷೇಪದಲ್ಲಿ ಯಜ್ಞ ಯಾಗಾದಿಗಳ ನಿಯಮ ನಿಬಂಧನೆಗಳನ್ನು ತಿಳಿಸುವ, ಸುಲಭವಾಗಿ ಬಾಯಿಪಾಠಮಾಡಿ ಜ್ಞಾಪಕದಲ್ಲಿಟ್ಟುಕೊಳ್ಳಲು ಯೋಗ್ಯವಾದ ಗ್ರಂಥಗಳು ಅವಶ್ಯವಾದವು. ಈ ಆವಶ್ಯಕತೆಯನ್ನು ಪೂರೈಸುವುದಕ್ಕಾಗಿಯೇ ಈ ವೇದಾಂಗಗಳು ಪ್ರಾದುರ್ಭವಿಸಿದವು.

ಬ್ರಾಹ್ಮಣ ಗ್ರಂಥಗಳು ಆವಿರ್ಭವಿಸಿ ಒಂದು ವಿಶಿಷ್ಟವಾದ ರೀತಿಯಿಂದ ವ್ಯವಹಾರದಲ್ಲಿ ಬಂದು ಎಷ್ಟೋ ಕಾಲದ ನಂತರ ಈ ವೇದಾಂಗಗಳು ಪ್ರಕಾಶಕ್ಕೆ ಬಂದವು. ಕಾತ್ಯಾಯನನಿಗಿಂತ (ಕ್ರಿ. ಪೂ .೨ ನೆಯ ಶತಮಾನ) ಪೂರ್ವದಲ್ಲಿಯೇ ವೇದಾಂಗಗಳೊಳಗಿನ ಕೆಲವು ಗ್ರಂಥಗಳು ಉತ್ಪನ್ನವಾಗಿ ವ್ಯವಹಾರದಲ್ಲಿ ಬಂದಿದ್ದವೆಂದು ಧಾರಾಳವಾಗಿ ಹೇಳಬಹುದು. ಅಂದರೆ ಕ್ರಿ. ಪೂ. ಎಂಟು, ಒಂಭತ್ತನೆಯ ಶತಮಾನಗಳ ಪೂರ್ವದಲ್ಲಿಯೇ ವೇದಾಂಗಗಳು ಪ್ರಚಾರದಲ್ಲಿ ಬಳಕೆಯಾಗಿದ್ದವು.

ವೇದಾಂಗಗಳು ಒಂದು ವಿಚಿತ್ರವಾದ ರೀತಿಯಿಂದ ರಚಿತವಾಗಿವೆ. ಇವುಗಳಲ್ಲಿ ಸಂಸ್ಕೃತದ ಇತರ ವಾಙ್ಮಯದಲ್ಲಿ ಕಾಣದ ಭಾಷಾಶೈಲಿ, ವಾಕ್ಯರಚನಾಕ್ರಮಗಳು ಕಾಣುತ್ತವೆ. ಇವುಗಳಲ್ಲಿ ಕೆಲವು ಸೂತ್ರರೂಪವಾಗಿಯೂ, ಕೆಲವು ಪದ್ಯರೂಪವಾಗಿಯೂ ಇನ್ನು ಕೆಲವು ಗದ್ಯರೂಪವಾಗಿಯೂ ರಚಿತವಾಗಿವೆ. ವೇದಾರ್ಥ ನಿರ್ಣಯ–ಯಜ್ಞಾದಿಗಳ ನಿಯಮ ನಿಬಂಧನೆಗಳನ್ನು ತಿಳಿಸಲು ಹೊರಟಿರುವ ವೇದಾಂಗಗಳಲ್ಲಿ ಕೆಲವು ಸೂತ್ರ ರೂಪದಲ್ಲಿರುತ್ತವೆ. ಸೂತ್ರನೆಂದರೆ "ಸಣ್ಣ ಸಣ್ಣ ಮಾತಿನಿಂದ ವಿಪುಲವಾದ ಅರ್ಥವನ್ನು ಸಂದೇಹವು ಉಳಿಯದಂತೆ ಹೇಳಬೇಕಾದ ವಿಷಯದ ಸಾರ ಸರ್ವಸ್ವವನ್ನು ತಿಳಿಸುವ ವಾಕ್ಯ" ವೆಂದು ಹೇಳಬಹುದು.

"ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ ||
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ||"

ಇಂತಹ ಸೂತ್ರಗ್ರಂಥಗಳು ಬಾಯಿಪಾಠಮಾಡಿ ಜ್ಞಾಪಕದಲ್ಲಿ ಇಟ್ಟುಕೊಳ್ಳಲು ಅತ್ಯಂತ ಸುಲಭಸಾಧ್ಯವಾಗುತ್ತವೆ. ಹೀಗೆ ವೇದಗಳಿಗಾಗಿ ಆರಂಭವಾದ ಈ ಸೂತ್ರಗ್ರಂಥಗಳ ಪದ್ಧತಿಯು ಮುಂದೆ ಕಾಲಕ್ರಮದಲ್ಲಿ ಎಲ್ಲ ಶಾಸ್ತ್ರಗಳಿಗೂ ಒಂದೊಂದು ಸೂತ್ರಗ್ರಂಥವಾಗಿ ನಿರ್ಮಾಣವಾಗಲು ಅತ್ಯಂತ ಸಹಾಯವಾದವು. ಮತ್ತು ಸಂಸ್ಕೃತವಾಙ್ಮಯದಲ್ಲಿ ಎಲ್ಲಕ್ಕಿಂತಲೂ ಒಂದು ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದುಕೊಂಡು ಈ ಸೂತ್ರಗ್ರಂಥಗಳು ವಿರಾಜಿಸುತ್ತವೆ.

ವೇದವಾಙ್ಮಯದಂತೆ ಈ ವೇದಾಂಗಗಳು ಅಪೌರುಷೇಯ

ವೆಂದು ನಮ್ಮ ಪ್ರಾಚೀನರು ಅಭಿಪ್ರಾಯಪಟ್ಟಿರುವುದಿಲ್ಲ. ಇವು ಪೌರುಷೇಯವು, ಮಾನವನಿರ್ಮಿತವಾದವು ಎಂದು ಒಪ್ಪಿಕೊಂಡಿದ್ದಾರೆ. ಇವು ವೇದದೊಳಗಿನ ವಿಷಯವನ್ನೂ ಮತ್ತು ವೇದಾರ್ಥಗಳನ್ನೂ ತಿಳಿಸುವುದಕ್ಕಾಗಿಯೂ, ವೇದಗಳ ಭದ್ರತೆ-ರಕ್ಷಣೆಗಾಗಿಯೂ ಹೊರಟಿರುವುದರಿಂದ ಇವುಗಳನ್ನು ವೇದಾಂಗ-ವೇದಗಳ ಅಂಗ-ಅವಯವಗಳು, ಎಂದು ಹೆಸರು ಕೊಟ್ಟು ಕರೆದಿದ್ದಾರೆ. ಈ ವೇದಾಂಗಗಳು ಪ್ರಧಾನವಾಗಿ ಆರು ವಿಧವಾಗಿವೆಯೆಂದು ನಮ್ಮ ಪ್ರಾಚೀನರು ಹೇಳಿದ್ದಾರೆ. "ಶಿಕ್ಷಾ, ಛಂದಃ, ನಿರುಕ್ತಂ, ವ್ಯಾಕರಣಂ, ಜ್ಯೋತಿಷಂ, ಕಲ್ಪಂ" ಗಳೆಂದು ವೇದಾಂಗಗಳು ಆರು ವಿಧವಾಗಿವೆ. ಇವುಗಳಲ್ಲಿ ವ್ಯಾಕರಣವು ವೇದದ ಮುಖವೆಂದೂ, ಜ್ಯೋತಿಷವು ಕಣ್ಣು, ನಿರುಕ್ತವು ಕಿವಿ, ಶಿಕ್ಷೆಯು ಮೂಗು, ಛಂದಸ್ಸು ಪಾದ, ಕಲ್ಪವು ಕೈಗಳೆಂದೂ ಹೇಳಿ ಇವಾರು ಅಂಗಗಳನ್ನು ವೇದಕ್ಕೆ ಅನ್ವಯಿಸಿ ಕರೆದಿದ್ದಾರೆ.

> "ಛಂದಃ ಪಾದೌ ತು ವೇದಸ್ಯ ಹಸ್ತೌ ಕಲ್ಪೋऽಥ ಪಠ್ಯತೇ||
> ಜ್ಯೋತಿಷಂ ನಯನಂ ಚಕ್ಷುರ್ನಿರುಕ್ತಂ ಶ್ರೋತ್ರಮುಚ್ಯತೇ||
> ಶಿಕ್ಷಾ ಘ್ರಾಣಂ ತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ
> ತಸ್ಮಾತ್ಸಾಂಗಮಧೀತ್ಯೈವ ಬ್ರಹ್ಮಲೋಕೇ ಮಹೀಯತೇ|| "
>
> (ಪಾ. ಶಿಕ್ಷಾ. ೪೧-೪೨)

ಈ ಷಡಂಗ ಸಹಿತವಾದ ವೇದಾಭ್ಯಾಸ ಮಾಡಿದವನು ಬ್ರಹ್ಮಲೋಕವನ್ನು ಪಡೆಯುತ್ತಾನೆಂದು ಪಾಣಿನಿಯ ಶಿಕ್ಷೆಯಲ್ಲಿ ಹೇಳಿದೆ.

ಇವಾರು ಅಂಗಗಳಲ್ಲಿ ಮೊದಲಿನ ನಾಲ್ಕು ಅಂಗಗಳು ವೇದಗಳ ಅರ್ಥವನ್ನು ತಿಳಿಸುವುದಕ್ಕಾಗಿಯೂ, ವೇದಮಂತ್ರಗಳ ಅಕ್ಷರಗಳ ಉಚ್ಚಾರಣಾಕ್ರಮವನ್ನು ತಿಳಿಸುವುದಕ್ಕಾಗಿಯೂ ಏರ್ಪಟ್ಟಿವೆ. ಕೊನೆಯ ಕಲ್ಪ, ಜ್ಯೋತಿಷಗಳೆರಡು ಅಂಗಗಳು ವೇದ ವಿಹಿತವಾದ ಧರ್ಮ ಕರ್ಮಗಳನ್ನು ತಿಳಿಸುವುದಕ್ಕೂ ಮತ್ತು ಕರ್ಮಾನುಷ್ಠಾನ ಮಾಡುವುದಕ್ಕೆ ಸರಿಯಾದ ಕಾಲಗಳನ್ನು ತಿಳಿಸುವುದಕ್ಕೂ ಹೊರಟಿವೆ ಎಂದು ಸಾಮಾನ್ಯವಾಗಿ ಹೇಳಬಹುದು.

## ಶಿಕ್ಷಾ

ಶಿಕ್ಷಾ ಎಂದರೆ ಬೋಧನೆ ಅಥವಾ ಕಲಿಸುವಿಕೆ ಎಂದು ಅರ್ಥವಾಗುತ್ತದೆ. "ಕಲಿಸು" ಎಂಬ ಅರ್ಥದ "ಶಿಕ್ಷ್" ಎಂಬ ಧಾತುವಿನಿಂದ 'ಶಿಕ್ಷಾ' ಎಂಬ ಪದವು ನಿಷ್ಪನ್ನವಾಗಿದೆ. ಈ ಶಿಕ್ಷಾ ಗ್ರಂಥಗಳು ವೇದಗಳನ್ನು ಅಭ್ಯಾಸಮಾಡುವ, ಕಲಿಯುವ ಕ್ರಮವನ್ನೂ, ಪದಪಾಠ, ಕ್ರಮಪಾಠಗಳ ಕ್ರಮವನ್ನೂ, ವೇದಗಳ ಉದಾತ್ತಾನುದಾತ್ತಾದಿ ಸ್ವರೋಚ್ಚಾರಣೆಗಳ ರೀತಿಯನ್ನೂ ಬೋಧಿಸುತ್ತವೆ. ಆದ್ದರಿಂದಲೇ ಇವಕ್ಕೆ 'ಶಿಕ್ಷಾ' ಎಂಬ ಹೆಸರು ಸಾರ್ಥಕವಾಗಿದೆ. ವೇದಗಳಲ್ಲಿರುವ ಉದಾತ್ತಾದಿ ಸ್ವರಗಳಿಗೆ ಅತ್ಯಂತ ಮಹತ್ವವಿದೆ. ಈ ಸ್ವರೋಚ್ಚಾರಣೆಗಳನ್ನು ಸ್ವಲ್ಪ ಹೆಚ್ಚು ಕಡಿಮೆ ಮಾಡಿದರೂ ವೇದದ ಅರ್ಥವು ಬದಲಾವಣೆಯಾಗುವುದರಿಂದ ಅನೇಕ ಪಾಪಗಳು, ಅನರ್ಥಗಳು ಸಂಭವಿಸುತ್ತವೆ. ಅನಿಷ್ಟಗಳಾಗುತ್ತವೆ. ಆದ್ದರಿಂದ ವೇದಾಭ್ಯಾಸ ಮಾಡುವಾಗ ಮಂತ್ರಗಳೊಳಗಿನ ಸ್ವರವ್ಯತ್ಯಾಸವು ಬಾರದಂತೆ ನೋಡಿಕೊಳ್ಳಲು-ಪ್ರಧಾನವಾಗಿ ಅದನ್ನು ಬೋಧಿಸುವುದಕ್ಕಾಗಿಯೇ ಪ್ರತ್ಯೇಕವಾದ ಒಂದು ವೇದಾಂಗವೆಂದು ಶಿಕ್ಷೆಯನ್ನು ವಿಧಿಸಿದ್ದಾರೆ. ಇಂತಹ ಶಿಕ್ಷಾಗ್ರಂಥಗಳು ಪ್ರತಿಯೊಂದು ವೇದಗಳ ಪ್ರತಿಯೊಂದು ಶಾಖೆಗಳಿಗೂ ಒಂದೊಂದು ಪ್ರತ್ಯೇಕವಾಗಿಯೇ ಇದ್ದುವೆಂದು ತಿಳಿದುಬರುತ್ತದೆ.

ಶಿಕ್ಷಾಗ್ರಂಥಗಳ ಸಮುದಾಯದಲ್ಲಿ ಅತ್ಯಂತ ಪ್ರಾಚೀನವಾದವು ಪ್ರಾತಿಶಾಖ್ಯ ಗ್ರಂಥಗಳಿರಬೇಕೆಂದು ಊಹಿಸಲಾಗಿದೆ. ಇವು ಪಾಣಿನಿಯ ಕಾಲಕ್ಕಿಂತಲೂ ಪ್ರಾಚೀನವಾಗಿರುತ್ತವೆ. ಪಾಣಿನಿಯ ಕಾಲವು ಕ್ರಿ. ಪೂ. ೪ ನೆಯ ಶತಮಾನವೆಂದು ವಿಮರ್ಶಕರು ಹೇಳುತ್ತಾರೆ, ಆದರೆ ದುರ್ಗಾಪ್ರಸಾದದ್ವಿವೇದಿಗಳು ಪಾಣಿನಿಯ ಕಾಲವು ಕಲಿಗತ ಸುಮಾರು ೪ ನೆಯ ಶತಮಾನವಿರಬೇಕೆಂದು ಹೇಳುತ್ತಾರೆ. ಅಂದರೆ ಕ್ರಿ. ಪೂ. ೨೫೦೦ ವರ್ಷಗಳ ಹಿಂದೆ ಪಾಣಿನಿಯ ಕಾಲವೆಂದು ದುರ್ಗಾಪ್ರಸಾದರ ಅಭಿಪ್ರಾಯವಾಗುತ್ತದೆ. ಬಹುಮಂದಿ ವಿಮರ್ಶಕರು ಇವರ ಅಭಿಪ್ರಾಯವನ್ನು

ಒಪ್ಪುವುದಿಲ್ಲ. ಪ್ರಾತಿಶಾಖ್ಯ ಗ್ರಂಥಗಳು ಕ್ರಿ.ಪೂ.೫-೬ ನೆಯ ಶತಮಾನಗಳ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದವು ಎಂಬುದಕ್ಕೆ ಯಾರದೂ ಭಿನ್ನಾಭಿಪ್ರಾಯ ವಿರುವುದಿಲ್ಲ. ಈ ಪ್ರಾತಿಶಾಖ್ಯ ಗ್ರಂಥಗಳು ಪ್ರತಿಯೊಂದು ವೇದದ ಪ್ರತಿಯೊಂದು ಶಾಖೆಗಳಿಗೂ ಪ್ರತ್ಯೇಕವಾಗಿದ್ದವು. ಇವು ಪ್ರತಿಯೊಂದು ಶಾಖೆಗೂ ಒಂದೊಂದರಂತೆ ಪ್ರತ್ಯೇಕವಾಗಿದ್ದುದರಿಂದಲೇ ಇವಕ್ಕೆ ಪ್ರಾತಿ ಶಾಖ್ಯಗಳೆಂಬ ಹೆಸರು ಪ್ರಸಿದ್ಧವಾಗಿದೆ. ಈಗ ಉಪಲಬ್ಧವಾಗಿರುವ ಪ್ರಾತಿಶಾಖ್ಯಗ್ರಂಥಗಳು ಕೇವಲ ಐದುಮಾತ್ರ. ಇವುಗಳಲ್ಲಿ ಒಂದು ಋಗ್ವೇದದ ಪ್ರಾತಿಶಾಖ್ಯ, ಒಂದು ಕೃಷ್ಣಯಜುರ್ವೇದದ ಪ್ರಾತಿ ಶಾಖ್ಯ, ಒಂದು ಸಾಮವೇದದ ಪ್ರಾತಿಶಾಖ್ಯ, ಒಂದು ಶುಕ್ಲಯಜು ರ್ವೇದದ ಪ್ರಾತಿಶಾಖ್ಯ. ಒಂದು ಅಥರ್ವಣವೇದದ ಪ್ರಾತಿಶಾಖ್ಯ. ಹೀಗೆ ಪ್ರತಿಯೊಂದು ವೇದಗಳಿಗೂ ಒಂದೊಂದರಂತೆ ಐದು ಪ್ರಾತಿಶಾಖ್ಯ ಗ್ರಂಥಗಳು ಮಾತ್ರ ಈವರೆಗೆ ದೊರೆತಿವೆ. ನಾಲ್ಕು ವೇದಗಳ ವಿಭಿನ್ನ ಶಾಖೆಗಳ ಪ್ರಾತಿಶಾಖ್ಯಗ್ರಂಥಗಳು ಯಾವ ಮೂಲೆಯಲ್ಲಿ ಕಣ್ಮರೆಯಾಗಿಕುಳಿ ತಿವೆಯೋ ಅಥವಾ ನಾಶಹೊಂದಿವೆಯೋ ಅದನ್ನು ಕಾಲವೇ ಹೇಳಬೇಕಾಗಿದೆ.

ಇವುಗಳಲ್ಲಿ ಋಗ್ವೇದದ ಪ್ರಾತಿಶಾಖ್ಯೆಯನ್ನು ಬರೆದವನು ಶೌನಕ ನೆಂಬ ಮುನಿಯು. ಇದಕೆ ಉವ್ವಟನೆಂಬುವನು ಭಾಷ್ಯವನ್ನು ಬರೆದಿ ದ್ದಾನೆ. ಈ ಭಾಷ್ಯದ ಕೆಲವು ಭಾಗವು ಸೂತ್ರದಂತೆಯೂ, ಮತ್ತೆ ಕೆಲವು ಭಾಗವು ಒಂದು ರೀತಿಯ ಗದ್ಯದಂತೆ ವೃತ್ತಿರೂಪವಾಗಿಯೂ ಇರು ವುದು. ಇದರಲ್ಲಿ ಒಟ್ಟು ಮೂರು ಖಂಡಗಳಿವೆ.

ಕೃಷ್ಣಯಜುರ್ವೇದದ ಪ್ರಾತಿಶಾಖ್ಯವು ಅದರ ತೈತ್ತಿರೀಯ ಶಾಖೆಗೆ ಸಂಬಂಧಪಟ್ಟದೆ. ಇದರಲ್ಲಿ ಇಪ್ಪತ್ತು ಜನ ಪ್ರಾಚೀನ ಆಚಾರ್ಯರು ಗಳ ಹೆಸರನ್ನೂ ಸಹ ಹೇಳಿದೆ.

ಶುಕ್ಲಯಜುರ್ವೇದದ ಪ್ರಾತಿಶಾಖ್ಯವು ಅದರ ವಾಜಸನೇಯ ಶಾಖೆಗೆ ಸಂಬಂಧಪಟ್ಟಿದೆ. ಇದನ್ನು ವಾಜಸನೇಯ ಪ್ರಾತಿಶಾಖ್ಯವೆಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ. ಇದನ್ನು ಬರೆದವನು ಕಾತ್ಯಾ

ಯನಾಚಾರ್ಯನೆಂದು ಪ್ರಸಿದ್ಧಿಯಾಗಿದೆ. ಇದರಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ.

ಸಾಮವೇದದ ಪ್ರಾತಿಶಾಖ್ಯವನ್ನು ಪುಷ್ಪಸೂತ್ರವೆಂದು ಕರೆಯು ತ್ತಾರೆ. ಇದನ್ನು ಬರೆದವನು ಪುಷ್ಪನೆಂಬ ಋಷಿಯು. ಇದಕ್ಕೆ ಅಜಾತ ಶತ್ರು ಎಂಬುವನು ಭಾಷ್ಯವನ್ನು ಬರೆದಿದ್ದಾನೆ.

ಅಥರ್ವಣವೇದದ ಪ್ರಾತಿಶಾಖ್ಯವನ್ನು ಬರೆದವನು ಶೌನಕಮುನಿಯು. ಇದರ ರಚನಾಕ್ರಮವು ಇತರ ಪ್ರಾತಿಶಾಖ್ಯ ಗ್ರಂಥಗಳಿಗಿಂತ ತೀರ ಭಿನ್ನವಾಗಿದ್ದು ಶಬ್ದಸಂಸ್ಕಾರವನ್ನೂ ಹೊಂದಿದೆ. ಆದ್ದರಿಂದ ಉಳಿದ ಪ್ರಾತಿಶಾಖ್ಯ ಗ್ರಂಥಗಳಿಗಿಂತ ಇದು ನವೀನವಿರಬೇಕೆಂದು ವಿಮರ್ಶಕರು ಊಹಿಸುತ್ತಾರೆ.

ಇವುಗಳಲ್ಲದೆ ವೃತ್ತಬದ್ಧವಾದ ಅನೇಕ ಶಿಕ್ಷಾಗ್ರಂಥಗಳು ದೊರೆ ಯುತ್ತವೆ. ಶುಕ್ಲಯಜುರ್ವೇದದ ಶಿಕ್ಷಾಗ್ರಂಥವನ್ನು ಬರೆದವನು ಯಾಜ್ಞ ವಲ್ಕ್ಯನೆಂಬುವನು. ಸಾಮವೇದದ ಶಿಕ್ಷಾಗ್ರಂಥವನ್ನು ನಾರದನೆಂಬುವನು ಬರೆದಿದ್ದಾನೆ. ಇವುಗಳಲ್ಲದೆ ಪಾಣಿನಿಯು ಬರೆದ ಒಂದು ಶಿಕ್ಷಾಗ್ರಂಥವಿದೆ. ಇದು ಪ್ರಧಾನವಾಗಿ ಋಗ್ವೇದಕ್ಕೆ ಸಂಬಂಧಪಟ್ಟಿದ್ದರೂ ಇದರೊಳಗಿನ ಅನೇಕ ವಿಷಯಗಳು ಎಲ್ಲಾವೇದಗಳಿಗೂ ಅನ್ವಯಿಸುವಂತಿವೆ.

ಪಾಣಿನಿಯ ಶಿಕ್ಷೆಯಲ್ಲಿ ಒಟ್ಟು ವರ್ಣ (ಅಕ್ಷರ) ಗಳ ಸಂಖ್ಯೆಯು ೬೪ ಇದೆ ಎಂದು ಹೇಳಿದೆ. ಸ್ವರಗಳು ೨೧, ಸ್ಪರ್ಶ (ವರ್ಗೀಯ ವ್ಯಂ ಜನಗಳು) ವರ್ಣಗಳು ೨೫, ಯಾದಿ (ಅವರ್ಗೀಯ ವ್ಯಂಜನ)ಗಳು ೮, ಯಮಕವರ್ಣಗಳು ೪, ಅನುಸ್ವಾರ, ವಿಸರ್ಗ, ಅ ಕ್, ಅ ಪ್, ಅಸ್ಪೃಷ್ಟ, ಳ್ಳೃಕಾರ ಇವಾದು, ಹೀಗೆ ಒಟ್ಟು ೬೪ ಅಕ್ಷರಗಳಿವೆ ಎಂದು ಹೇಳಿ ಈ ಅಕ್ಷ ರಗಳೆಲ್ಲವೂ ಸಂಸ್ಕೃತ, ಪ್ರಾಕೃತ ಭಾಷೆಗಳೆರಡಕ್ಕೂ ಸಂಬಂಧಪಟ್ಟಿವೆಯೆಂದು ಹೇಳಿರುವನು. ಆದರೆ ಇವುಗಳಲ್ಲಿ ಕೆಲವು ಅಕ್ಷರಗಳು ಇಂದಿನ ನಮ್ಮ ವ್ಯವಹಾರದಲ್ಲಿ ಕಾಣಬರುವುದಿಲ್ಲ. ಇದಲ್ಲದೆ, ಅಕ್ಷರಗಳ ಉತ್ಪತ್ತಿಸ್ಥಾನಗಳನ್ನು ಇದರಲ್ಲಿ ಹೇಳಿದೆ ಮತ್ತು ವೇದಾಭ್ಯಾಸ ಮಾಡುವವರು ಹೇಗಿರಬೇಕೆಂಬು ದನ್ನು ಸಹ ಇದರಲ್ಲಿ ಹೇಳಿದೆ. ಮಾಧುರ್ಯ, ಅಕ್ಷರಗಳ ಸ್ಪಷ್ಟವಾದ ಉಚ್ಚಾರಣೆ, ಪದಗಳನ್ನು ಬಿಡಿಯಾಗಿ ಹೇಳುವಿಕೆ, ಮಧುರ ಸ್ವರ, ಧೈರ್ಯ,

ಲಯಸಾಮರ್ಥ್ಯ ಇವಾರು ಗುಣಗಳು ಉತ್ತಮ ಪಾಠಕನ ಲಕ್ಷಣಗಳೆಂದು ಹೇಳಿದೆ.

" ಮಾಧುರ್ಯಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ||
ಧೈರ್ಯಂ ಚ ಲಯಸಾಮರ್ಥ್ಯಂ ಷಡೇತೇ ಪಾಠಕಾ ಗುಣಾಃ||"

ಇದರಂತೆಯೇ ವೇದಾಭ್ಯಾಸ ಮಾಡುವವರಲ್ಲಿ ಇರಬಾರದಾದ ಕೆಲವು ದುರ್ಗುಣಗಳನ್ನು ಸಹ ಇದರಲ್ಲಿ ಹೇಳಿದೆ. ಗೀತೀ (ರಾಗ ಮಾಡಿ ಹೇಳುವವನು), ಶೀಘ್ರೀ (ಅತಿವೇಗವಾಗಿ ಹೇಳುವವನು), ಶಿರಃ ಕಂಪೀ(ತಲೆ ಅಲ್ಲಾಡಿಸುತ್ತಾ ಹೇಳುವವನು), ಲಿಖಿತ ಪಾಠಕಃ (ಬರೆದುಕೊಂಡು ಓದುವವನು ಅಥವಾ ಪುಸ್ತಕವನ್ನು ಇಟ್ಟುಕೊಂಡು ಓದುವವನು) ಅನರ್ಥಜ್ಞಃ (ಅರ್ಥ ತಿಳಿಯದವನು), ಅಲ್ಪಕಂಠಃ (ಕಿರುಧ್ವನಿಯವನು) ಇವಾರು ಗುಣವುಳ್ಳವನು ಪಾಠಕಾಧಮನೆಂದು ಹೇಳಿದೆ.

"ಗೀತೀ ಶೀಘ್ರೀ ಶಿರಃಕಂಪೀ ತಥಾ ಲಿಖಿತಪಾಠಕಃ
ಅನರ್ಥಜ್ಞೋಽಲ್ಪಕಂಠಶ್ಚ ಷಡೇತೇ ಪಾಠಕಾಧಮಾಃ ||"

ಇದಲ್ಲದೆ ವೇದ ಮಂತ್ರಗಳಲ್ಲಿ ಉಪಯೋಗಿಸುವ ಉದಾತ್ತಾದಿ ಸ್ವರಗಳನ್ನು ಯಾವ ಯಾವ ಸ್ವರಗಳಲ್ಲಿ ಹೇಳಬೇಕೆಂಬುದನ್ನೂ ಸಹ ಇದರಲ್ಲಿ ಹೇಳಿದೆ. ವೇದಮಂತ್ರಗಳನ್ನು ಹೇಳುವಾಗ ಉದಾತ್ತ, ಅನುದಾತ್ತ, ಸ್ವರಿತಗಳೆಂಬ ಮೂರು ಸ್ವರಗಳನ್ನುಪಯೋಗಿಸಲಾಗುತ್ತದೆ. ಇವುಗಳಲ್ಲಿ ಉದಾತ್ತ ಸ್ವರಗಳನ್ನು ಸಂಗೀತ ಶಾಸ್ತ್ರದಲ್ಲಿನ ನಿಷಧ, ಗಾಂಧಾರಗಳ ಸ್ಥಾಯಿಗಳಲ್ಲಿಯೂ. ಅನುದಾತ್ತ ಸ್ವರಗಳನ್ನು ಋಷಭ, ಧೈವತ ಸ್ಥಾಯಿಗಳಲ್ಲಿಯೂ, ಸ್ವರಿತ ಸ್ವರಗಳನ್ನು ಷಡ್ಜ, ಮಧ್ಯಮ, ಪಂಚಮ ಸ್ಥಾಯಿಗಳಲ್ಲಿಯೂ ಹೇಳಬೇಕೆಂದು ನಿಯಮಿಸಿರುವನು.

"ಉದಾತ್ತೇ ನಿಷಧಗಾಂಧಾರಾವನುದಾತ್ತೇ ಋಷಭಧೈವತೌ||
ಸ್ವರಿತಪ್ರಭವಾ ಹ್ಯೇತೇ ಷಡ್ಜಮಧ್ಯಮಪಂಚಮಾಃ || "

ಈ ರೀತಿಯಾಗಿ ವೇದದ ಭಾಷೆಗೆ ಮತ್ತು ವೇದಾಭ್ಯಾಸಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಮಣಿಸಿಯು ಶಿಕ್ಷೆಯಲ್ಲಿ ವಿವರಿಸ

ಲಾಗಿದೆ. ಈ ಗ್ರಂಥವು ಪಾಣಿನಿಯ ಶಿಕ್ಷೆ ಎಂದು ಪ್ರಸಿದ್ಧವಾಗಿದ್ದರೂ ಇದನ್ನು ಬರೆದವರು ಪಾಣಿನಿಯ ಶಿಷ್ಯರಲ್ಲಿ ಯಾರಾದರೂ ಇರಬಹುದೇ ಎಂಬ ಸಂದೇಹಕ್ಕೆ ಅವಕಾಶವಿದೆ. ಈ ಗ್ರಂಥದ ಕೊನೆಯ ಮೂರು ಪದ್ಯಗಳಿಂದ ಪಾಣಿನಿಗೆ ನಮಸ್ಕಾರ ಮಾಡಿರುವುದನ್ನು ನೋಡಿದರೆ ಈ ಸಂದೇಹಕ್ಕೆ ಬಲವು ಬರುವಂತಿದೆ.

"ಕೃತ್ಸ್ನಂ ವ್ಯಾಕರಣಂ ಪ್ರೋಕ್ತಂ ತಸ್ಮೈ ಪಾಣಿನಯೇ ನಮಃ॥೧॥
ತಮಶ್ಚ ಜ್ಞಾನಸಂಭಿನ್ನಂ ತಸ್ಮೈ ಪಾಣಿನಯೇ ನಮಃ॥೨॥
ಚಕ್ಷುರುನ್ಮೀಲಿತಂ ಯೇನ ತಸ್ಮೈ ಪಾಣಿನಯೇ ನಮಃ ॥೩॥

ಎಂದು ಮೂರು ಪದ್ಯಗಳ ಉತ್ತರಾರ್ಧದಲ್ಲಿ ಪ್ರತ್ಯಕ್ಷವಾಗಿ ಪಾಣಿನಿಗೆ ನಮಸ್ಕಾರ ಮಾಡಿರುವುದನ್ನು ಕಾಣುವಂತಿದೆ. ಆದ್ದರಿಂದ ಪಾಣಿನಿಯು ಕಲಿಸಿದ ವಿಷಯವನ್ನು ಅವನ ಯಾವನಾದರೊಬ್ಬ ಶಿಷ್ಯನು ಈ ಶಿಕ್ಷಾ ಗ್ರಂಥವಾಗಿ ಬರೆದಿರಬಹುದೇ ಎಂಬುದು ಯೋಚಿಸಬೇಕಾದ ವಿಷಯವಾಗಿದೆ.

## ಛಂದಃ

ಛಂದಃ = ಛಂದಸ್ಸು ಎಂದರೆ ಅಕ್ಷರ ಮಾತ್ರೆಗಳ ಗಣಗಳಿಂದ ಕೂಡಿದ ಪದ್ಯಗಳೆಂದು ಸಾಮಾನ್ಯವಾಗಿ ಹೇಳಬಹುದು. ವೇದ ಮಂತ್ರ ಗಳು ಅನೇಕ ವಿಧವಾದ ಛಂದಸ್ಸುಗಳಲ್ಲಿ ಬದ್ಧವಾಗಿರುತ್ತವೆ. ಛಂದಸ್ಸಿನ ಜ್ಞಾನವಿಲ್ಲದಿದ್ದರೆ ಒಂದು ವಿಧವಾದ ವೃತ್ತಬದ್ಧವಾದ ವೇದ ಮಂತ್ರ ಗಳನ್ನು ಸುಲಭವಾಗಿ, ಸರಳವಾಗಿ ಹೇಳುವುದಕ್ಕೆ ಬರುವುದಿಲ್ಲ. ಆದ್ದ ರಿಂದ ವೇದಾಭ್ಯಾಸ ಮಾಡುವುದಕ್ಕೆ ಛಂದಸ್ಸಿನ ಜ್ಞಾನವು ಅತ್ಯಂತ ಅವ ಶ್ಯವಾಗಿ ಬೇಕಾಗುತ್ತದೆ. ಇದನ್ನು ತಿಳಿಸುವುದಕ್ಕಾಗಿಯೇ ವೇದದೊಳ ಗಿನ ಛಂದಸ್ಸುಗಳನ್ನು ತಿಳಿಸುವ, ವಿವರಿಸುವ ಈ ಗ್ರಂಥಸಮುದಾಯಕ್ಕೆ "ಛಂದಸ್ಸು" ಎಂದು ಹೆಸರು ಕೊಟ್ಟು ಇವುಗಳನ್ನು ಒಂದು ವೇದಾಂಗ ವೆಂದು ಪರಿಗಣಿಸಿದ್ದಾರೆ.

ಛಂದಸ್ಸುಗಳ ಸ್ವರೂಪಗಳನ್ನು ಕೆಲವು ಕಡೆ ಬ್ರಾಹ್ಮಣ ಗ್ರಂಥ ಗಳಲ್ಲಿ ಹೇಳಿದೆ. ಆದರೆ ವಿಶೇಷವಾಗಿ ಶಾಂಖ್ಯಾಯನ ಶ್ರೌತ ಸೂತ್ರ,

ಋಗ್ವೇದದ ಪ್ರಾತಿಶಾಖ್ಯದ ಕೊನೆಯ ಮೂರು ಪಟಲಗಳಲ್ಲಿಯೂ, ಸಾಮ ವೇದದ ಕಲ್ಪಸೂತ್ರಗ್ರಂಥದಲ್ಲಿಯೂ ಸ್ವಲ್ಪ ವಿವರವಾಗಿ ಇವು ವರ್ಣಿತ ವಾಗಿವೆ. ಆದರೂ ಛಂದಸ್ಸಿಗೆ ಸಂಬಂಧಿಸಿದ ಸ್ವತಂತ್ರವಾದ ಪ್ರತ್ಯೇಕ ಗ್ರಂಥವೆಂದರೆ ಪಿಂಗಲಾಚಾರ್ಯರು ಬರೆದ "ಪಿಂಗಲ ಛಂದಸ್ಸು"ನ್ನು ಬಿಟ್ಟರೆ ಬೇರೆ ಯಾವುದೂ ಈವರೆಗೆ ದೊರೆತಿಲ್ಲ. ಪಿಂಗಲ ಛಂದಸ್ಸಿನಲ್ಲಿ ವೈದಿಕ ಮತ್ತು ಲೌಕಿಕಛಂದಸ್ಸುಗಳೆರಡನ್ನೂ ವಿವರಿಸಿದ್ದರೂ ವೈದಿಕ ಛಂದಸ್ಸುಗಳನ್ನು ಪರ್ಯಾಪ್ತವಾಗಿ ಇದರಿಂದ ಪರಿಚಯ ಮಾಡಿಕೊಳ್ಳು ವಂತಿದೆ. ಆದ್ದರಿಂದ ಇದನ್ನೇ "ವೈದಿಕ ಛಂದೋ ಗ್ರಂಥ" ವೆಂದು ಕರೆದು, ವೇದಾಂಗಗಳೊಳಗೆ ಸೇರಿಸಲಾಗಿದೆ.

ಇದರಲ್ಲಿ ಪ್ರಧಾನವಾಗಿರುವ ಛಂದಸ್ಸುಗಳು ಆರು ಎಂದು ಹೇಳಿದೆ. ಆರು ಛಂದಸ್ಸುಗಳ ರೂಪಾಂತರಗಳಾದ ಸುಮಾರು ೪೮-೫೦ ವೈದಿಕ ಛಂದಸ್ಸುಗಳ ಲಕ್ಷಣಗಳನ್ನು ಇದರಲ್ಲಿ ವಿವರಿಸಿದ್ದಾರೆ. ಇವಲ್ಲದೇ ಲೌಕಿಕ ವಾದ ಸುಮಾರು ೮೦-೮೫ ಛಂದಸ್ಸುಗಳನ್ನೂ ಅವುಗಳ ಲಕ್ಷಣಗಳನ್ನೂ ಸಹ ಇದರಲ್ಲಿ ವಿವರಿಸಲಾಗಿದೆ. ಇದರಲ್ಲಿ ವಿವರಿಸಿದ ಎಲ್ಲ ಛಂದಸ್ಸು ಗಳೂ ಸಾಮಾನ್ಯವಾಗಿ ವೇದಗಳಲ್ಲಿ ಬಂದಿವೆ. ಇವುಗಳಲ್ಲಿ ಮೂಲಭೂತ ವಾದಛಂದಸ್ಸು, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್ ಜಗತೀ ಇವಾರು. ಇವಾರು ಛಂದಸ್ಸುಗಳಲ್ಲಿಯೇ ಋಗ್ವೇದದ ಹತ್ತರಲ್ಲಿ ಒಂಭತ್ತು ಭಾಗದಷ್ಟು ಮಂತ್ರಗಳಿರುತ್ತವೆ; ಇವುಗಳಲ್ಲಿಯೂ ಸಹ ತ್ರಿಷ್ಟುಪ್, ಗಾಯತ್ರೀ, ಜಗತೀ ಇವು ಮೂರು ಛಂದಸ್ಸುಗಳಲ್ಲಿಯೇ ಋಗ್ವೇದದ ಅರ್ಧಭಾಗಕ್ಕಿಂತ ಹೆಚ್ಚು ಮಂತ್ರಗಳಿವೆಯೆಂದು ಹೇಳಬಹುದು. ಋಗ್ವೇದದೊಳಗೆ ಉಪಯೋಗಿಸಿದ ಛಂದಸ್ಸುಗಳನ್ನೇ ಬಹುಮಟ್ಟಿಗೆ ಇತರ ವೇದಗಳಲ್ಲಿಯೂ ಉಪಯೋಗಿಸಲಾಗಿದೆ. ಹೊಸ ಛಂದಸ್ಸುಗಳು ಯಾವುವೂ ಹೆಚ್ಚಾಗಿ ಕಾಣಿಸುವುದಿಲ್ಲ. ವೇದಗಳಲ್ಲಿ ಬಳಸಲಾದ ಛಂದಸ್ಸುಗಳ ಅಕಾ ರಾದಿ ಪಟ್ಟಿಯನ್ನು ಕೊನೆಗೆ ಪರಿಶಿಷ್ಟದಲ್ಲಿ ಕೊಟ್ಟಿದೆ. ಅವುಗಳಲ್ಲಿ ಕೆಲವು ವೃತ್ತಗಳು ಕೇವಲ ಮೂರು ನಾಲ್ಕು ಮಂತ್ರಗಳಿಗೆ ಮಾತ್ರ ಉಪ ಯೋಗಿಸಲ್ಪಟ್ಟಿವೆ.

# ನಿರುಕ್ತ

ನಿರುಕ್ತವು ವೇದಗಳಿಗೆ ಕಣ್ಣಿನಂತಿರುವ ಅಂಗವು. ಇದರಲ್ಲಿ ವೇದದಲ್ಲಿ ಬರುವ ಅನೇಕ ಶಬ್ದಗಳ ವ್ಯುತ್ಪತ್ತಿಗಳನ್ನು ವಿವರಿಸಿದ್ದಾರೆ. ವೇದಗಳ ಅರ್ಥವನ್ನು ಸರಿಯಾಗಿ ತಿಳಿಯಬೇಕಾದರೆ ಅದರೊಳಗಿನ ಶಬ್ದಗಳ ವ್ಯುತ್ಪತ್ತಿಯು ಸರಿಯಾಗಿ ತಿಳಿದರೆಮಾತ್ರ ಸಾಧ್ಯವಾಗುತ್ತದೆ. ವೇದಗಳಲ್ಲಿರುವ ಅಪೂರ್ವವಾದ ಶಬ್ದಗಳನ್ನೂ, ವಿಚಿತ್ರವಾದ ರೂಪಕಗಳನ್ನೂ ಸುಲಭವಾಗಿ ತಿಳಿದುಕೊಳ್ಳಲು ಸಾಧ್ಯವಾಗುವಂತಿಲ್ಲ. ಇವುಗಳನ್ನೆಲ್ಲಾ ಸರಿಯಾಗಿ ತಿಳಿಸಿಕೊಡುವುದಕ್ಕೆ ಹೊರಟಿರುವ ಈ ನಿರುಕ್ತಗ್ರಂಥಗಳು ಆ ಕೆಲಸವನ್ನು ಸಾಕಷ್ಟು ಯಶಸ್ವಿಯಾಗಿ ಮಾಡಲು ಸಮರ್ಥವಾಗಿವೆ ಎಂದು ಹೇಳಬಹುದು.

ಈವರೆಗೆ ನಮಗೆ ದೊರೆತಿರುವ ನಿರುಕ್ತಗ್ರಂಥವು ಒಂದೇ ಒಂದು. ಅದನ್ನು ಬರೆದವನು ಯಾಸ್ಕಾಚಾರ್ಯನು. ಯಾಸ್ಕನ ನಿರುಕ್ತಕ್ಕೆ ಮೂಲವಾದ ಗ್ರಂಥವು ನಿಘಂಟು ಎಂಬುದು. ಈ ನಿಘಂಟು ಈಗ ದೊರೆತಿದೆ ಯಾದರೂ ಅದನ್ನು ಬರೆದವರು ಯಾರು ? ಅವರ ದೇಶ ಕಾಲಗಳಾವುವು ? ಎಂಬ ಯಾವ ಸಂಗತಿಯೂ ತಿಳಿದುಬಂದಿಲ್ಲ. ಈ ನಿಘಂಟಿನಲ್ಲಿ ಐದು ಅಧ್ಯಾಯಗಳಿವೆ. ಇದರಲ್ಲಿ, ವೇದಗಳಲ್ಲಿ ಬರುವ ಅನೇಕ ಪದಗಳ ಪರ್ಯಾಯ ಪದಗಳನ್ನೂ, ಕಠಿಣವಾದ ಪದಗಳ ಪಟ್ಟಿಯನ್ನೂ, ವೇದಗಳಲ್ಲಿ ವರ್ಣಿತವಾದ ದೇವತೆಗಳ ಪಟ್ಟಿಯನ್ನೂ ಕೊಟ್ಟಿರುವುದರಿಂದ, ಇದನ್ನು "ವೈದಿಕಶಬ್ದಕೋಶ" ವೆಂದು ಕರೆಯಬಹುದು. ಇದರೊಳಗಿನ ಮೊದಲಿನ ಮೂರು ಅಧ್ಯಾಯಗಳಲ್ಲಿ ಪೃಥ್ವೀ, ಅಂತರಿಕ್ಷ, ಅಗ್ನಿ, ಇಂದ್ರ ಮೊದಲಾದ ೬೯ ಪದಗಳಿಗೆ ಪರ್ಯಾಯಪದಗಳನ್ನು ಕೊಟ್ಟಿದೆ. ಇವುಗಳಲ್ಲಿ ಕೆಲವು ಶಬ್ದಗಳಿಗೆ ಐದು, ಆರರಿಂದ ಹಿಡಿದು ನೂರರವರೆಗೆ ವೇದಗಳಲ್ಲಿ ಬಳಸಲಾದ ಪರ್ಯಾಯ ಪದಗಳನ್ನು ಕೊಟ್ಟಿದ್ದಾರೆ. ಇದರ ನಾಲ್ಕನೆಯ ಅಧ್ಯಾಯದಲ್ಲಿ ವೇದಗಳೊಳಗಿನ ಕಠಿಣವಾದ ೨೭೮ ಪದಗಳನ್ನು ಸಂಖ್ಯಾ ಸಹಿತವಾಗಿ ಕೊಡಲಾಗಿದೆ. ಐದನೆ ಅಧ್ಯಾಯದಲ್ಲಿ ವೈದಿಕದೇವತೆಗಳ

ಹೆಸರುಗಳನ್ನು ಕೊಟ್ಟಿದ್ದಾರೆ. ಇದರಲ್ಲಿ ಕೊಟ್ಟಿರುವ ದೇವತೆಗಳು ೧೫೧ ಇವೆ. ನಿಘಂಟಿಗೆ ಸಮಾಮ್ನಾಯವೆಂಬುದು ಮತ್ತೊಂದು ಹೆಸರು. ಈ ನಿಘಂಟಿಗೆ ಯಾಸ್ಕನು ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಯಾಸ್ಕನು ಬರೆದ ಈ ವ್ಯಾಖ್ಯಾನವೇ ನಿರುಕ್ತವೆಂದು ಪ್ರಸಿದ್ಧವಾಗಿದೆ. "ನಿರುಕ್ತ" ಎಂದರೆ "ಸ್ಪಷ್ಟವಾದ ವಿವರಣೆ" ಎಂದು ಅರ್ಥ ಹೇಳಬಹುದು. ವೈದಿಕ ಶಬ್ದಕೋಶವಾದ ನಿಘಂಟಿಗೆ ಯಾಸ್ಕನು ಬರೆದ ವ್ಯಾಖ್ಯಾನವು ನಿರುಕ್ತವೆಂದು ಹೆಸರು ಹೊಂದಿರುವುದು ಸಾರ್ಥಕವಾಗಿದೆ ಎಂದು ಹೇಳಬಹುದು. ಸಂಸ್ಕೃತ ವಾಙ್ಮಯದ ವ್ಯಾಖ್ಯಾನಗ್ರಂಥಗಳಲ್ಲಿ ಈ ನಿರುಕ್ತವೇ ಅತ್ಯಂತ ಪ್ರಾಚೀನ ವಿರಬೇಕೆಂದು ಇಂದಿನ ವಿಮರ್ಶಕರು ಅಭಿಪ್ರಾಯಪಡುತ್ತಾರೆ.

ಯಾಸ್ಕನ ಕಾಲವು ಕ್ರಿ. ಪೂ. ಏಳನೆಯ ಶತಮಾನವಿರಬೇಕೆಂದು ಅನೇಕ ವಿಮರ್ಶಕರ ಅಭಿಪ್ರಾಯವಿದೆ. ಆದರೆ ದುರ್ಗಾಪ್ರಸಾದದ್ವಿವೇದಿಗಳು ಪಾಣಿನಿಯ ಕಾಲವು ಕಲಿಗತ ನಾಲ್ಕನೆಯ ಶತಮಾನವೆಂದು ಹೇಳಿರುವುದು ದೃಢಪಟ್ಟರೆ, ಪಾಣಿನಿಗಿಂತ ಪರಮ ಪ್ರಾಚೀನನಾದ ಯಾಸ್ಕನ ಕಾಲವು ಅದಕ್ಕಿಂತಲೂ ಬಹಳ ಹಿಂದೆ ಹೋಗಬೇಕಾಗುತ್ತದೆ. ಅಂದರೆ ಕ್ರಿ. ಪೂ. ೨೫೦೦ ವರ್ಷಗಳಿಗಿಂತಲೂ ಬಹಳ ಹಿಂದೆಯೇ ಯಾಸ್ಕನು ಇದ್ದು ಗ್ರಂಥರಚನೆ ಮಾಡಿರಬೇಕಾಗುತ್ತದೆ.

ನಿಘಂಟಿನ ಐದು ಅಧ್ಯಾಯಗಳಲ್ಲಿ ವರ್ಣಿತವಾದ ವಿಷಯಗಳನ್ನು ಯಾಸ್ಕನು ವ್ಯಾಖ್ಯಾನ ಬರೆಯುವಾಗ ಹನ್ನೆರಡು ಅಧ್ಯಾಯಗಳಲ್ಲಿ ವಿವರಿಸಿದ್ದಾನೆ. ಯಾಸ್ಕನು ನಿರುಕ್ತದಲ್ಲಿ ವೈದಿಕ ಶಬ್ದಗಳ ವ್ಯುತ್ಪತ್ತಿಗಳನ್ನು ಬಿಡಿಸುವಾಗ ವೇದ ಮಂತ್ರಗಳ ಉದಾಹರಣೆ ಸಹಿತವಾಗಿ ಬರೆದಿದ್ದಾನೆ. ಈ ನಿರುಕ್ತದಲ್ಲಿ ಪೂರ್ವಷಟ್ಕ, ಉತ್ತರಷಟ್ಕವೆಂದು ಪ್ರಧಾನವಾದ ಎರಡು ಭಾಗಗಳಿವೆ. ಷಟ್ಕ ಎಂದರೆ ಆರರಿಂದ ಕೂಡಿದ್ದು, ಆರು ಅಧ್ಯಾಯಗಳುಳ್ಳದ್ದು ಎಂದು ಅರ್ಥವಾಗುತ್ತದೆ. ಅದರಂತೆಯೇ ನಿರುಕ್ತದ ಷಟ್ಕಗಳಲ್ಲಿಯೂ ಆರು ಆರು ಅಧ್ಯಾಯಗಳಿರುತ್ತವೆ. ಆದರೆ ಇಂದು ನಮಗೆ ದೊರೆತಿರುವ ನಿರುಕ್ತದ ಉತ್ತರ ಷಟ್ಕದಲ್ಲಿ ಎಂಟು ಅಧ್ಯಾಯಗಳಿವೆ. ಇದರಲ್ಲಿನ ಕೊನೆಯ ಎರಡು ಅಧ್ಯಾಯಗಳು ಪ್ರಕ್ಷಿಪ್ತ ಭಾಗವಾಗಿರಬೇಕು

ಅನಂತರದ ಕಾಲದಲ್ಲಿ ಯಾರೋ ಬರೆದು ಸೇರಿಸಿರಬೇಕೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಇಲ್ಲದಿದ್ದರೆ ಇದಕ್ಕೆ ಷಟ್ಕವೆಂಬ ಹೆಸರು ವ್ಯರ್ಥವಾಗುತ್ತದೆ.

ಈ ನಿರುಕ್ತದ ಮೊದಲನೆಯ ಅಧ್ಯಾಯದಲ್ಲಿಯೂ ಎರಡನೆಯ ಅಧ್ಯಾಯದ ಮೊದಲಿನ ನಾಲ್ಕು ಪ್ರಕರಣಗಳಲ್ಲಿಯೂ ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂದು ಶಬ್ದಗಳ ಸಮುದಾಯವನ್ನು ನಾಲ್ಕು ತರಹ ವಿಭಾಗಿಸಿ, ಅವುಗಳ ಪ್ರಭೇದಗಳನ್ನೂ ವಿವರಿಸಲಾಗಿದೆ. ಈ ಭಾಗವು ಮುಂದಿನ ನಿರುಕ್ತ ಗ್ರಂಥದ ಪೀಠಿಕಾ ರೂಪವಾಗಿದೆ ಎಂದು ಹೇಳಬಹುದು. ಎರಡನೆ ಅಧ್ಯಾಯದ ಐದನೆಯ ವರ್ಗದ ಆರಂಭದಲ್ಲಿ "ಅಥಾತೋ ಅನುಕ್ರಮಿಷ್ಯಾಮಃ ಗೌರಿತಿ" ಎಂದು ಆರಂಭಿಸಿ ನಿಘಂಟಿನಲ್ಲಿರುವ ಮೊದಲನೆಯ ಶಬ್ದದ ವಿಷಯವನ್ನು ಎತ್ತಿಕೊಂಡು ವ್ಯಾಖ್ಯಾನವನ್ನು ಬರೆದಿದ್ದಾನೆ. ಇಲ್ಲಿಂದ ಮೂರನೆಯ ಅಧ್ಯಾಯ ಪೂರ್ತಿಯೂ ಗವಾದಿ ಶಬ್ದಗಳ ಪರ್ಯಾಯ ಶಬ್ದಗಳನ್ನು ನಿರೂಪಿಸಲಾಗಿದೆ. ನಾಲ್ಕನೆಯ ಅಧ್ಯಾಯದ ಆರಂಭದಲ್ಲಿ "ಏಕಾರ್ಥಮನೇಕಶಬ್ದಮಿತ್ಯೇತದುಕ್ತಂ" ಒಂದು ಅರ್ಥದ ಅನೇಕ ಶಬ್ದಗಳನ್ನು ಈವರೆಗೆ ಹೇಳಿಯಾಯಿತು ಎಂದು ಹೇಳಿ ನಿಘಂಟಿನೊಳಗಿನ ಮೂರು ಅಧ್ಯಾಯಗಳ ವಿಷಯವನ್ನು ಮುಗಿಸಿರುವನು. ನಿರುಕ್ತದ ನಾಲ್ಕನೆಯ ಅಧ್ಯಾಯದ ಆರಂಭದಲ್ಲಿ "ಅಥಯಾನ್ಯನೇಕಾರ್ಥಾನ್ಯೇಕ ಶಬ್ದಾನಿ ಇತೋ ಅನುಕ್ರಮಿಷ್ಯಾಮಃ" ಒಂದು ಶಬ್ದಕ್ಕಿರುವ ನಾನಾರ್ಥಗಳನ್ನೂ ಇನ್ನು ವಿವರಿಸುತ್ತೇವೆ ಎಂದು ಆರಂಭಿಸಿ, ೪, ೫, ೬ ಈ ಮೂರು ಅಧ್ಯಾಯಗಳು ಪೂರ್ತಿಯೂ, ನಿಘಂಟಿನ ನಾಲ್ಕನೆಯ ಅಧ್ಯಾಯದಲ್ಲಿರುವ ನಾನಾರ್ಥ ವಾಚಕಗಳಾದ ಎಲ್ಲಾ ಕಠಿನ ಪದಗಳಿಗೂ ವೇದಮಂತ್ರಗಳ ದೃಷ್ಟಾಂತದೊಂದಿಗೆ ವಿವರಿಸಲಾಗಿದೆ. ಇಲ್ಲಿಗೆ ಯಾಸ್ಕನ ನಿರುಕ್ತದ ಪ್ರಥಮಷಟ್ಕವು ಮುಗಿಯುತ್ತದೆ.

ಉತ್ತರಷಟ್ಕದಲ್ಲಿ ನಿಘಂಟಿನ ಕೊನೆಯ ಅಧ್ಯಾಯದ ವಿಷಯವು ವಿವರಿಸಲ್ಪಟ್ಟಿದೆ. ಇದರ ಮೊದಲನೆಯ ಅಧ್ಯಾಯವು ಮುಂದಿನ ವಿಷಯಗಳಿಗೆ ಪೀಠಿಕಾ ರೂಪದಲ್ಲಿದೆ. ಇದರಲ್ಲಿ "ದೇವತೆ ಎಂದರೇನು ? ದೇವತೆ

ಗಳನ್ನು ಎಷ್ಟು ಗುಂಪಾಗಿ ವಿಭಾಗಿಸಬಹುದು ? ಮಂತ್ರಗಳೆಂದರೇನು ? ಅವುಗಳ ವಿಭಾಗವೆಷ್ಟು ? " ಮೊದಲಾದ ವಿಷಯಗಳನ್ನು ಚರ್ಚಿಸಲಾಗಿದೆ. " ಪ್ರಾಧಾನ್ಯಸ್ತುತೀನಾಂ ದೈವತಾನಾಂ ತದ್ದೈವತಮಾಚಕ್ಷತೇ॥ ' ಮಂತ್ರಗಳಲ್ಲಿ ಪ್ರಧಾನವಾಗಿ ಸ್ತೋತ್ರಕ್ಕೆ ವಿಷಯವಾದ ಶಕ್ತಿ ಅಥವಾ ವಸ್ತುವು ದೇವತೆಯೆಂದು ಹೇಳಿಸಿಕೊಳ್ಳುತ್ತದೆ ಎಂದು ವೇದದೊಳಗಿನ ದೇವತೆ ಎಂಬುದಕ್ಕೆ ಅರ್ಥವನ್ನು ಬರೆದಿದ್ದಾನೆ. ಇಂತಹ ದೇವತೆಗಳನ್ನು ಸಕಾಮನಾದ ಋಷಿಯು ಅರ್ಥ-ಪ್ರಯೋಜನವನ್ನು ಪಡೆಯುವ ಕಾಮನೆಯಿಂದ ಸ್ತುತಿಮಾಡುವ ವಾಕ್ಯಕ್ಕೆ ಮಂತ್ರವೆಂದು ಹೆಸರು ಎಂದು ಮಂತ್ರಗಳ ಲಕ್ಷಣವನ್ನು "ಯತ್ಕಾಮಃ ಋಷಿರ್ಯಸ್ಯಾಂ ದೇವತಾಯಾಂ ಅರ್ಥಪತ್ಯಮಿಚ್ಛನ್‌ಸ್ತುತಿಂ ಪ್ರಯುಂಕ್ತೇ ಮಂತ್ರಃ" ಎಂದು ಹೇಳಿರುವನು ಹಾಗೆಯೇ ಮುಂದೆ ದೇವತೆಗಳು ಪೃಥಿವೀಸ್ಥಾನೀಯ, ಅಂತರಿಕ್ಷಸ್ಥಾನೀಯ, ದ್ಯೌಸ್ಥಾನೀಯಗಳೆಂದು ಮೂರು ವಿಧವಾಗಿ ವಿಭಾಗಿಸಿ, ಯಾವ ಯಾವ ದೇವತೆಗಳು ಯಾವ ಯಾವ ಗುಂಪಿಗೆ ಸೇರುತ್ತಾರೆಂದು ವಿವರಿಸಲಾಗಿದೆ. ದೇವತೆಗಳಂತೆಯೇ ಮಂತ್ರಗಳೂ ಸಹ ಮೂರು ವಿಧವಾಗಿವೆ ಪರೋಕ್ಷ ಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕಗಳೆಂದು ಮಂತ್ರಗಳು ಮೂರು ವಿಧವಾಗಿವೆ. ಪರೋಕ್ಷಕೃತ ಮಂತ್ರಗಳು ಸಾಮಾನ್ಯವಾಗಿ " ಇಂದ್ರನು ಹೀಗೆ ಮಾಡಲಿ " ಎಂದು ಆಶೀರ್ವಾದ ರೂಪದಲ್ಲಿರುತ್ತವೆ. ಇವುಗಳಲ್ಲಿ ಎಲ್ಲ ವಿಧವಾದ ನಾಮಪದ, ವಿಭಕ್ತಿಗಳನ್ನೂ ಪ್ರಥಮಪುರುಷಪ್ರತ್ಯಯಾಂತವಾದ ಕ್ರಿಯಾಪದಗಳನ್ನೂ ಉಪಯೋಗಿಸಿರುತ್ತಾರೆ. ಪ್ರತ್ಯಕ್ಷಕೃತ ಮಂತ್ರಗಳಲ್ಲಿ ಸಾಮಾನ್ಯವಾಗಿ ಎದುರಿಗೆ ಇರುವ ವ್ಯಕ್ತಿಯನ್ನು ಕೇಳಿಕೊಂಡಂತೆ ಪ್ರಾರ್ಥನೆಯು ಇರುತ್ತದೆ. ಇವುಗಳಲ್ಲಿ " ನೀನು ಹೀಗೆ ಮಾಡು " ಎಂದು ಮಧ್ಯಮಪುರುಷದ ಕ್ರಿಯಾಪದಗಳನ್ನು ಉಪಯೋಗಿಸಿರುತ್ತಾರೆ. ಆಧ್ಯಾತ್ಮಿಕಮಂತ್ರಗಳಲ್ಲಿ " ನಾನು ಹೀಗೆ ಮಾಡಿದೆನು " ಮೊದಲಾದ ಉತ್ತಮ ಪುರುಷದ ಕ್ರಿಯಾಪದವು ಇರುತ್ತದೆ. ಇಂತಹ ಮಂತ್ರಗಳು ಸಾಮಾನ್ಯವಾಗಿ ಆತ್ಮಸ್ತುತಿಯ ರೂಪದಲ್ಲಿ ಇರುತ್ತವೆ. " ಇದಕ್ಕೆ ವಾಗಾಂಭೃಣಿಯು ಕಂಡುಹಿಡಿದ ಬಲಸೂಕ್ತವು ಸರಿಯಾದ ದೃಷ್ಟಾಂತವಾಗುವಂತಿದೆ"

ಎಂದು ಯಾಸ್ಕನು ಹೇಳಿದ್ದಾನೆ. ಹೀಗೆ ಉತ್ತರಷಟ್ಕದ ಮೊದಲನೆಯ ಅಧ್ಯಾಯವು ಅದರ ಮುಂದಿನ ಅಧ್ಯಾಯಗಳಿಗೆ ಪೀಠಿಕಾರೂಪದಲ್ಲಿದೆಯೆಂದು ಹೇಳಬಹುದು. ಈ ಅಧ್ಯಾಯದ ಕೊನೆಯ ಭಾಗದಿಂದ ಮೂರನೆಯ ಅಧ್ಯಾಯ ಪೂರ್ತಿಯಾಗಿ ಪೃಥಿವೀಸ್ಥಾನೀಯ ದೇವತೆಗಳನ್ನೂ, ನಾಲ್ಕು ಐದನೆಯ ಅಧ್ಯಾಯಗಳಲ್ಲಿ ಅಂತರಿಕ್ಷಸ್ಥಾನೀಯವಾದ ದೇವತೆಗಳನ್ನೂ ಆರನೆಯ ಅಧ್ಯಾಯದಲ್ಲಿ ದ್ಯೌಸ್ಥಾನೀಯವಾದ ದೇವತೆಗಳನ್ನೂ ಮಂತ್ರಗಳ ದೃಷ್ಟಾಂತ ಪುರಸ್ಸರವಾಗಿ ವಿವರಿಸಲಾಗಿದೆ.

ಮುಂದಿನ ಪರಿಶಿಷ್ಟವೆಂದು ಹೇಳಬಹುದಾದ ಎರಡು ಅಧ್ಯಾಯಗಳಲ್ಲಿ ಉತ್ತರಷಟ್ಕದ ಮೊದಲನೆಯ ಅಧ್ಯಾಯದ ಕೊನೆಯಲ್ಲಿ ಹೇಳಿದ ಅಗ್ನಿದೇವತೆಗೆ ಸಂಬಂಧಪಟ್ಟ ವಿಷಯಗಳನ್ನು ವಿಶೇಷವಾಗಿ, ವಿವರವಾಗಿ ವರ್ಣಿಸಲಾಗಿದೆ. ಅಪಾರ ಶಕ್ತಿ ಸಂಪನ್ನವಾದ ದೇವತೆಗಳು ಅತಿಸ್ತುತಿಗೆ ಅರ್ಹವಾಗಿವೆಯೆಂದು ಇದರಲ್ಲಿ ಹೇಳಿದೆ. ಈ ಅಧ್ಯಾಯಗಳ ಕೊನೆಯ ಭಾಗದಲ್ಲಿ ಊರ್ಧ್ವಲೋಕಕ್ಕೆ ಹೋಗುವ ರೀತಿಯನ್ನೂ, ಆತ್ಮತತ್ವಕ್ಕೆ ಸಂಬಂಧಪಟ್ಟ ಕೆಲವು ವೇದಾಂತವಿಷಯಗಳನ್ನೂ ಸ್ವಲ್ಪ ವಿವರವಾಗಿ ವರ್ಣಿಸಲಾಗಿದೆ. ಪಂಚಮಹಾಭೂತಗಳನ್ನೂ, ಅವುಗಳ ಗುಣಸ್ವರೂಪಗಳನ್ನೂ ಜನ್ಮಾಂತರ, ಗರ್ಭವಾಸ, ಶರೀರೋತ್ಪತ್ತಿಯ ಕ್ರಮಗಳನ್ನೂ, ಮಾನವನ ಶರೀರದಲ್ಲಿರುವ ಸಂಧಿ, ನಾಡಿ, ಎಲುಬುಗಳ ಸಂಖ್ಯೆಯನ್ನೂ, ಹಾಗೆಯೇ ಮಾನವನಿಗೆ ಅವಶ್ಯವಾಗಿ ಬೇಕಾದ ಆಹಾರ, ಮನುಷ್ಯನು ಮಾಡಬೇಕಾದ ಕರ್ಮ ಮತ್ತು ಕರ್ಮಬಂಧನ, ಮಾನವನ ಅತ್ಯಂತಪರಮ ಹಾಗೂ ಚರಮಗುರಿಯಾದ ಮೋಕ್ಷೋಪಾಯ, ಮೋಕ್ಷಸ್ವರೂಪ ಮೊದಲಾದ ಆಧ್ಯಾತ್ಮಿಕವಿಷಯಗಳನ್ನೂ ಸಹ ಇದರಲ್ಲಿ ವರ್ಣಿಸಲಾಗಿದೆ.

ಹೀಗೆ ನಿರುಕ್ತ ಗ್ರಂಥಗಳಲ್ಲಿ ವೇದೋಕ್ತವಾದ ಉಚ್ಚ ಯಾವಚ್ಚ ವಿಷಯಗಳನ್ನೂ ವಿವಿಧಮುಖವಾಗಿ ವರ್ಣಿಸಿರುವುದಲ್ಲದೆ ಇನ್ನೂ ಅನೇಕವಿಷಯಗಳು ವರ್ಣಿತವಾಗಿರುವುದು ಕಾಣಬರುತ್ತದೆ. ಪಾಣಿನಿಯ ವ್ಯಾಕರಣಕ್ಕಿಂತ ಪ್ರಾಚೀನವಾದ ಶಬ್ದಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ಇದರಲ್ಲಿ ವರ್ಣಿತವಾಗಿವೆ. ಯಾಸ್ಕನ ಅಭಿಪ್ರಾಯದಂತೆ

ಎಲ್ಲಾ ಶಬ್ದಗಳೂ ಧಾತುಜನ್ಯವೆಂದು ತಿಳಿದುಬರುತ್ತದೆ.

## ವ್ಯಾಕರಣಂ

ವ್ಯಾಕರಣವು ವೇದಕ್ಕೆ ಮುಖದಂತಿರುವ ಅಂಗವೆಂದು ಹೇಳಿದೆ. ಇದು ಪ್ರಧಾನವಾಗಿ "ಒಂದು ವಿಶೇಷವಾದ ನಿಯಂತ್ರಣದೊಳಗೆ ವೇದಗಳ ಅರ್ಥವನ್ನು ಕ್ರಮಬದ್ಧವಾಗಿ ತಿಳಿಸುವುದಕ್ಕೆ" ಹೊರಟಿದೆಯೆಂದು ಸಾಮಾನ್ಯವಾಗಿ ಹೇಳಬಹುದು. ಇಂದು ನಮಗೆ ದೊರೆತಿರುವ ವ್ಯಾಕರಣಗ್ರಂಥಗಳೊಳಗೆ ಪರಿಪೂರ್ಣವೂ, ಸರ್ವಾಂಗ ಸುಂದರವೂ ಆಗಿರುವ ವ್ಯಾಕರಣವು ಪಾಣಿನಿಯ ವ್ಯಾಕರಣವನ್ನು ಬಿಟ್ಟರೆ ಬೇರೆ ಯಾವುದೂ ಇರುವುದಿಲ್ಲ. ಆದರೆ ಪಾಣಿನ್ಯಾಚಾರನಿಗಿಂತಲೂ ಎಷ್ಟೋ ಶತಮಾನಗಳ ಪೂರ್ವದಲ್ಲಿಯೇ ಕ್ರಮಬದ್ಧವಾದ ವ್ಯಾಕರಣಾಭ್ಯಾಸಮಾಡುವ ಪದ್ಧತಿಯು ಮಾತ್ರ ನಮ್ಮ ಭಾರತವರ್ಷದಲ್ಲಿ ಇದ್ದಿತೆಂಬುದಕ್ಕೆ ಬೇಕಾದಷ್ಟು ಆಧಾರಗಳು ದೊರೆಯುತ್ತವೆ. ಪಾಣಿನಿಯು ತನ್ನ ವ್ಯಾಕರಣದ ಅಷ್ಟಾಧ್ಯಾಯೀಸೂತ್ರಗಳಲ್ಲಿ ತನಗಿಂತ ಪ್ರಾಚೀನರಾದ ಅನೇಕ ವ್ಯಾಕರಣಕಾರರ ಹೆಸರುಗಳನ್ನು ಹೇಳಿರುವನು. ಪಾಣಿನಿಯ ವ್ಯಾಕರಣದ ಅಷ್ಟಾಧ್ಯಾಯೀಸೂತ್ರಗಳಲ್ಲಿ ಗಾರ್ಗ್ಯ ಸ್ಫೋಟಾಯನ, ಶಾಕಟಾಯನ, ಭಾರದ್ವಾಜ, ಶಾಕಲ್ಯ ಮೊದಲಾದ ವ್ಯಾಕರಣಕಾರರ ಹೆಸರುಗಳನ್ನು ಸಷ್ಟವಾಗಿ ಹೇಳಲಾಗಿದೆ. ಪಾಣಿನಿಗಿಂತ ಅನೇಕ ಶತಮಾನಗಳ ಪೂರ್ವದಲ್ಲಿದ್ದ, ಯಾಸ್ಕಾಚಾರ್ಯನ ನಿರುಕ್ತದಲ್ಲಿಯೂ ಮತ್ತು ಪ್ರಾತಿಶಾಖ್ಯ ಗ್ರಂಥಗಳಲ್ಲಿಯೂ, ವ್ಯಾಕರಣಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳು ವರ್ಣಿತವಾಗಿವೆ. ನಾಮಪದಗಳೆಲ್ಲವೂ ಧಾತುಜನ್ಯವಲ್ಲವೆಂದು ಹೇಳುವ ಗಾರ್ಗ್ಯಾಚಾರ್ಯನ ಸಿದ್ಧಾಂತವನ್ನು ಯಾಸ್ಕನು ಖಂಡಿಸಿ ನಾಮಪದಗಳೆಲ್ಲವೂ ಧಾತುಜನ್ಯವೆಂದು ಸಿದ್ಧಾಂತಮಾಡಿದ್ದಾನೆ. ಗಾರ್ಗ್ಯ, ಶಕಟಾಯನರ ಹೆಸರುಗಳನ್ನು ಯಾಸ್ಕನು ಹೇಳಿರುವನು. ಇದರಿಂದ, ಯಾಸ್ಕನ ಕಾಲಕ್ಕಿಂತ ಪೂರ್ವದಲ್ಲಿಯೂ ವ್ಯಾಕರಣಶಾಸ್ತ್ರಾಭ್ಯಾಸ ಕ್ರಮವೂ ಅದಕ್ಕೆ ಸಂಬಂಧಪಟ್ಟ ಗ್ರಂಥಗಳೂ ಇದ್ದವೆಂದು ನಿರ್ವಿವಾದವಾಗಿ ಹೇಳಬಹುದು.

ಹಿಂದಿನಿಂದಲೂ ವ್ಯವಹಾರದಲ್ಲಿರುವ ಪದಪಾಠವನ್ನು ಅಭ್ಯಾಸ ಮಾಡುವವನು ಕೇವಲ ಮಂತ್ರೋಚ್ಚಾರಣೆಯ ಕ್ರಮ, ಸಂಧಿನಿಯಮಗಳನ್ನಷ್ಟೇ ತಿಳಿದಿದ್ದನೆಂದು ಹೇಳಲು ಬರುವಂತಿಲ್ಲ. ಆವರು ಶಬ್ದಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಕೃತಿ, ಪ್ರತ್ಯಯ, ನಾಮಪದ, ಧಾತು, ಆಖ್ಯಾತ, ಸರ್ವನಾಮವೇ ಮೊದಲಾದ ಎಲ್ಲಾ ವಿಷಯಗಳನ್ನೂ ತಿಳಿದಿದ್ದರೆಂದು ಹೇಳಲು ಬೇಕಾದಷ್ಟು ಅವಕಾಶವಿದೆ. ಪದಪಾಠಕಾರರು ನಾಲ್ಕು ವಿಧವಾದ ಶಬ್ದಗಳನ್ನು ವಿಂಗಡಿಸಿದ್ದಾರೆ. ನಾಮ, ಆಖ್ಯಾತ, ಉಪಸರ್ಗ, ನಿಪಾತಗಳೆಂದು ಯಾಸ್ಕನು ಹೇಳಿರುವನು. ಇಲ್ಲಿ ಆಖ್ಯಾತ ಶಬ್ದವನ್ನು ಕ್ರಿಯಾಪದವೆಂಬ ಅರ್ಥದಲ್ಲಿ ಯಾಸ್ಕನು ಉಪಯೋಗಿಸಿದ್ದಾನೆ. ಇವು ಭಾಷೆಯ ಪ್ರಧಾನವಾದ ನಾಲ್ಕು ಅಂಗಗಳು. ಭಾಷೆಯೊಳಗಿನ ಶಬ್ದಸಂಪತ್ತೆಲ್ಲವೂ ಈ ನಾಲ್ಕರಲ್ಲಿಯೇ ಒಳಗೊಳ್ಳುತ್ತವೆ. ಇವಲ್ಲದೆ ಯಾಸ್ಕನ ಕಾಲದಲ್ಲಿ ಕಾಲ, ಪುರುಷಾದಿ ಭೇದಗಳನ್ನು ತಿಳಿಸುವ ಆಖ್ಯಾತ, ಕೃತ್, ತದ್ಧಿತ ಪ್ರತ್ಯಯಗಳು ಮತ್ತು ಇತರ ನಾಮಪದಗಳ ಪ್ರಕೃತಿಪ್ರತ್ಯಯಗಳೂ ಇದ್ದವೆಂಬುದು ಯಾಸ್ಕನ ನಿರುಕ್ತದಿಂದ ಚನ್ನಾಗಿ ತಿಳಿದುಬರುತ್ತದೆ. ಯಾಸ್ಕನ ಕಾಲಕ್ಕಿಂತ ಅತ್ಯಂತಪ್ರಾಚೀನವಾದ ಬ್ರಾಹ್ಮಣಗ್ರಂಥಗಳಲ್ಲಿಯೂ ಸಹ ವ್ಯಾಕರಣಶಾಸ್ತ್ರಕ್ಕೆ ಸಂಬಂಧಪಟ್ಟ ವರ್ಣ, ಲಿಂಗ, ವಚನ, ವಿಭಕ್ತಿಯೇ ಮೊದಲಾದ ಪಾರಿಭಾಷಿಕ ಶಬ್ದಗಳು ಕಾಣಬರುತ್ತವೆ. ಇವುಗಳನ್ನು ಆರಣ್ಯಕಗ್ರಂಥಗಳಲ್ಲಿಯೂ, ಉಪನಿಷತ್ತು, ಸೂತ್ರಗ್ರಂಥಗಳಲ್ಲಿಯೂ ಸಹ ಯಥೇಷ್ಟವಾಗಿ ಕಾಣಬಹುದು.

ಇಷ್ಟೆಲ್ಲಾ ವ್ಯಾಕರಣದ ಪ್ರಾಚೀನ ಅವಶೇಷಗಳು ಕಾಣುತ್ತಿದ್ದರೂ ಪಾಣಿನಿಗಿಂತ ಪ್ರಾಚೀನವಾದ ವ್ಯಾಕರಣಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯವನ್ನು ಸ್ವಲ್ಪವಾದರೂ ತಿಳಿಸುವಗ್ರಂಥವೆಂದರೆ, ಯಾಸ್ಕನ ನಿರುಕ್ತವೊಂದೇಈವರೆಗೆ ದೊರೆತಿರುವುದು. ಯಾಸ್ಕನಹಿಂದಿನದಾಗಲೀ, ಯಾಸ್ಕನನಂತರ ಪಾಣಿನಿಯ ಮಧ್ಯಕಾಲದ್ದಾಗಲೀ ಸರಿಯಾಗಿ, ಪರಿಪೂರ್ಣವಾಗಿರುವ ಯಾವಗ್ರಂಥವೂ ದೊರೆತಿಲ್ಲ. ಈಗನಾವು ವ್ಯಾಕರಣಶಾಸ್ತ್ರದ ಸರಿಯಾದ ಪರಿಚಯಮಾಡಿಕೊಳ್ಳಬೇಕಿದ್ದರೆ ಪಾಣಿನಿಯ ವ್ಯಾಕರಣವೇ ಏಕಮೇವಾದ್ವಿತೀಯಬೆಳಕಾಗಿದೆ.

ಪಾಣಿನಿಯು ಯಾಸ್ಕನ ಅಭಿಪ್ರಾಯವನ್ನು ಅನುಸರಿಸಿ ನಾಮ ಪದಗಳೆಲ್ಲವೂ ಧಾತುಜನ್ಯವೆಂದು ಸಿದ್ಧಾಂತಮಾಡಿದ್ದಾನೆ. ಪಾಣಿನಿಯು ತನ್ನ ವ್ಯಾಕರಣದಲ್ಲಿ ವೈದಿಕಸಂಸ್ಕೃತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಬರೆದಿದ್ದರೂ ಲೌಕಿಕಸಂಸ್ಕೃತಕ್ಕೆ ಸಂಬಂಧಪಟ್ಟ ವಿಷಯಗಳನ್ನೇ ಹೆಚ್ಚಾಗಿ ಬರೆದಿದ್ದಾನೆ. ಪಾಣಿನಿಯ ಬಹು ದೊಡ್ಡ ವ್ಯಾಕರಣದಲ್ಲಿ ಕೊನೆಯ "ವೈದಿಕಪ್ರಕ್ರಿಯೆ" ಎಂಬ ಒಂದು ಪ್ರಕರಣವು ಮಾತ್ರ ವೇದದ ಸಂಸ್ಕೃತ ಭಾಷೆಗೆ ಸಂಬಂಧಪಟ್ಟ ನಿಯಮನಿಬಂಧನೆಗಳನ್ನು ವಿವರಿಸುವುದಾಗಿದೆ. ಪಾಣಿನಿಯ ವ್ಯಾಕರಣವು ಲೌಕಿಕಸಂಸ್ಕೃತದ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿ ಆವಿರ್ಭವಿಸಿದೆಯೆಂದು ಹೇಳಬಹುದು. ಲೌಕಿಕಸಂಸ್ಕೃತಕ್ಕೆ ಸಂಬಂಧಪಟ್ಟ ಎಲ್ಲಾ ವಿಧವಾದ ನಿಯಮನಿಬಂಧನೆಗಳು ಪಾಣಿನಿಯ ವ್ಯಾಕರಣದಲ್ಲಿ ಬಹುಮಟ್ಟಿಗೆ ವಿವರಿಸಲಾಗಿದೆ. ಅನಂತರದ ಕಾಲದವರಾದ ಕಾತ್ಯಾಯನ ವರರುಚಿ ಮೊದಲಾದವರು ಆಯಾ ಕಾಲದಲ್ಲಿ ಬದಲಾವಣೆ ಹೊಂದಿದ ಕೆಲವು ಶಬ್ದಗಳನ್ನು ಮಾತ್ರ ವಿವರಿಸಿ ನಿಯಂತ್ರಿಸಿದ್ದಾರೆ. ಪಾಣಿನಿಯ ಕಾಲದನಂತರ ಇಷ್ಟು ವ್ಯಾಪಕವಾದ, ಸ್ವತಂತ್ರವಾದ ವ್ಯಾಕರಣಗ್ರಂಥವು ಯಾವುದೂ ಆವಿರ್ಭವಿಸಿಲ್ಲ ಅಥವಾ ಅದರ ಅವಶ್ಯಕತೆಯೇ ಉಂಟಾಗಿಲ್ಲವೆಂದು ಹೇಳಿದರೂ ಸಲ್ಲುತ್ತದೆ. ಹುಟ್ಟಿದ ಕೆಲವು ಸಂಕ್ಷೇಪವಾದ ವ್ಯಾಕರಣಗ್ರಂಥಗಳು ವ್ಯವಹಾರದಿಂದ-ಬಳಕೆಯಿಂದ-ದೂರ ಸರಿದು ಮೂಲೆ ಹಿಡಿದಿವೆ. ಪಾಣಿನಿಯ ವ್ಯಾಕರಣವು ಅವನಿಗಿಂತ ಪ್ರಾಚೀನವಾದ ಎಲ್ಲಾ ವ್ಯಾಕರಣಗಳ ಅಭಿಪ್ರಾಯ, ನಿಯಮನಿಬಂಧನೆಗಳನ್ನು ಅಳವಡಿಸಿಕೊಂಡಿದೆ, ಮತ್ತು ಪ್ರಾಚೀನ ವ್ಯಾಕರಣ ನಿಯಮಗಳನ್ನು ಅತಿಕ್ರಮಿಸಿದ ಭಾಷೆಗೆ ಸಾಧುತಾಮುದ್ರೆಯನ್ನು ಒತ್ತಿ ಸಾರ್ವತ್ರಿಕ ಅನ್ವಯವಾಗುವಂತೆ ಬರೆಯಲ್ಪಟ್ಟಿದೆ. ಆದ್ದರಿಂದ ಪಾಣಿನಿಗಿಂತ ಹಿಂದಿನ ವ್ಯಾಕರಣಗಳೆಲ್ಲವೂ ಅಪ್ರಯೋಜಕ ಅವ್ಯವಹಾರ್ಯವಾಗಿ ಕ್ರಮೇಣ ನಾಮಾವಶೇಷವಾದವು.

## ಜ್ಯೋತಿಷ

ವೇದಾಂಗಗಳಲ್ಲಿ ಜ್ಯೋತಿಷಕ್ಕೆ ಒಂದು ಮುಖ್ಯಸ್ಥಾನವಿದೆ. ಜ್ಯೋತಿಷವು ವೇದಗಳಿಗೆ ಕಣ್ಣು ಎಂದು ನಮ್ಮ ಪ್ರಾಚೀನರು ಕರೆದಿದ್ದಾರೆ.

ವೇದೋಕ್ತವಾದ ಯಜ್ಞಾದಿಕರ್ಮಗಳನ್ನು ಅನುಷ್ಠಾನಮಾಡುವುದಕ್ಕೆ ಸರಿಯಾದ ಕಾಲವನ್ನು ಜ್ಯೋತಿಷವು ತಿಳಿಸಿಕೊಡುವುದರಿಂದ ಇದನ್ನು ಒಂದು ವೇದಾಂಗವೆಂದು ಕರೆದಿದ್ದಾರೆ. ಇದರಿಂದಲೇ ಜ್ಯೋತಿಷಶಾಸ್ತ್ರಕ್ಕೆ ಕಾಲ ನಿಯಾಮಕಶಾಸ್ತ್ರವೆಂದೂ ಕರೆಯುವುದುಂಟು. ವೇದಗಳು ಯಜ್ಞಗಳನ್ನು ಬೋಧಿಸಲು ಪ್ರವೃತ್ತವಾಗಿವೆ. ಯಜ್ಞಗಳು ಕಾಲಾನುಗತಗಳಾಗಿವೆ. ಆದ್ದರಿಂದ ಕಾಲನಿಯಾಮಕವಾದ ಈ ಜ್ಯೋತಿಷವನ್ನು ತಿಳಿದವನು ಈ ಯಜ್ಞಗಳನ್ನು ತಿಳಿಯುತ್ತಾನೆ ಎಂದು, "ಲಗಧ" ಎಂಬುವನು ತನ್ನ ಆರ್ಯ ಜ್ಯೋತಿಷವೆಂಬ ಗ್ರಂಥದಲ್ಲಿ ಹೇಳಿದ್ದಾನೆ.

> "ವೇದಾ ಹಿ ಯಜ್ಞಾರ್ಥಮಭಿಪ್ರವೃತ್ತಾಃ ಕಾಲಾನುಪೂರ್ವಾ
> ವಿಹಿತಾಶ್ಚ ಯಜ್ಞಾಃ ॥ ತಸ್ಮಾದಿದಂ ಕಾಲವಿಧಾನಶಾಸ್ತ್ರಂ
> ಯೋ ಜ್ಯೋತಿಷಂ ವೇದ ಸ ವೇದ ಯಜ್ಞಾನ್ ॥
> (ಆರ್ಯಜ್ಯೋತಿಷ, ಶ್ಲೋ ೩೬)

ವೇದಾಂಗಭೂತವಾದ ಜ್ಯೋತಿಷಗ್ರಂಥಗಳು ಈಗ ನಮಗೆ ಎರಡು ಮಾತ್ರ ದೊರೆತಿವೆ. ಒಂದು ಋಗ್ವೇದಕ್ಕೆ ಸಂಬಂಧಪಟ್ಟದ್ದು, ಇನ್ನೊಂದು ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟದ್ದು. ಇವುಗಳಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಜ್ಯೋತಿಷಗ್ರಂಥದಲ್ಲಿ ಕೇವಲ ೩೬ ಶ್ಲೋಕಗಳಿವೆ. ಯಜುರ್ವೇದದ ಜ್ಯೋತಿಷದಲ್ಲಿ ೪೨ ಶ್ಲೋಕಗಳಿವೆ. ಇವೆರಡೂ ಸಾಮಾನ್ಯವಾಗಿ ಒಂದೇ ತರಹ ಇವೆ. ಇವಕ್ಕೆ ಸೋಮಾಕನೆಂಬುವನು ಬರೆದ ಪ್ರಾಚೀನವಾದ ವ್ಯಾಖ್ಯಾನವೂ, ಸುಧಾಕರದ್ವಿವೇದಿ ಎಂಬುವನು ಬರೆದ ಆಧುನಿಕವಾದ ಒಂದು ವ್ಯಾಖ್ಯಾನವೂ ಇವೆ. ಆದರೂ ಇದರೊಳಗಿನ ಅನೇಕ ಸ್ಥಳಗಳು ಇಂದಿಗೂ ಅರ್ಥವಾಗುವುದಿಲ್ಲವೆಂದು ತಿಳಿದವರು ಹೇಳುತ್ತಾರೆ.

ಋಗ್ವೇದಾಂಗವಾದ ಜ್ಯೋತಿಷಗ್ರಂಥವು ಲಗಧನದೆಂದು ಹೇಳಲಾಗುತ್ತಿದೆ. " ಕಾಲಜ್ಞಾನಂ ಪ್ರವಕ್ಷ್ಯಾಮಿ ಲಗಧಸ್ಯ ಮಹಾತ್ಮನಃ " ಮಹಾತ್ಮನಾದ ಲಗಧನು ಹೇಳಿದ ಕಾಲಜ್ಞಾನವನ್ನು ಹೇಳುತ್ತೇನೆ ಎಂದು ಗ್ರಂಥವು ಆರಂಭವಾಗಿರುವುದನ್ನು ನೋಡಿದರೆ, ಲಗಧನೆಂಬ ಒಬ್ಬ ಪ್ರಾಚೀನ

ಜ್ಯೋತಿಷ ಪಂಡಿತನಿದ್ದು ಅವನ ಸಿದ್ಧಾಂತವನ್ನನುಸರಿಸಿ ಈ ಗ್ರಂಥವನ್ನು ಬರೆಯಲಾಗಿದೆಯೇ ಎಂಬ ಸಂದೇಹಕ್ಕೆ ಎಡೆ ಬರುವಂತಿದೆ. ಈ ಗ್ರಂಥ ವನ್ನು, ಯಜ್ಞಗಳಕಾಲವನ್ನು ತಿಳಿಸಿಕೊಡುವುದಕ್ಕಾಗಿ,- "ಯಜ್ಞಕಾಲಾರ್ಥ ಸಿದ್ಧಯೇ "- ಬರೆಯಲಾಗಿದೆಯೆಂದು ಆರಂಭಿಸಿ ಸೂರ್ಯಚಂದ್ರರ ಗತಿ ಗಳನ್ನೂ ಅದನ್ನು ಅನುಸರಿಸಿ ಆಗುವ ದಕ್ಷಿಣೋತ್ತರ ಅಯನಗಳನ್ನೂ ನಕ್ಷತ್ರಗಳನ್ನೂ, ಅವುಗಳಿಗೆ ಅಗ್ನಿಯೇ ಮೊದಲಾದ ದೇವತೆಗಳನ್ನೂ, ಸಾಮಾ ನ್ಯವಾಗಿ ವಿವರಿಸಿದ್ದಾರೆ. ಮತ್ತು ಕಾಲದ ವಿಭಾಗಗಳನ್ನು ಯಜ್ಞಾದಿಗಳನ್ನು ಮಾಡುವುದಕ್ಕೆ ಉಚಿತವಾದ ಕೆಲವು ಕಾಲವಿಶೇಷವನ್ನೂ ಸಹ ವಿವರಿಸಿದ್ದಾರೆ.

ಗಣಿತಶಾಸ್ತ್ರ ಮತ್ತು ಖಗೋಳಶಾಸ್ತ್ರಗಳೆರಡೂ ಪ್ರಾಚೀನಜ್ಯೋ ತಿಷಶಾಸ್ತ್ರದ ಎರಡು ಪ್ರಧಾನವಾದ ಅಂಗಗಳು. ಈ ಶಾಸ್ತ್ರಗಳು ವೇದ ಕಾಲದಿಂದಲೇ ಭಾರತದಲ್ಲಿ ವ್ಯಾವಹಾರಿಕವಾಗಿದ್ದವು. ಸಂಹಿತೆ, ಬ್ರಾಹ್ಮಣ ಗ್ರಂಥಗಳಲ್ಲಿ ಅಲ್ಲಲ್ಲಿಯೇ ಕಾಣುವ ಕೆಲವು ಜ್ಯೋತಿಷಶಾಸ್ತ್ರದ ಕುರುಹು ಗಳ ಹೊರತಾಗಿ ಪ್ರಾಚೀನವಾದ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರತ್ಯೇಕ ಗ್ರಂಥಗಳಾವುವೂ ದೊರೆತಿಲ್ಲ. ವೇದಾಂಗ ಜ್ಯೋತಿಷದ ಮೇಲಿನ ಎರಡು ಗ್ರಂಥಗಳ ಹೊರತಾಗಿ ಪ್ರಾಚೀನವಾದ ಬೇರೆ ಗ್ರಂಥಗಳು ಯಾವುವೂ ದೊರೆತಿಲ್ಲ. ಇವುಗಳ ಅನಂತರದ ಕಾಲದಲ್ಲಿ (?) ಬರೆದ ಗರ್ಗಾಚಾ ರ್ಯರ "ಗರ್ಗ ಸಂಹಿತೆ" ಯು ಯಾವ ಕಾಲದಲ್ಲಿ ಬರೆದದ್ದೆಂದು ಊಹಿಸಲು ಆಧಾರವಿಲ್ಲ. ಪಾಣಿನಿ, ಯಾಸ್ಕರು ಹೇಳಿದ ಪ್ರಾಚೀನ ವ್ಯಾಕರಣಕಾ ರರೂ, ಇವರೂ ಒಬ್ಬರೆಯೋ, ಬೇರೆಯೋ ತಿಳಿಯದು. ಒಬ್ಬರೇ ಆಗಿ ದ್ದರೆ, ಇದರ ಕಾಲವು ಕ್ರಿ. ಪೂ. ಏಳನೆಯ ಶತಮಾನಕ್ಕಿಂತ ಪ್ರಾಚೀನ ವಾದುದೆಂದು ಸಹ ಸಿದ್ಧಾಂತವಾಗುತ್ತದೆ. ಈ ಮೂರು ಗ್ರಂಥಗಳ ನಂತರ ನಮಗೆ ಈವರೆಗೆ ದೊರೆತ ಗ್ರಂಥಗಳೆಲ್ಲವೂ, ಕ್ರಿಸ್ತಶಕಾರಂಭದಿಂದ ಈಚಿನವು.

ಜ್ಯೋತಿಷಶಾಸ್ತ್ರದ ಗ್ರಂಥಗಳ ಎರಡನೆಯ ಘಟ್ಟವು ಕ್ರಿಸ್ತಶಕೆ ಯಿಂದೀಚೆಗೆ ಆರಂಭವಾಗುತ್ತದೆ. ಕ್ರಿಸ್ತಶಕ ೬ ನೆಯ ಶತಮಾನದ ವರಾಹ ಮಿಹಿರಾಚಾರ್ಯನು ಬರೆದ " ಸೂರ್ಯಸಿದ್ಧಾಂತ " ಗ್ರಂಥವೇ ದ್ವಿತೀಯ ಘಟ್ಟದ ಮೊದಲನೆಯ ಪುಸ್ತಕವೆಂದು ಈಗ ದೊರಕಿರುವ ಗ್ರಂಥಗಳ ದೃಷ್ಟಿ

ಯಿಂದ ಹೇಳಬಹುದೆಂದು ಆಧುನಿಕ ವಿಮರ್ಶಕರು ಹೇಳುತ್ತಾರೆ. ವರಾಹ ಮಿಹಿರನು (೧) ಸೂರ್ಯಸಿದ್ಧಾಂತ, (೨) ಪಿತಾಮಹ, (೩) ವಾಸಿಷ್ಠ (೪) ಪೌಲಿಶ, (೫) ರೋಮುಕಾ ಎಂಬ ಐದು ಪ್ರಧಾನವಾದ ಸಿದ್ಧಾಂತಗಳಿವೆ ಎಂದು ಸೂರ್ಯಸಿದ್ಧಾಂತದಲ್ಲಿ ಬರೆದಿದ್ದಾನೆ. ಇವನು ಹೇಳಿರುವ ಸಿದ್ಧಾಂತ ಗಳನ್ನು ನೋಡಿದರೆ ಆಯಾ ಹೆಸರಿನ ಸಿದ್ಧಾಂತಗಳು, ಅವುಗಳ ಗ್ರಂಥ ಗಳು ಹಿಂದೆ ಇದ್ದವೆಂದು ವ್ಯಕ್ತವಾಗುತ್ತದೆ. ಇವನು ಐದು ಸಿದ್ಧಾಂತ ಗಳ ಹೆಸರನ್ನು ಹೇಳಿರುವನಾದರೂ ತನ್ನ ಸೂರ್ಯಸಿದ್ಧಾಂತ ಗ್ರಂಥದಲ್ಲಿ ಮೊದಲಿನ ಒಂದೇ ವಿಷಯದ ಬಗ್ಗೆ ಗ್ರಂಥರಚನೆ ಮಾಡಿದ್ದಾನೆ. ಈ ಗ್ರಂಥವು ಶ್ಲೋಕರೂಪವಾಗಿದ್ದು ಹದಿನಾಲ್ಕು ಅಧ್ಯಾಯಗಳಿಂದ ವಿರಾ ಜಿಸುತ್ತಿದೆ.

ಇವನ ಸಿದ್ಧಾಂತವನ್ನು ಅನುಸರಿಸಿ ಹೊರಟ ಆರ್ಯಭಟನು ಕ್ರಿ. ಶ. ೫ ನೆಯ ಶತಮಾನದವನೆಂದು ವಿಮರ್ಶಕರ ಅಭಿಪ್ರಾಯ. ಇವನು ತನ್ನ ಆರ್ಯಭಟೀಯದಲ್ಲಿ ಭೂಮಿಯು ಸೂರ್ಯನ ಸುತ್ತಲೂ ತಿರುಗುವು ದೆಂಬ ಸಿದ್ಧಾಂತವನ್ನು ಮಾಡಿದ್ದಾನೆ. ಆರ್ಯಸಿದ್ಧಾಂತವನ್ನು ಬರೆದ ವನು ಇವನಿಗಿಂತ ಬೇರೆಯವನೂ ಮತ್ತು ಪ್ರಾಚೀನನೂ ಇರಬೇಕೆಂದು ಕೆಲವು ವಿಮರ್ಶಕರು ಹೇಳುತ್ತಾರೆ. ಕ್ರಿ. ಶ. ಏಳನೆಯ ಶತಮಾನದಲ್ಲಿದ್ದ (೬೨೮) ಬ್ರಹ್ಮಗುಪ್ತನು ಬ್ರಹ್ಮಸ್ಫುಟಸಿದ್ಧಾಂತವೆಂಬ ಗ್ರಂಥವನ್ನು ಬರೆದಿ ದ್ದಾನೆ. ಇವನು ಹಿಂದಿನವರು ಹೇಳಿರುವ ವಿಷಯಗಳನ್ನು ತನ್ನ ಭಾಷೆ ಯಲ್ಲಿ ವಿವರಿಸಿದ್ದಾನೆ.

ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿದ್ದ ಭಾಸ್ಕರಾಚಾರ್ಯರು "ಸಿದ್ಧಾಂತ ಶಿರೋಮಣಿ" ಎಂಬ ಗ್ರಂಥವನ್ನು ಬರೆದಿದ್ದಾರೆ. ಇದಲ್ಲದೆ ಲೀಲಾವತಿ, ಬೀಜಗಣಿತ, ಗ್ರಹಗಣಿತ, ಗೋಳಾಧ್ಯಾಯಗಳೆಂಬ ಗ್ರಂಥ ಗಳನ್ನು ಬರೆದಿದ್ದಾರೆ. ಇವರು "ಕರಣ ಕುತೂಹಲ" ವೆಂಬ ಮತ್ತೊಂದು ಗ್ರಂಥವನ್ನೂ ಕ್ರಿ. ಶ. ೧೧೮೪ ರಲ್ಲಿ ಬರೆದಿದ್ದಾರೆಂದು ತಿಳಿದು ಬಂದಿದೆ. ಭಾಸ್ಕರಾಚಾರ್ಯರು ಹುಟ್ಟು ಕನ್ನಡಿಗರು. ಇವರು ವಿಜಾಪುರ ಜಿಲ್ಲೆಯ ಒಂದು ಊರಿನಲ್ಲಿ ಜನಿಸಿದರೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ ಗಣಿತಖಗೋಳಶಾಸ್ತ್ರಗಳಿಗೆ ಸಂಬಂಧಪಟ್ಟ ಸಾಮಾನ್ಯ ಗ್ರಂಥಗಳು ಕ್ರಮೇಣ ಬೆಳವಣಿಗೆಯಾಗುತ್ತಾ ಬಂದಿವೆ. ಈ ಶಾಸ್ತ್ರಕ್ಕೆ ಸಂಬಂಧ ಪಟ್ಟ ಸಾಮಾನ್ಯಗ್ರಂಥಗಳು ಅನೇಕವಾಗಿ ಹುಟ್ಟಿ ಬೆಳೆದುಕೊಂಡು ಬಂದಿವೆ.

ಜ್ಯೋತಿಷಶಾಸ್ತ್ರದ ಇನ್ನೊಂದು ಅಂಗವು "ಹೋರಾ ಶಾಸ್ತ್ರವು." ಈ ಶಾಸ್ತ್ರವು ಮಾನವನ ಪ್ರತಿನಿತ್ಯದ ಚಲನವಲನಗಳು, ಆಗುಹೋಗುಗಳು ಶುಭಾಶುಭಗಳೆಲ್ಲವೂ ಆಕಾಶದಲ್ಲಿರುವ ಗ್ರಹ ನಕ್ಷತ್ರಗಳನ್ನವಲಂಬಿಸಿ ನಡೆ ಯುತ್ತವೆಂಬ ಸಿದ್ಧಾಂತದ ಮೇಲೆಹೊರಟಿದೆ. ಈ ಶಾಸ್ತ್ರವೂ ಸಹ ಇತರ ಶಾಸ್ತ್ರಗಳಂತಯೇ ಬಹಳ ಪ್ರಾಚೀನ ಕಾಲದಿಂದಲೂ ಭಾರತದೇಶದಲ್ಲಿ ಪ್ರಚಾ ರದಲ್ಲಿದೆ. ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಸೂತ್ರಗ್ರಂಥವೊಂದನ್ನು ಜೈಮಿನಿಯು ಬರೆದಿದ್ದಾನೆ. ಇದರಲ್ಲಿ ನಾಲ್ಕು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ನಾಲ್ಕು ನಾಲ್ಕು ಪಾದಗಳಂತೆ ೧೬ ಪಾದಗಳಿವೆ. ಒಟ್ಟು ಈ ಗ್ರಂಥದಲ್ಲಿ ೯೧೮ ಸೂತ್ರಗಳಿವೆ. ಇದರಲ್ಲಿ ಫಲಜ್ಯೋತಿಷಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳೂ ಸಾಮಾನ್ಯವಾಗಿವೆ. ಇದರ ಮೊದ ಲಿನ ಎರಡು ಅಧ್ಯಾಯಗಳಿಗೆ ನೀಲಕಂಠಜ್ಯೋತಿಷಿ ಎಂಬುವನು ಸುಬೋ ಧಿನೀ ಎಂಬ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಇದಲ್ಲದೆ ಪ್ರಾಚೀನ ಋಷಿಗಳ ಹೆಸರಿನಿಂದ ಪ್ರಸಿದ್ಧವಾದ ನಾರದೀಯ ಸಂಹಿತೆಯೇ ಮೊದಲಾದ ಅನೇಕ ಗ್ರಂಥಗಳು ಈ ಹೋರಾಶಾಸ್ತ್ರಕ್ಕೆ ಸಂಬಂಧಪಟ್ಟಂತೆ ದೊರೆಯುತ್ತವೆ.

ಇತಿಹಾಸಕಾಲದ ಹೋರಾಶಾಸ್ತ್ರದ ಗ್ರಂಥಗಳಲ್ಲಿ ಈಗ ಉಪ ಲಬ್ಧವಾಗಿರುವ ಗ್ರಂಥಗಳೊಳಗೆ ಅತ್ಯಂತಪ್ರಾಚೀನವಾದುದು ವರಾಹಮಿಹಿರಾ ಚಾರ್ಯನ ಬೃಹತ್ಸಂಹಿತೆಯು. ಇದು ಕಾವ್ಯಮಯವಾಗಿ ಅತ್ಯಂತ ಮನೋಹರವಾಗಿದೆ. ಇದರೊಳಗಿನ ರಾಜರುಗಳು ಯುದ್ಧಕ್ಕೆ -ದಿಗ್ವಿಜ ಯಕ್ಕೆ-ಹೊರಡಲು ಯೋಗ್ಯವಾದ ಕಾಲವನ್ನು ತಿಳಿಸುವ ಒಂದು ಪ್ರಕ ರಣವು ಯಾತ್ರಾಪ್ರಕರಣವೆಂದು ಪ್ರಸಿದ್ಧವಾಗಿದೆ. ಇದು ಯಾತ್ರೆಯ (ಪ್ರಯಾಣದ) ದಿನಗಳನ್ನು ತಿಳಿಸುವುದಕ್ಕಾಗಿಯೇ ಇರುವ ಪ್ರತ್ಯೇಕವಾದ ಪ್ರಕರಣವಾಗಿದೆ. ಇವನು ಬರೆದ ಇನ್ನೊಂದು ಗ್ರಂಥವು ಬೃಹಜ್ಜಾತಕ ವೆಂಬುದು. ಇದನ್ನು ಹೋರಾಶಾಸ್ತ್ರವೆಂದೂ ಕರೆಯುತ್ತಾರೆ. ಇದರಲ್ಲಿ

ಗಣಿತಭಾಗದಿಂದ ಹಿಡಿದು ಜಾತಕದ ಫಲಭಾಗದವರೆಗಿನ ಎಲ್ಲಾ ವಿಷಯ ಗಳೂ ಇರುತ್ತವೆ. ಜ್ಯೋತಿಷವಾಙ್ಮಯದಲ್ಲಿ ಇದಕ್ಕೆ ಪ್ರತ್ಯೇಕವಾದ ಮಹತ್ವದ ಸ್ಥಾನವಿದೆ. ಇವನು ಕೇವಲ ಫಲಸಂಬಂಧವಾದ ವಿಷಯ ಗಳನ್ನು ತಿಳಿಸುವುದಕ್ಕಾಗಿಯೇ ಲಘುಜಾತಕವೆಂಬ ಮತ್ತೊಂದು ಗ್ರಂಥ ವನ್ನು ರಚಿಸಿದ್ದಾನೆ. ವರಾಹಮಿಹಿರನ ಮಗನು ಹೋರಾಷಟ್ಪಂಚಾಶಿಕ ಎಂಬ ಒಂದು ಅಮೂಲ್ಯವಾದ ಗ್ರಂಥವನ್ನು ಬರೆದು ಕೀರ್ತಿಶಾಲಿಯಾಗಿ ದ್ದಾನೆ. ಕಾಳಿದಾಸನೆಂಬ ಒಬ್ಬ ಜ್ಯೋತಿಷಿಯು "ಜ್ಯೋತಿರ್ವಿದಾ ಭರಣ" ವೆಂಬ ಗ್ರಂಥವನ್ನು ಬರೆದಿದ್ದಾನೆ. ಇದರಲ್ಲಿ ಅರಬ್ಬೀದೇಶದವರ ಜ್ಯೋತಿಷಕ್ಕೆ ಸಂಬಂಧಪಟ್ಟ ವಿಷಯಗಳು ಕಾಣಬರುವುದರಿಂದ ಇವನು ಕ್ರಿ. ಶ ಹನ್ನೆರಡನೆಯ ಶತಮಾನಕ್ಕಿಂತ ಆಧುನಿಕನಿರಬೇಕೆಂದು ಇಂದಿನ ವಿಮರ್ಶಕರು ಊಹಿಸುತ್ತಾರೆ

ಭಾರತೀಯರಿಗೆ ಮಹಮ್ಮದೀಯರ ಸಂಬಂಧ ಉಂಟಾದ ಮೇಲೆ ಆವಿರ್ಭವಿಸಿದ ಮತ್ತೊಂದು ಜಾತಿಯ ಜ್ಯೋತಿಷಗ್ರಂಥಗಳು ಪ್ರಚಾರಕ್ಕೆ ಬಂದವು. ಅವುಗಳಲ್ಲಿ ತಾಜಕನೀಲಕಂಠೀ ಎಂಬ ಗ್ರಂಥವು ಮುಖ್ಯ ವಾದುದು. ಇದರಲ್ಲಿ ಶಕುನ, ಪ್ರಶ್ನ, ಭವಿಷ್ಯವೆಂದು ಮೂರು ಬಗೆಯ ಗ್ರಂಥಗಳಿವೆ. ಜಗದೇವನೆಂಬುವನು "ಸ್ವಪ್ನಚಿಂತಾಮಣಿ" ಎಂಬ ಗ್ರಂಥ ವನ್ನು ಬರೆದಿದ್ದಾನೆ. ಇದರಲ್ಲಿ ವಿವರಿಸಿರುವ ವಿಷಯಗಳನ್ನು ಪರಿಶೀಲಿ ಸಿದರೆ ಸ್ವಪ್ನಫಲಗಳನ್ನು ಸರಿಯಾಗಿ ತಿಳಿಯುವುದಕ್ಕೆ ಗಣಿತಭಾಗವು ಎಷ್ಟು ಆವಶ್ಯವೆಂಬುದನ್ನು ತಿಳಿಯುವಂತಿದೆ. ಹೀಗೆ ಜ್ಯೋತಿಷಶಾಸ್ತ್ರವು ವೇದ ಕಾಲದಿಂದ ಹಿಡಿದು ಕ್ರಮೇಣ ಬೆಳೆಯುತ್ತಾ ಬಂದಿತು. ಹೊರಗಿನಿಂದ ಬಂದ ಅನೇಕ ವಿಷಯಗಳನ್ನು ಭಾರತೀಯರು ತಮ್ಮವನ್ನಾಗಿ ಮಾಡಿಕೊಂಡು ಜ್ಯೋತಿಷವನ್ನು ವಿವಿಧಮುಖವಾಗಿ ಬೆಳೆಸಿಕೊಂಡು ಬಂದಿದ್ದಾರೆಂಬುದನ್ನು ಇದರಿಂದ ಸಾಮಾನ್ಯವಾಗಿ ತಿಳಿಯಬಹುದೆಂದು ಇಂದಿನ ವಿಮರ್ಶಕರು ಹೇಳುತ್ತಾರೆ. ಇಲ್ಲಿ ಹೇಳಿರುವ ಗ್ರಂಥಗಳು ಕೇವಲ ಸ್ಥಾಲೀಪುಲಾಕನ್ಯಾ ಯದವಾಗಿವೆ. ಜ್ಯೋತಿಷದ ಪ್ರತಿಯೊಂದು ಅಂಗಗಳಲ್ಲಿಯೂ ಅನೇಕಾ ನೇಕ ಗ್ರಂಥರಾಶಿಗಳು ಹುಟ್ಟಿಬೆಳೆದು ಪ್ರಚಾರವಾಗುತ್ತಾ ಬಂದಿವೆಯೆಂದು

ಒಂದು ಮಾತಿನಲ್ಲಿ ಹೇಳಿ ಮುಗಿಸಬಹುದು.

## ಕಲ್ಪ

ಬ್ರಾಹ್ಮಣಗ್ರಂಥಗಳಲ್ಲಿಯೂ, ಅವುಗಳ ಅನಂತರದಲ್ಲಿಯೂ ಯಜ್ಞಗಳು ಬಹುಮುಖವಾಗಿ ವಿಸ್ತಾರಗೊಂಡಿದ್ದವು. ಈ ಎಲ್ಲಾ ಯಜ್ಞಗಳ ವಿಷಯ ವಿವರಣೆಗಳನ್ನು ಅಂಗ, ಉಪಾಂಗಗಳನ್ನೂ, ಇವುಗಳನ್ನು ಮಾಡುವ ವಿಧಿವಿಧಾನಗಳನ್ನೂ ಜ್ಞಾಪಕದಲ್ಲಿಟ್ಟು ಕೊಳ್ಳುವುದು ಅಸಾಧ್ಯವಾಯಿತು. ಆದರಿಂದ ಯಜ್ಞಗಳ ವಿಧಿವಿಧಾನಗಳನ್ನು ಸರಿಯಾಗಿ ಸಂಪೂರ್ಣವಾಗಿ ತಿಳಿಸುವ ಸಂಕ್ಷೇಪವಾದ ಗ್ರಂಥಗಳು ಅವಶ್ಯವಾದವು. ಈ ಆವಶ್ಯಕತೆಯನ್ನು ಪೂರ್ಣಗೊಳಿಸುವುದಕ್ಕಾಗಿಯೇ ಸೂತ್ರಗ್ರಂಥಗಳು ಆವಿರ್ಭವಿಸಿದವು.

ಕಲ್ಪಸೂತ್ರಗ್ರಂಥಗಳ ಕಾಲವೂ ಸಹ ಇತರ ವೈದಿಕವಾಙ್ಮಯದ ಕಾಲದಂತೆಯೇ ನಿರ್ಧಾರಕ್ಕೆ ಸಿಕ್ಕುವುದಿಲ್ಲ. ಇವುಗಳಲ್ಲಿ ಬ್ರಾಹ್ಮಣಗ್ರಂಥಗಳಲ್ಲಿರುವ ವಿಷಯುಗಳನ್ನು ವಿವರಿಸಿರುವುದರಿಂದ ಬ್ರಾಹ್ಮಣಗ್ರಂಥಗಳಿಗಿಂತ ಇವು ನವೀನವಾದವುಗಳೆಂದೂ, ಯಾಸ್ಕನ ಕಾಲಕ್ಕಿಂತ ಮೊದಲೇ ಕೆಲವು ಕಲ್ಪಸೂತ್ರಗ್ರಂಥಗಳಾದರೂ ಪ್ರಚಾರದಲ್ಲಿ ಬಂದಿದ್ದವೆಂದೂ ಹೇಳಬಹುದು. ಎಂದರೆ ಕಲ್ಪಸೂತ್ರಗ್ರಂಥಗಳು ಕ್ರಿ. ಪೂ. ಏಳನೆಯ ಶತಮಾನಕ್ಕಿಂತ ಎಷ್ಟೋ ಶತಮಾನಗಳ ಪೂರ್ವದಲ್ಲೇ ಉದಯಿಸಿ ಪ್ರಚಾರವಾಗುತ್ತಾ, ಬೆಳೆಯುತ್ತಾ ಬಂದಿವೆ ಎಂದು ಸಾಮಾನ್ಯವಾಗಿ ಹೇಳಬೇಕಾಗುತ್ತದೆ.

ವೇದಗಳ ಪರಮಗುರಿಯಾದ ಜ್ಞಾನಕಾಂಡವನ್ನು ಬೋಧಿಸುವ ಉಪನಿಷತ್ತುಗಳನ್ನು ವೇದವೆಂದೂ, ನಿತ್ಯ, ಅಪೌರುಷಿಯವೆಂದೂ ನಮ್ಮ ಪ್ರಾಚೀನರು ಒಪ್ಪಿಕೊಂಡಂತೆ ಸೂತ್ರಗಳನ್ನು ವೇದವೆಂದಾಗಲೀ, ನಿತ್ಯವೆಂದಾಗಲೀ ಒಪ್ಪಿಕೊಳ್ಳದೇ ಮಾನವಕೃತವೆಂದು ಒಪ್ಪಿಕೊಂಡಿದ್ದಾರೆ. ಆದರೂ ಇದಕ್ಕೆ ವೇದಾಂಗಗಳಲ್ಲಿ ಒಂದು ಮಹತ್ವವಾದ ಸ್ಥಾನವನ್ನು ಕಲ್ಪಿಸಿದ್ದಾರೆ. ಇವುಗಳಲ್ಲಿ ಬ್ರಾಹ್ಮಣಗ್ರಂಥಗಳಲ್ಲಿ ಹೇಳಿರುವ ಮತ್ತೂ ಶಿಷ್ಟಸಂಪ್ರದಾಯವಾಗಿ ವ್ಯವಹಾರದಲ್ಲಿ ಬಂದಿರುವ ವಿಷಯುಗಳನ್ನು ವಿವರಿಸಿದ್ದಾರೆ. ಈ ಕಲ್ಪಸೂತ್ರಗ್ರಂಥಗಳೂ ಸಹ ಇತರ ವೇದಾಂಗಗಳಂತೆ

ಪ್ರತಿಯೊಂದು ವೇದಗಳಿಗೂ ಪ್ರತ್ಯೇಕವಾಗಿವೆ. ಈ ಕಲ್ಪಸೂತ್ರಗ್ರಂಥಗಳನ್ನು ಪ್ರಧಾನವಾಗಿ ಶ್ರೌತಸೂತ್ರ, ಸ್ಮಾರ್ತಸೂತ್ರ ಎಂದು ಎರಡು ತರಹ ವಿಭಾಗ ಮಾಡಿದ್ದಾರೆ. ಶ್ರೌತಸೂತ್ರಗಳನ್ನು ಶ್ರೌತಸೂತ್ರ, ಸುಲ್ಬಸೂತ್ರಗಳೆಂದು ಅನಂತರ ಎರಡು ವಿಧವಾಗಿಯೂ, ಸ್ಮಾರ್ತ ಸೂತ್ರಗ್ರಂಥಗಳನ್ನು ಗೃಹ್ಯಸೂತ್ರ, ಧರ್ಮಸೂತ್ರಗಳೆಂದು ಮತ್ತೆರಡು ವಿಧವಾಗಿಯೂ ವಿಭಾಗಮಾಡಿದ್ದಾರೆ. ಈ ನಾಲ್ಕುವಿಧವಾದ ಸೂತ್ರಗ್ರಂಥಗಳ ಸಮುದಾಯವನ್ನು ಒಟ್ಟಿಗೆ "ಕಲ್ಪಸೂತ್ರ" ವೆಂಬ ಒಂದೇ ಹೆಸರಿನಿಂದ ಕರೆದಿದ್ದಾರೆ.

**ಶ್ರೌತಸೂತ್ರಗ್ರಂಥಗಳು:—** ಶ್ರೌತವೆಂದರೆ ಶ್ರುತಿಗಳಿಗೆ ಅಥವಾ ವೇದಗಳಿಗೆ ಸಂಬಂಧಿಸಿದ್ದೆಂದು ಅರ್ಥವಾಗುತ್ತದೆ. ಸೂತ್ರವೆಂದರೆ "ಅಲ್ಪಾಕ್ಷರಗಳಿಂದ ಸಂದೇಹವು ಬರದಂತೆ ತಿಳಿಸಬೇಕಾದ ವಿಷಯವನ್ನು ನಿರ್ದಿಷ್ಟವಾಗಿ ತಿಳಿಸುವ ಪರಿಶುದ್ಧವಾದವಾಕ್ಯ"ಎಂದು ಹೇಳಿರುವರೆಂದು ಸೂತ್ರದಲಕ್ಷಣವನ್ನು ಹೇಳಿದೆ. ವೇದಗಳ ವಿಷಯುಗಳನ್ನುತಿಳಿಸುವ ಸೂತ್ರಗಳಿಗೆ ಶ್ರೌತಸೂತ್ರವೆಂದು ಹೆಸರು ಬಂದಿದೆಯೆಂದು ಸಾಮಾನ್ಯವಾಗಿ ಹೇಳಬಹುದು. ಈ ಶ್ರೌತಸೂತ್ರಗಳಲ್ಲಿ ಆಹವನೀಯ, ದಕ್ಷಿಣಾಗ್ನಿ, ಗಾಹರ್ಹಸ್ಪತ್ಯಗಳೆಂಬ ಮೂರು ಪ್ರಧಾನವಾದ ಅಗ್ನಿಗಳಿಗೆ ಸಾಧನವಾದ ಅಗ್ನಿಹೋತ್ರ, ದರ್ಶ, ಪೂರ್ಣಮಾಸ್ಯಗಳೆಂಬ ಮೂರು ಇಷ್ಟಿಗಳನ್ನೂ (ಯಜ್ಞ–ಹೋಮ) ಮತ್ತು ಪಶುಯಾಗ ಮೊದಲಾದ ಬೇರೆ ಬೇರೆ ರೀತಿಯ ಸೋಮಯಾಗಗಳನ್ನೂ, ಇವುಗಳಿಗೆ ಇರುವ ವಿವಿಧವಾದ ಅಂಗೋಪಾಂಗಗಳನ್ನೂ, ಅವುಗಳ ವಿಧಿವಿಧಾನಗಳನ್ನೂ ಸಹ ವಿವರಿಸಿದ್ದಾರೆ. ಪ್ರಾಚೀನಕಾಲದಲ್ಲಿ ಭಾರತೀಯರು ಮಾಡುತ್ತಿದ್ದ ಯಜ್ಞಯಾಗಾದಿಗಳ ನಿಜಸ್ವರೂಪವನ್ನು ತಿಳಿಯಬೇಕಿದ್ದರೆ, ಅವನ್ನು ತಿಳಿಯಲು ಅತ್ಯಂತ ಪ್ರಾಚೀನವೂ, ಸಮರ್ಥವೂ ಆದ ಸಾಧನವಾದ ಗ್ರಂಥಗಳೆಂದರೆ ಈ ಶ್ರೌತಸೂತ್ರಗಳಲ್ಲದೆ ಬೇರೆ ಯಾವುದೂ ಇರುವುದಿಲ್ಲ. ಇಂತಹ ಶ್ರೌತಸೂತ್ರಗ್ರಂಥಗಳು ಪ್ರತಿಯೊಂದು ವೇದಗಳ ಪ್ರತಿಯೊಂದು ಶಾಖೆಗೂ ಪ್ರತ್ಯೇಕವಾಗಿದ್ದವೆಂದು ತಿಳಿದುಬರುತ್ತದೆ.

ಋಗ್ವೇದಕ್ಕೆ ಸಂಬಂಧಪಟ್ಟ ಶ್ರೌತ ಸೂತ್ರಗ್ರಂಥಗಳು ಈವರೆಗೆ ಎರಡುಮಾತ್ರ ದೊರೆತಿವೆ. ಒಂದು ಆಶ್ವಲಾಯನಶ್ರೌತಸೂತ್ರ, ಇನ್ನೊಂದು

ಶಾಂಖ್ಯಾಯನಶ್ರೌತಸೂತ್ರಗ್ರಂಥ. ಆಶ್ವಲಾಯನಶ್ರೌತಸೂತ್ರಗಳು ಆಶ್ವಲಾಯನ ಶಾಖೆಯ ಬ್ರಾಹ್ಮಣಕ್ಕೂ, ಶಾಂಖ್ಯಾಯನಶ್ರೌತಸೂತ್ರಗಳು ಶಾಂಖ್ಯಾಯನ ಬ್ರಾಹ್ಮಣಕ್ಕೂ ಸಂಪೂರ್ಣವಾಗಿ ಹೊಂದಿಕೊಂಡಿವೆ. ಇವೆರಡರಲ್ಲಿಯೂ ಗೃಹ್ಯಗಳಿಗೆ ಸಂಬಂಧಪಟ್ಟ ವಿಷಯಗಳೂ ಸಹ ಸ್ವಲ್ಪಮಟ್ಟಿಗೆ ಸೇರಿಕೊಂಡಿವೆ.

ಕೃಷ್ಣಯುಜುರ್ವೇದಕ್ಕೆ ಸಂಬಂಧಪಟ್ಟ ಶ್ರೌತಸೂತ್ರಗಳು ಈವರೆಗೆ ಆರು ದೊರೆತಿವೆ, ೧) ಆಪಸ್ತಂಭ ೨) ಹಿರಣ್ಯಕೇಶೀಯ ೩) ಬೌಧಾಯನೀಯ ೪) ಭಾರದ್ವಾಜ ೫) ಮಾನವ ೬) ವೈಖಾನಸಗಳೆಂದು ಆರುಗ್ರಂಥಗಳು ದೊರೆತಿವೆ. ಶುಕ್ಲಯಜುರ್ವೇದೀಯ ಶ್ರೌತ ಸೂತ್ರ ಗ್ರಂಥವು ಕಾತ್ಯಾಯನ ಪ್ರಣೀತವಾದುದು. ಇದರಲ್ಲಿ ಆರು ಅಧ್ಯಾಯಗಳಿವೆ. ಶತಪಥಬ್ರಾಹ್ಮಣವನ್ನು ಅನುಸರಿಸಿ ಈ ಶ್ರೌತಸೂತ್ರ ಗ್ರಂಥವಿದೆ. ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟಂತೆ ಇದು ಒಂದೇ ಈವರೆಗೆ ದೊರೆತಿದೆ.

ಸಾಮವೇದಕ್ಕೆ ಸಂಬಂಧಪಟ್ಟ ಶ್ರೌತಸೂತ್ರ ಗ್ರಂಥಗಳು ಮಶಕ ಶ್ರೌತಸೂತ್ರ, ಲಾಟಾಯನಶ್ರೌತಸೂತ್ರ, ದ್ರಾಹ್ಯಾಯಣಶ್ರೌತಸೂತ್ರ, ಜೈಮಿನೀಯ ಶ್ರೌತಸೂತ್ರಗಳೆಂದು ನಾಲ್ಕು ಗ್ರಂಥಗಳು ಈವರೆಗೆ ದೊರೆತಿವೆ. ಇವುಗಳಲ್ಲಿ ಮಶಕಶ್ರೌತಸೂತ್ರವು ಇವೆಲ್ಲಕ್ಕೂ ಪ್ರಾಚೀನವಿರಬೇಕೆಂದು ಊಹಿಸುತ್ತಾರೆ. ಇದನ್ನು ಆರ್ಷೇಯಕಲ್ಪವೆಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ. ಇದು ಪಂಚವಿಂಶ ಬ್ರಾಹ್ಮಣಾನುರೋಧವಾಗಿದ್ದು ಇದರಲ್ಲಿ ಸೋಮಯಾಗಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಹೆಚ್ಚಾಗಿ ವಿವರಿಸಲಾಗಿದೆ. ಮತ್ತು ಇದರಲ್ಲಿ ವಿವಿಧವಾದ ಸಾಮಗಳ ಗಾನಪದ್ಧತಿಯನ್ನೂ, ಭಿನ್ನಭಿನ್ನವಾದ ರಾಗಕ್ರಮಗಳನ್ನೂ ಮತ್ತು ತಾಳಗಳನ್ನೂ ಸಹ ವಿವರಿಸಿದ್ದಾರೆ. ಲಾಟಾಯನ ಶ್ರೌತಸೂತ್ರಗ್ರಂಥವನ್ನು ಬರೆದವನು ಗೌತಮನೆಂದು ಪ್ರಸಿದ್ಧಿಯಿದೆ. ದ್ರಾಹ್ಯಾಯಣ ಶ್ರೌತಸೂತ್ರವು ದ್ರಾಹ್ಯಾಯಣ ಶಾಖೆಗೆ ಸಂಬಂಧಪಟ್ಟಿದೆ. ಹೀಗೆ ಒಟ್ಟು ಸಾಮವೇದದ ಶ್ರೌತಸೂತ್ರ ಗ್ರಂಥಗಳು ನಾಲ್ಕು ದೊರೆಯುತ್ತವೆ.

ಅಥರ್ವವೇದೀಯ ಶ್ರೌತಸೂತ್ರಗ್ರಂಥವು ವೈತಾನಶ್ರೌತಸೂತ್ರವು· ಇದು ಶ್ರೌತಸೂತ್ರಗ್ರಂಥಗಳಲ್ಲಿ ಉಳಿದ ಗ್ರಂಥಗಳಿಗಿಂತ ಅತ್ಯಂತ ನವೀನವಿರಬೇಕೆಂದು ವಿಮರ್ಶಕರು ಹೇಳುತ್ತಾರೆ. ಹೀಗೆ ವಿವಿಧ ರೂಪಗಳಲ್ಲಿರುವ ಶ್ರೌತಸೂತ್ರಗ್ರಂಥಗಳಲ್ಲಿ ಒಟ್ಟು ೧೪ ವಿಧವಾದ ಕ್ರಿಯಾವಿಶೇಷಗಳನ್ನು ಪ್ರತಿಪಾದಿಸಿದ್ದಾರೆ. ಈ ೧೪ ಕ್ರಿಯಾವಿಶೇಷಗಳಲ್ಲಿ ಏಳು ಹವಿಃಸಂಸ್ಥೆ (ಹೋಮದ್ರವ್ಯಗಳನ್ನು ತಿಳಿಸುವ ವಿಷಯ) ಗಳೆಂದೂ, ಏಳು ಹೋಮ ಸಂಸ್ಥೆಗಳೆಂದೂ ಪ್ರಧಾನವಾಗಿ ಎರಡು ವಿಧವಾಗಿ ವಿಭಾಗ ಮಾಡಬಹುದು.

## ಗೃಹ್ಯಸೂತ್ರಗ್ರಂಥಗಳು.

ಸ್ಮಾರ್ತಸೂತ್ರಗ್ರಂಥಗಳನ್ನು ಗೃಹ್ಯಸೂತ್ರ, ಧರ್ಮಸೂತ್ರ ಗ್ರಂಥಗಳೆಂದು ಎರಡು ವಿಧವಾಗಿ ವಿಭಾಗ ಮಾಡಿದ್ದಾರೆಂದು ಹಿಂದೆ ಹೇಳಿದೆ. ಅವುಗಳಲ್ಲಿ ಗೃಹ್ಯಸೂತ್ರಗ್ರಂಥಗಳ ಬಗ್ಗೆ ಎರಡುಸಾಲುಗಳಿಂದ ವಿಚಾರ ಮಾಡಿ ತಿಳಿಯುವ. ಗೃಹ್ಯವೆಂದರೆ " ಗ್ರಹಣಮಾಡಲು-ತೆಗೆದುಕೊಳ್ಳಲು ಯೋಗ್ಯವಾದುದು. " ಎಂದು ಸಾಮಾನ್ಯವಾಗಿ ಅರ್ಥವಾಗುತ್ತದೆ. ಗೃಹ್ಯಸೂತ್ರಗಳೆಂದರೆ, ತೆಗೆದುಕೊಳ್ಳಲು ಯೋಗ್ಯವಾದ ವಿಷಯಗಳನ್ನು ತಿಳಿಸಿಕೊಡುವ ಸೂತ್ರಗ್ರಂಥಗಳೆಂದು ಹೇಳಬಹುದು. ಬ್ರಾಹ್ಮಣಗ್ರಂಥಗಳಲ್ಲಿ ಹೇಳದೇ ಇರುವ, ಸಾಂಪ್ರದಾಯಿಕವಾಗಿ ಶಿಷ್ಟಾಚಾರದಿಂದ ವ್ಯವಹಾರದಲ್ಲಿ ಪ್ರಸಿದ್ಧವಾದ ಕರ್ಮಾನುಷ್ಠಾನಗಳನ್ನು ಸಹ ಪ್ರಾಮಾಣಿಕವೆಂದು ಪರಿಗ್ರಹಿಸಿ ಅವುಗಳನ್ನು ಸೂತ್ರರೂಪವಾಗಿ ಈ ಗೃಹ್ಯಸೂತ್ರಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾರೆ. ಪ್ರತಿಯೊಂದು ಕರ್ಮಗಳ ಅನುಷ್ಠಾನ, ಆಚಾರ, ಇವುಗಳ ನಿಯಮನಿಬಂಧನೆಗಳನ್ನು ಇವುಗಳಲ್ಲಿ ವರ್ಣಿಸಿದ್ದಾರೆ. ಇವುಗಳ ಜೊತೆಗೆ ಶ್ರೌತಸೂತ್ರಗ್ರಂಥಗಳಲ್ಲಿ ಹೇಳಿರುವ ಎಷ್ಟೋ ವಿಷಯಗಳನ್ನು ಸಹ ಇವುಗಳಲ್ಲಿ ಹೇಳಿರುವರು. ಆದ್ದರಿಂದಲೇ ಈ ಗೃಹ್ಯಸೂತ್ರಗ್ರಂಥಗಳಿಗೆ ಸೂತ್ರಗ್ರಂಥಗಳ ಸಮುದಾಯದಲ್ಲಿ ಎರಡನೆಯ ಸ್ಥಾನವು ದೊರೆತಿದೆ.

ಹಿಂದೂ ಧರ್ಮಶಾಸ್ತ್ರದ ಪದ್ಧತಿಯಂತೆ ಇಂದು ನಡೆಯುತ್ತಿರುವ ಷೋಡಶಸಂಸ್ಕಾರಗಳ ವರ್ಣನೆಯು ಇವುಗಳಲ್ಲಿ ಚಿತ್ರಿಸಲಾಗಿದೆ, ಅವುಗ

ಳಲ್ಲಿಯೂ ಉಪನಯನ, ವಿವಾಹಸಂಸ್ಕಾರಗಳ ವರ್ಣನೆಯು ಸಾಂಗೋಪಾಂಗವಾಗಿ ಬಹುವಿಸ್ತೃತವಾಗಿ ವರ್ಣಿಸಲಾಗಿದೆ. ಇವುಗಳಲ್ಲಿ ಹೇಳಿರುವ ಕರ್ಮಾನುಷ್ಠಾನಗಳನ್ನು ಪ್ರತಿಯೊಬ್ಬ ಹಿಂದೂ ಗೃಹಸ್ಥನೂ ಅವಶ್ಯವಾಗಿ ನಿರ್ಬಂಧವಾಗಿ ಮಾಡಲೇ ಬೇಕೆಂದು ಇವು ನಿಯಂತ್ರಿಸುತ್ತವೆ. ಈ ಗೃಹ್ಯ ಸೂತ್ರಗ್ರಂಥಗಳನ್ನು ಪರಿಶೀಲನೆ ಮಾಡುವುದರಿಂದ ಭಾರತದ ಪ್ರಾಚೀನ ಸಮಾಜಪದ್ಧತಿಯು ಮತ್ತು ಸಮಾಜದ ಆಚಾರವಿಚಾರಗಳು ಭಿನ್ನಭಿನ್ನ ಪ್ರಾಂತಗಳಲ್ಲಿ ಯಾವ ಯಾವ ಪದ್ಧತಿಯಲ್ಲಿದ್ದವು ಎಂಬುದು ಚೆನ್ನಾಗಿ ತಿಳಿದುಬರುತ್ತದೆ. ಪಾಶ್ಚಿಮಾತ್ಯ ದೇಶಗಳ ಜನಾಂಗಗಳಲ್ಲಿ ಗ್ರೀಕ್ ಮತ್ತು ರೋಮ್ ಜನಾಂಗಗಳ ಗ್ರಂಥಸಮುದಾಯವು ಅತ್ಯಂತ ಪ್ರಾಚೀನವಾದುದೆಂದೂ ಸಾಕಷ್ಟು ವಿಸ್ತಾರವಾಗಿದೆಯೆಂದೂ ಹೇಳಲಾಗುತ್ತಿದೆ. ಆದರೆ ಆ ದೇಶದ ಗ್ರಂಥಗಳಲ್ಲಿ ಆಯಾ ಜನಾಂಗದ ಅಂದಿನ ಸಮಾಜದ ರೀತಿ ನೀತಿಗಳನ್ನು, ಇಷ್ಟು ಸ್ಪಷ್ಟವಾಗಿ, ವಿವರವಾಗಿ ಹೇಳಿರುವುದಿಲ್ಲ. ಆದ್ದರಿಂದ ನಮ್ಮ ಭಾರತೀಯ ಗೃಹ್ಯಸೂತ್ರಗ್ರಂಥಗಳು ನಮ್ಮ ಭಾರತೀಯರಿಗೆ ಮಾತ್ರವಲ್ಲದೇ ಸಮಾಜಶಾಸ್ತ್ರ, ಜಾತಿಶಾಸ್ತ್ರಗಳನ್ನು ಅಭ್ಯಾಸಮಾಡಬೇಕು, ತಿಳಿಯಬೇಕು ಎನ್ನುವ ಎಲ್ಲಾ ಕುತೂಹಲಿಗಳಿಗೂ ವಿಚಾರಪರನಾದ ಪ್ರತಿಯೊಬ್ಬನಿಗೂ ಪರಿಶೀಲಿಸಲು ಯೋಗ್ಯವಾಗಿವೆಯೆಂದು ಮುಕ್ತಕಂಠದಿಂದ ಹೇಳಬಹುದು.

ಗೃಹ್ಯಸೂತ್ರಗ್ರಂಥಗಳೂ ಸಹ ಇತರ ಸೂತ್ರಗ್ರಂಥಗಳಂತೆಯೇ ಪ್ರತಿಯೊಂದು ಶಾಖೆಗಳಿಗೂ ಪ್ರತ್ಯೇಕವಾಗಿದ್ದವೆಂದು ತಿಳಿದುಬರುತ್ತದೆ. ಆದರೆ ಸದ್ಯಕ್ಕೆ ಉಪಲಬ್ಧವಿರುವ ಗ್ರಂಥಗಳು ಕೆಲವು ಮಾತ್ರವೇ ಆಗಿವೆ. ಋಗ್ವೇದಕ್ಕೆ ಸಂಬಂಧಪಟ್ಟ ಗೃಹ್ಯಸೂತ್ರಗ್ರಂಥಗಳು ಈವರೆಗೆ ಮೂರು ದೊರೆತಿವೆ. ಇವುಗಳಲ್ಲಿ ಶಾಂಖ್ಯಾಯನ ಗೃಹ್ಯಸೂತ್ರಗ್ರಂಥವು ಶಾಂಖ್ಯಾಯನ ಬ್ರಾಹ್ಮಣವನ್ನನುಸರಿಸಿದೆ. ಇದರ ಹೋಲಿಕೆಯೇ ಇರುವ ಕೌಷೀತಕೀ ಗೃಹ್ಯಸೂತ್ರಗ್ರಂಥವು ಕೌಷೀತಕೀ ಬ್ರಾಹ್ಮಣಕ್ಕೆ ಸಂಬಂಧಪಟ್ಟದ್ದು. ಇನ್ನೊಂದು ಆಶ್ವಲಾಯನ ಗೃಹ್ಯಸೂತ್ರಗ್ರಂಥವು ಐತರೇಯ ಬ್ರಾಹ್ಮಣಕ್ಕೆ ಸಂಬಂಧಿಸಿದೆ. ಇದನ್ನು ಬರೆದವರು ಆಶ್ವಲಾಯನಾಚಾರ್ಯರು. ಇದರಲ್ಲಿ

ನಾಲ್ಕು ಅಧ್ಯಾಯಗಳಿವೆ. ಆಶ್ವಲಾಯನ ಶ್ರೌತಸೂತ್ರದಂತೆಯೇ ಇದರ ಆರಂಭದಲ್ಲಿಯೂ ಸಹ " ಶೌನಕಾಯ ನಮಃ " ಎಂದು ಶೌನಕಾಚಾರ್ಯರಿಗೆ ವಂದನೆಯನ್ನು ಮಾಡಿ ಗ್ರಂಥಾರಂಭ ಮಾಡಿದ್ದಾರೆ.

ಕೃಷ್ಣಯಜುರ್ವೇದಕ್ಕೆ ಸಂಬಂಧಪಟ್ಟ ಗೃಹ್ಯಸೂತ್ರ ಗ್ರಂಥಗಳು ಈವರೆಗೆ ಏಳು ದೊರೆತಿವೆ. ೧) ಆಪಸ್ತಂಭ, ೨) ಹಿರಣ್ಯಕೇಶೀಯ, ೩) ಬೌಧಾಯನ, ೪) ಭಾರದ್ವಾಜೀಯ, ೫) ಮಾನವ, ೬) ವೈಖಾನಸ, ೭) ಖಾನಿಗೃಹಗಳೆಂದು ಏಳು ಗ್ರಂಥಗಳು ದೊರೆತಿವೆ. ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟ ಗೃಹ್ಯಸೂತ್ರಗ್ರಂಥವು ಪಾರಸ್ಕರ ಗೃಹ್ಯವೆಂಬುದು ಶುಕ್ಲಯಜುರ್ವೇದದ ಕಾತ್ಯಾಯನ, ವಾಜಸನೀಯ ಎರಡು ಶಾಖೆಯವರೂ ಇದನ್ನೇ ಗೃಹ್ಯಸೂತ್ರವೆಂದು ಪ್ರಮಾಣವಾಗಿಟ್ಟು ಕೊಂಡಿದ್ದಾರೆ. ಸಾಮವೇದಕ್ಕೆ ಸಂಬಂಧಪಟ್ಟಂತೆ ಗೋಭಿಲ, ಖಾದಿರ, ಜೈಮಿನೀಯವೆಂದು ಮೂರು ಗೃಹ್ಯಸೂತ್ರಗ್ರಂಥಗಳು ದೊರೆತಿವೆ. ಗೋಭಿಲ ಗೃಹ್ಯಸೂತ್ರವನ್ನು ಸಾಮವೇದದ ಎರಡು ಶಾಖೆಯವರೂ ಪ್ರಮಾಣಗ್ರಂಥವಾಗಿ ಅಂಗೀಕರಿಸಿದ್ದಾರೆ. ಖಾದಿರಗೃಹ್ಯಸೂತ್ರವು ದ್ರಾಹ್ಯಾಯಣಶಾಖೆಗೆ ಸಂಬಂಧಪಟ್ಟಿದೆ. ಇದನ್ನು ಸಾಮವೇದದ ರಾಣಾಯನೀಯ ಶಾಖೆಯವರೂ ಪ್ರಮಾಣಗ್ರಂಥವಾಗಿಟ್ಟುಕೊಂಡಿದ್ದಾರೆ. ಅಥರ್ವಣವೇದದ ಗೃಹ್ಯಸೂತ್ರಗ್ರಂಥವು ಕೌಶಿಕ ಗೃಹ್ಯಸೂತ್ರಗಳು. ಇದರಲ್ಲಿ ಅಥರ್ವಣ ವೇದದಲ್ಲಿ ಹೇಳಿದ ಆಭಿಚಾರಿಕ ಕ್ರಿಯೆಗಳನ್ನೂ ಅವುಗಳ ವಿವಿಧವಾದ ಅನುಷ್ಠಾನಕ್ರಮಗಳನ್ನೂ ಸಹ ವಿಸ್ತಾರವಾಗಿ ವರ್ಣಿಸಲಾಗಿದೆ. ಪ್ರಾಚೀನ ಭಾರತದ ಆಭಿಚಾರಿಕಕ್ರಿಯೆಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕೆನ್ನುವವರಿಗೆ ಇದರ ಹೊರತಾಗಿ ಬೇರೆಯ ಯೋಗ್ಯವಾದ ಪ್ರಾಚೀನಗ್ರಂಥವು ಯಾವುವೂ ಈವರೆಗೆ ದೊರೆತಿಲ್ಲ.

ಗೃಹ್ಯಸೂತ್ರಗ್ರಂಥಗಳಲ್ಲಿ ಮಾನವನಿಗೆ ನಡೆಯಬೇಕಾದ ಸಂಸ್ಕಾರಗಳು ಒಟ್ಟು ೪೦ ಎಂದು ವರ್ಣಿತವಾಗಿವೆ. ಅವುಗಳಲ್ಲಿ ಗರ್ಭಾಧಾನದಿಂದ ಮೊದಲುಗೊಂಡು ವಿವಾಹದವರೆಗಿನ ೧೮ ಸಂಸ್ಕಾರಗಳು ಶರೀರಕ್ಕೆ ಸಂಬಂಧಪಟ್ಟಂತೆ ನಡೆಸತಕ್ಕವು. ಉಳಿದ ೨೨ ಸಂಸ್ಕಾರಗಳು ಪ್ರತಿನಿತ್ಯ ಮಾಡಬೇಕಾದ ಯಜ್ಞರೂಪವಾದ ಕ್ರಿಯೆಗಳು. ಅವುಗಳಲ್ಲಿ ಪಂಚಮಹಾ

ಯಜ್ಞಗಳೂ ಮೂರು ಪಾಕಯಜ್ಞಗಳೂ ಗೃಹ್ಯಕರ್ಮಗಳೊಳಗೆ ಸೇರುತ್ತವೆ. ಉಳಿದ ೧೪ ಸಂಸ್ಕಾರಗಳು ಕೇವಲ ಶ್ರೌತಕರ್ಮಗಳಿಗೆ ಸಂಬಂಧಪಟ್ಟವುಗಳಾಗಿವೆ.

## ಧರ್ಮಸೂತ್ರಗ್ರಂಥಗಳು.

ಸೂತ್ರಗ್ರಂಥಗಳ ಸಮುದಾಯದಲ್ಲಿ ಮೂರನೆಯ ಸ್ಥಾನವು ಧರ್ಮಸೂತ್ರಗ್ರಂಥಗಳಿಗೆ ದೊರೆಯುತ್ತದೆ. ಸ್ಮೃತಿಗಳಲ್ಲಿ ಹೇಳಿರುವ ವಿಷಯಗಳನ್ನು ಸಂಗ್ರಹವಾಗಿ ಸೂತ್ರರೂಪದಿಂದ ಇವುಗಳಲ್ಲಿ ಹೇಳಲಾಗಿದೆ. ಸ್ಮೃತಿಗಳಿಗೆ ಧರ್ಮಸೂತ್ರಗ್ರಂಥಗಳು ಮೂಲವೆಂದು ಹೇಳುತ್ತಾರೆ. ಆದರೆ ಕೆಲವು ಸ್ಮೃತಿಗಳಾದರೂ ಧರ್ಮಸೂತ್ರ ಗ್ರಂಥಗಳಿಗಿಂತ ಪ್ರಾಚೀನವಾದವುಗಳೆಂದು ಹೇಳಲೇಬೇಕಾಗುತ್ತದೆ. ಏಕೆಂದರೆ ಉಪನಿಷತ್ತುಗಳಲ್ಲಿಯೂ ಪುರಾಣಗಳಲ್ಲಿಯೂ ಸ್ಮೃತಿಗಳ ಹೆಸರು ಅನೇಕ ಕಡೆಗಳಲ್ಲಿ ಕಂಡುಬರುತ್ತದೆ. ಈ ಧರ್ಮಸೂತ್ರಗ್ರಂಥಗಳೂ ಸಹ ಅತ್ಯಂತ ಪ್ರಾಚೀನವಾದವುಗಳೆಂದು ಧಾರಾಳವಾಗಿ ಹೇಳಬೇಕಾಗುತ್ತದೆ. ಕಡಿಮೆ ಎಂದರೆ ಪಾಣಿನಿಗಿಂತ (ಕ್ರಿ. ಪೂ. ೪) ಪ್ರಾಚೀನವಾದವುಗಳೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಧರ್ಮಸೂತ್ರಗ್ರಂಥಗಳು ಧಾರ್ಮಿಕ ರೀತಿನಿಬಂಧನೆಗಳನ್ನೂ, ಲೌಕಿಕ ವ್ಯಾಪಾರಕ್ಕೆ ಸಂಬಂಧಪಟ್ಟ ನೀತಿ ನಿಯಮಗಳನ್ನೂ ಪ್ರತಿಪಾದಿಸುತ್ತವೆ. ಇವುಗಳಲ್ಲಿ ರಾಜಧರ್ಮ, ಪ್ರಜಾಧರ್ಮಗಳನ್ನೂ ಸಹ ವರ್ಣಿಸಿದ್ದಾರೆ. ಮತ್ತು ಚತುರ್ವರ್ಣ (ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ) ಗಳ ನಿತ್ಯನೈಮಿತ್ತಿಕವಾದ ವ್ಯಾವಹಾರಿಕ, ಪಾರಮಾರ್ಥಿಕ ಕರ್ಮಗಳ ನಿಬಂಧನೆಗಳನ್ನೂ ಸಾಂಗೋಪಾಂಗವಾಗಿ, ವಿವರವಾಗಿ ವರ್ಣಿಸಿದ್ದಾರೆ. ಅದರಂತೆಯೇ ಚತುರಾಶ್ರಮ (ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸನ್ಯಾಸ) ಗಳ ಧರ್ಮಗಳನ್ನೂ ಸಹ ಇವುಗಳಲ್ಲಿ ವರ್ಣಿಸಿದ್ದಾರೆ. ಈ ಧರ್ಮಸೂತ್ರಗ್ರಂಥಗಳಲ್ಲಿ ಹೇಳಿರುವ ವರ್ಣಾಶ್ರಮ ಧರ್ಮಗಳೇ, ಆಚಾರವ್ಯವಹಾರಗಳೇ ಇಂದಿನವರೆಗೂ ಆಸೇತುಹಿಮಾಚಲದವರೆಗಿನ ಭಾರತೀಯರಲ್ಲಿ ಬಹುಮಟ್ಟಿಗೆ ನಡೆದುಕೊಂಡು ಬಂದಿವೆ. ಮತ್ತು ಪ್ರಾಮಾಣಿಕವೂ, ವ್ಯವಹಾರಯೋಗ್ಯವೂ ಆದ

ವುಗಳೆಂದು ಹೇಳಿಸಿಕೊಳ್ಳುತ್ತಿವೆ.

ಈಗ ನಮಗೆ ದೊರೆತಿರುವ ಧರ್ಮಸೂತ್ರಗ್ರಂಥಗಳು ಮೂರು ಮಾತ್ರ. ಈ ಮೂರು ಗ್ರಂಥಗಳೂ ಸಹ ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸಂಬಂಧಪಟ್ಟವೆ. ಆದರೆ ಇತರ ವೇದಗಳಿಗೆ ಸಂಬಂಧಪಟ್ಟ ಧರ್ಮಸೂತ್ರಗ್ರಂಥಗಳೂ ಪ್ರತ್ಯೇಕವಾಗಿದ್ದವು ಎಂದು ಇತರ ಅನೇಕ ಗ್ರಂಥಗಳಲ್ಲಿ ಹೇಳಿರುವ ಹೆಸರುಗಳಿಂದ ತಿಳಿದುಬರುತ್ತದೆ. ಆಪಸ್ತಂಭ ಧರ್ಮಸೂತ್ರಗ್ರಂಥವು ಅದರ ಕಲ್ಪಸೂತ್ರಗ್ರಂಥದ ೨೮, ೨೯ನೇ ಅಧ್ಯಾಯಗಳ ಭಾಗವಾಗಿದೆ. ಇದರಲ್ಲಿ ಬ್ರಹ್ಮ ಕ್ಷತ್ರಿಯ, ವೈಶ್ಯ ಈಮೂರು ವರ್ಣಗಳ ಕರ್ಮಗಳನ್ನೂ ಬ್ರಹ್ಮಚರ್ಯ, ಗಾರ್ಹಸ್ಥ್ಯಾಶ್ರಮಗಳ ಧರ್ಮಕರ್ಮಗಳನ್ನೂ, ಖಾದ್ಯಾಖಾದ್ಯ ಪದಾರ್ಥಗಳನ್ನೂ, ಪದಾರ್ಥಗಳ ಶುದ್ಧೀಕರಣ ಪದ್ಧತಿಯನ್ನೂ ಮತ್ತು ತಪಸ್ಸುಮಾಡುವ ಕ್ರಮವನ್ನೂ ಸಹ ವರ್ಣಿಸಿದ್ದಾರೆ. ಇದರ ಕೊನೆಯ ಭಾಗದಲ್ಲಿ ವಿವಾಹದ ವಿಷಯಗಳನ್ನು ಸಹ ವಿವರಿಸಿದ್ದಾರೆ. ಇನ್ನೊಂದು ಇದೇ ರೀತಿಯ ಹಿರಣ್ಯಕೇಶೀಯ ಧರ್ಮಸೂತ್ರಗ್ರಂಥವು ಇದೆ. ಇದರಲ್ಲಿ ೨೯ ಅಧ್ಯಾಯಗಳಿದ್ದು ಹಿರಣ್ಯಕೇಶೀಯ ಕಲ್ಪಸೂತ್ರಗ್ರಂಥದ ೧೬. ೧೭ ನೆಯ ಅಧ್ಯಾಯಗಳಲ್ಲಿ ಹೇಳಿರುವ ವಿಷಯಗಳನ್ನು ವಿಶದವಾಗಿ ಹೇಳಲಾಗಿದೆ. ಇನ್ನೊಂದು ಬೌಧಾಯನ ಧರ್ಮಸೂತ್ರಗ್ರಂಥ ಇದೂ ಸಹ ಕೃಷ್ಣಯಜುರ್ವೇದದ ತೈತ್ತಿರೀಯ ಶಾಖೆಗೆ ಸಂಬಂಧಪಟ್ಟಿದೆ. ಇದರಲ್ಲಿ ವರ್ಣಾಶ್ರಮ ಧರ್ಮಗಳನ್ನೂ, ರಾಜನೀತಿ, ಪೌರನೀತಿಯೇ ಮೊದಲಾದ ವಿಷಯಗಳನ್ನೂ ವಿವರಿಸಲಾಗಿದೆ.

ಸಾಮವೇದಕ್ಕೆ ಸಂಭಂಧಪಟ್ಟ ಗೌತಮೀಯವೆಂಬ ಗ್ರಂಥವು ಧರ್ಮಸೂತ್ರಗ್ರಂಥಗಳ ಸಾಲಿನಲ್ಲಿ ಸೇರಲು ಅರ್ಹವಾಗಿದೆ. ಇದರಂತೆಯೇ ಶ್ರೌತಸೂತ್ರಗ್ರಂಥಗಳ ಕಾಲದಲ್ಲಿಯೇ ಉತ್ಪನ್ನವಾದ ವಾಸಿಷ್ಠ ಧರ್ಮಶಾಸ್ತ್ರವೆಂಬ ಗ್ರಂಥವೂ ಸಹ ಮಹತ್ವದ ಸ್ಥಾನವನ್ನು ಪಡೆಯಲು ಅರ್ಹವಾಗಿದೆ. ಇದರಲ್ಲಿ ಮೂವತ್ತು ಅಧ್ಯಾಯಗಳಿವೆ. ಶಂಖಲಿಖಿತರೆಂಬ ಇಬ್ಬರು ಸಹೋದರರು ಕೂಡಿಬರೆದ ಇನ್ನೊಂದು ಧರ್ಮಸೂತ್ರಗ್ರಂಥವಿದೆ. ಇವರನ್ನೂ ಮತ್ತು ಪರಾಶರರನ್ನೂ ಧಾರ್ಮಿಕ ವಿಷಯಗಳಲ್ಲಿ ಅತ್ಯಂತ ಮಹತ್ತರ

ವೇದ ಪ್ರಾಮಾಣಿಕರಾದ ಧರ್ಮಾಚಾರ್ಯರೆಂದು ಪರಿಗಣಿಸಲಾಗಿದೆ. ಇವರ ಲೌಕಿಕ ವ್ಯವಹಾರಕ್ಕೆ ಸಂಬಂಧಪಟ್ಟ ಅನೇಕ ವಾಕ್ಯಗಳನ್ನು ಅನಂತರದ ಗ್ರಂಥಗಳಲ್ಲಿ ಅನೇಕ ಕಡೆಗಳಲ್ಲಿ ಪ್ರಮಾಣಭೂತವಾಗಿ ಉಪಯೋಗಿಸಿ ಕೊಂಡಿದ್ದಾರೆ.

## ಸುಲ್ಬಸೂತ್ರಗ್ರಂಥಗಳು.

ಸೂತ್ರಗ್ರಂಥಗಳ ಸಮುದಾಯದಲ್ಲಿ ಸೇರಲು ಅರ್ಹವಾದ ಸುಲ್ಬ ಸೂತ್ರಗ್ರಂಥಗಳು ಕೆಲವಿವೆ. ಇವು ಕಲ್ಪಸೂತ್ರಗ್ರಂಥಗಳ ಒಂದು ಅಂಗ ವಾಗಿವೆಯೆಂದು ಹೇಳಬಹುದು. ಇವುಗಳ ಪ್ರತ್ಯೇಕವಾದ ಸಂಬಂಧವು ಶ್ರೌತಕರ್ಮಗಳಿಗೆ ಇದೆ. ಸುಲ್ಬ ಎಂಬ ಶಬ್ದಕ್ಕೆ ಮಾಪನೆ, (ಅಳತೆ) ಎಂದು ಅರ್ಥವಾಗುತ್ತದೆ. ಹೆಸರಿಗೆ ತಕ್ಕಂತೆ ವೇದಿಕೆಗಳನ್ನೂ, ಯಜ್ಞ ಮಂಟಪಗಳನ್ನೂ ಕಟ್ಟುವ ಕ್ರಮವು ಇದರಲ್ಲಿ ವರ್ಣಿತವಾಗಿದೆ. ವೇದಿಕೆ ಮತ್ತು ಯಜ್ಞಮಂಟಪಗಳ ಅಗಲ, ಉದ್ದ, ಎತ್ತರಗಳು ಎಷ್ಟಿರಬೇಕು? ಎಲ್ಲೆಲ್ಲಿ ಯಾವ ಯಾವುದು ಇರಬೇಕು ? ಎಂಬುದನ್ನೂ ಸಹ ಇದರಲ್ಲಿ ವರ್ಣಿಸಲಾ ಗಿದೆ. ಮತ್ತೂ ಯಜ್ಞಗಳನ್ನು ಮಾಡವುದಕ್ಕೆ ಯೋಗ್ಯವಾದ ಸ್ಥಾನ ಗಳಾವುವು ? ಎಂದು ಇದರಲ್ಲಿ ಚರ್ಚಿಸಲಾಗಿದೆ. ಹೀಗೆ ಯಜ್ಞಕ್ರಿಯೆ ಯನ್ನು ಮಾಡಲು ಉಚಿತವಾದ ಸ್ಥಾನಕ್ಕೆ ಸಂಬಂಧಪಟ್ಟ ವಿಷಯಗಳೆಲ್ಲ ವನ್ನೂ ಇದರಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

ಈ ಸುಲ್ಬಸೂತ್ರಗ್ರಂಥಗಳು ಭಾರತೀಯರ ಜ್ಯಾಮಿತಿ ( ರೇಖಾ ಗಣಿತ ) ಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾಗಿವೆ, ಮತ್ತು ಇತರ ಗ್ರಂಥಗಳಿಗೆ ಮೂಲಗ್ರಂಥಗಳಾಗಿವೆ. ಈ ಸಿದ್ಧಾಂತವನ್ನು ಪ್ರಚುರಪಡಿಸಿದ ಶ್ರೇಯಸ್ಸು ಗ್ರೀಕ್ ಪಂಡಿತನಾದ " ಪೈಥಾಗೋರಸ್ " ಎಂಬುವನಿಗೆ ದೊರೆತಿದೆ. ಆದರೆ ಈ ಸಿದ್ಧಾಂತಮಾಡಿದವನಿಗಿಂತ ಎಷ್ಟೋ ಶತಮಾನಗಳ ಪೂರ್ವದಲ್ಲಿಯೇ ಸುಲ್ಬಸೂತ್ರಗ್ರಂಥಗಳು ಪ್ರಾಮಾಣಿಕವೆಂದು ಭಾರತವರ್ಷದಲ್ಲಿ ವ್ಯಾವಹಾರಿಕವಾಗಿ ಬಳಕೆಯಲ್ಲಿ ಬಂದಿದ್ದವು.

ಈ ಸುಲ್ಬಸೂತ್ರಗ್ರಂಥವು ಈವರೆಗೆ ಯಜುರ್ವೇದಕ್ಕೆ ಸಂಬಂಧ

ಪಟ್ಟಂತೆ ಒಂದು ಮಾತ್ರ ದೊರೆತಿದೆ. ಇದು ಆಪಸ್ತಂಭ ಕಲ್ಪಸೂತ್ರ ಗ್ರಂಥದ ೧೩ ಮತ್ತು ಕೊನೆಯ ಅಧ್ಯಾಯಗಳ ಭಾಗವಾಗಿದೆ. ಇವೆರಡು ಭಾಗಗಳಲ್ಲಿ ಯಜ್ಞವೇದಿಕೆಯೇ ಮೊದಲಾದ ವಿಷಯಗಳು ಪ್ರತಿಪಾದಿತ ವಾಗಿವೆ. ಕಲ್ಪಸೂತ್ರಗ್ರಂಥಗಳಲ್ಲಿ ಕೃಷ್ಣಯಜುರ್ವೇದದ ಕಲ್ಪಸೂತ್ರಗ್ರಂಥವು ಮಾತ್ರ ಪರಿಪೂರ್ಣವಾಗಿ ದೊರೆತಿದೆಯೆಂದು ಹೇಳಬಹುದು. ಕಲ್ಪ ಸೂತ್ರಗಳಲ್ಲಿ ಸೇರಬಹುದಾದ ಶ್ರೌತ, ಗೃಹ್ಯ, ಧರ್ಮ ಸುಲ್ಬಗಳೆಂಬ ನಾಲ್ಕು ವಿಭಾಗಗಳೂ ಇದರಲ್ಲಿ ಮಾತ್ರ ಸಾಂಗೋಪಾಂಗವಾಗಿ ವಿವರವಾಗಿ ವರ್ಣಿತವಾಗಿವೆ.

## ಪರಿಶಿಷ್ಟಗ್ರಂಥಗಳು

ಎಲ್ಲಾ ಶಾಖೆಗಳಿಗೂ ಅನ್ವಯವಾಗುವಂತಹ ಪರಿಶಿಷ್ಟವೆಂಬ ಹೆಸರಿನ ಕೆಲವು ಗ್ರಂಥಗಳು ಕಾಣಬರುತ್ತವೆ. ಅವುಗಳ ವಿಷಯವಾಗಿಯೂ ಸಹ ಈ ಸಂದರ್ಭದಲ್ಲಿ ನಾಲ್ಕು ಸಾಲುಗಳಲ್ಲಿ ತಿಳಿಯುವುದು ಆವಶ್ಯವೆನಿಸುತ್ತದೆ.

ಕಲ್ಪಸೂತ್ರಗ್ರಂಥಗಳಲ್ಲಿ ಹೇಳಿರುವ ವಿಷಯಗಳನ್ನೇ ಇವುಗಳಲ್ಲಿಯೂ ಪ್ರಧಾನವಾಗಿ ಹೇಳಿದೆ. ಆದರೆ ಅವುಗಳಲ್ಲಿ ಹೇಳದೇ ಇರುವ ಕೆಲವು ವಿಷಯಗಳನ್ನೂ ಸಹ ಇವುಗಳಲ್ಲಿ ಕಾಣಬಹುದು. ಪರಿಶಿಷ್ಟವೆಂಬ ಶಬ್ದಕ್ಕೆ ಉಳಿದ ಅಥವಾ ಹೇಳದೇ ಇರುವ ಶಿಷ್ಟಾಚಾರಸಮ್ಮತವಾದ ಎಂದು ಅರ್ಥವಾಗುತ್ತದೆ. ಇತರ ಸೂತ್ರಗಳಲ್ಲಿ ಹೇಳದೇ ಉಳಿದ ವಿಷಯಗಳನ್ನು ಸೇರಿಸಿ ವಿವರಿಸುವುದರಿಂದಲೇ ಇದಕ್ಕೆ ಪರಿಶಿಷ್ಟವೆಂಬ ಹೆಸರನ್ನೂ ಸಹ ಇಟ್ಟು ಕರೆದಿರಬೇಕೆಂದು ತೋರುತ್ತದೆ.

ಪರಿಶಿಷ್ಟಗ್ರಂಥಗಳಲ್ಲಿ ಆಶ್ವಲಾಯನ ಗೃಹ್ಯಪರಿಶಿಷ್ಟವೆಂಬ ಗ್ರಂಥವು ಋಗ್ವೇದಕ್ಕೆ ಸಂಬಂಧಪಟ್ಟಿದೆ. ನಾಲ್ಕು ಅಧ್ಯಾಯಗಳಿಂದ ಕೂಡಿದ ಗೋಭಿಲ ಪರಿಶಿಷ್ಟವೆಂಬ ಗ್ರಂಥವು ಸಾಮವೇದಕ್ಕೆ ಸಂಬಂಧಪಟ್ಟಿದೆ. ಇದಕ್ಕಿಂತಲೂ ನವೀನವಾದ "ಕರ್ಮ ಪ್ರದೀಪ" ವೆಂಬ ಇನ್ನೊಂದು ಪರಿಶಿಷ್ಟ ಗ್ರಂಥವಿದೆ. ಸಾಮವೇದದ ಛಾಂದೋಗ್ಯ ಗೃಹ್ಯಸೂತ್ರಕ್ಕೆ ಇದು ಪರಿಶಿಷ್ಟವಾಗಿದೆಯೆಂದು

ಹೇಳಬಹುದು. ಗೋಭಿಲ ಸ್ಮೃತಿಯೆಂದು ಅನೇಕ ಕಡೆಗಳಲ್ಲಿ ಉದಾಹರಿಸಿ ಪ್ರಸಿದ್ಧವಾದ ಇದನ್ನು ಶುಕ್ಲಯಜುರ್ವೇದಾನುಯಾಯಿಯಾದ ಕಾತ್ಯಾಯನನು ರಚಿಸಿರಬೇಕೆಂದು ಕೆಲವರು ಹೇಳುತ್ತಾರೆ.. ಮತ್ತೆ ಕೆಲವರು ಗೋಭಿಲಾಚಾರ್ಯನೇ ಬರೆದಿರಬೇಕೆಂದು ಊಹಿಸುತ್ತಾರೆ.

ಪರಿಶಿಷ್ಟಗ್ರಂಥಗಳಂತಿರುವ ಪ್ರಯೋಗಗ್ರಂಥಗಳು ಮತ್ತು ಸಾಂಪ್ರದಾಯಿಕ ಗ್ರಂಥಗಳೂ ಸಹ ಯಜ್ಞಕ್ರಿಯೆಗಳನ್ನು ತಿಳಿಯಬೇಕೆಂಬ ಕುತೂಹಲಿಗಳಿಗೆ ಅತ್ಯಂತ ಸಹಾಯವಾಗುವಂತಿವೆ. ಇವುಗಳ ಸಂಖ್ಯೆಯು ಸಂಪ್ರದಾಯಗಳಂತೆ ಯಥೇಚ್ಛವಾಗಿ, ಬಹುಮುಖವಾಗಿವೆ. ಪ್ರತಿಯೊಂದು ಶಾಖೆಗಳ ಪ್ರಯೋಗ ಗ್ರಂಥಗಳು ಆಯಾಶಾಖೆಗಳಿಗೆ ಸಂಬಂಧಪಟ್ಟ ಶ್ರೌತ, ಸ್ಮಾರ್ತಕರ್ಮಗಳನ್ನು ವಿವರವಾಗಿ ತಿಳಿಸುತ್ತವೆ. ಪ್ರತಿಯೊಂದು ಉಚ್ಚ, ನೀಚ, ಸಣ್ಣ, ದೊಡ್ಡ ಕರ್ಮಗಳು ಮತ್ತು ಆಯಾ ಕರ್ಮಗಳಿಗೆ ಬೇಕಾಗುವ ಋತ್ವಿಜರು (ಪುರೋಹಿತರು) ಮತ್ತು ಅವರ ಕರ್ಮಗಳನ್ನು ಸಹ ಇವುಗಳಲ್ಲಿ ಸ್ಪಷ್ಟವಾಗಿ, ವಿವರವಾಗಿ ವರ್ಣಿಸಲಾಗಿದೆ.

ಸೂತ್ರಗ್ರಂಥಗಳಿಗೂ ಪ್ರಯೋಗ ಗ್ರಂಥಗಳಿಗೂ ಅತ್ಯಂತ ಸಮೀಪದ ಸಂಬಂಧವನ್ನು ಪಡೆದ "ಕಾರಿಕೆ" ಗಳೆಂಬ ಇನ್ನೊಂದು ಜಾತಿಯ ಗ್ರಂಥಗಳಿವೆ. ಇವೆಲ್ಲವೂ ಪದ್ಯಮಯವಾಗಿದ್ದು ಹಿಂದಿನ ಸೂತ್ರಗ್ರಂಥಗಳಲ್ಲಿ ಹೇಳಿದ ವಿಷಯಗಳನ್ನೇ ಬೋಧಿಸುತ್ತವೆ. ಇವುಗಳಲ್ಲಿ ಪ್ರಧಾನವಾದುದು, ಪ್ರಾಚೀನವಾದುದು ಕ್ರಿ. ಶ. ೭ ನೆಯ ಶತಮಾನದ ಕುಮಾರಿಲಭಟ್ಟನು ಬರೆದ ಶ್ಲೋಕವಾರ್ತಿಕಸಂಗ್ರಹವೆಂಬ ಗ್ರಂಥವು. ಇದು ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ. ಮತ್ತು ಆಶ್ವಲಾಯನಗೃಹ್ಯಕಾರಿಕೆ, ಬೌಧಾಯನ ಗೃಹ್ಯಕಾರಿಕೆಯೇ ಮೊದಲಾದ ಕಾರಿಕಾ ಗ್ರಂಥಗಳಿವೆ. ಇವುಗಳ ಕ್ರಮವನ್ನನುಸರಿಸಿ ಕಾಲಕ್ರಮದಲ್ಲಿ ಇತರ ಶಾಸ್ತ್ರಗಳಲ್ಲಿಯೂ ಸಹ ಕಾರಿಕಾಗ್ರಂಥಗಳು ಉತ್ಪನ್ನವಾಗಿ ಪ್ರಚಾರಗೊಂಡಿರುತ್ತವೆ. ಅಥರ್ವಣವೇದಕ್ಕೆ ಸಂಬಂಧಪಟ್ಟವೆಂದು ಪ್ರಸಿದ್ಧವಾದ ಸುಮಾರು ಅರವತ್ತೇಳು ಪರಿಶಿಷ್ಟಗ್ರಂಥಗಳಲ್ಲಿ ಚರಣವ್ಯೂಹವೆಂಬ ಗ್ರಂಥವು ಅವಶ್ಯವಾಗಿ ಓದಲೇಬೇಕಾದಂತಹುದು.

# ಅನುಕ್ರಮಣಿಕಾಗ್ರಂಥಗಳು.

ವೇದವೇದಾಂಗಗಳ ವಿಚಾರವಾಗಿ ಬರೆಯುವ ಸಂದರ್ಭದಲ್ಲಿ ಅವಕ್ಕೆ ಸಂಬಂಧಪಟ್ಟಂತೆ ಇರುವ ಅನುಕ್ರಮಣಿಕಾ ಗ್ರಂಥಗಳ ಪರಿಚಯ ಮಾಡಿ ಕೊಡುವುದು ಅತ್ಯಂತ ಅವಶ್ಯವಾಗಿರುತ್ತದೆ. ವೇದಾಂಗಗಳಂತೆಯೇ ಇವೂ ಸಹ ವೇದಗಳ ರಕ್ಷಣೆಗಾಗಿಯೂ ವೇದಗಳ ಅರ್ಥವನ್ನು ತಿಳಿಸುವುದಕ್ಕಾಗಿಯೂ ಹೊರಟಿವೆ.

ಅನುಕ್ರಮಣಿಕಾ ಗ್ರಂಥಗಳಲ್ಲಿ ಆಯಾ ವೇದಗಳ ಉಪಾಸ್ಯವಾದ ದೇವತೆಗಳು, ಮಂತ್ರಗಳು, ಛಂದಸ್ಸು ಮತ್ತು ಮಂತ್ರದ್ರಷ್ಟಾರರಾದ ಋಷಿಗಳು ಇವುಗಳನ್ನೆಲ್ಲ ವರ್ಣಿಸಿದ್ದಾರೆ. ಕೆಲವು ಅನುಕ್ರಮಣಿಕಾ ಗ್ರಂಥಗಳಲ್ಲಿ ವೇದಗಳಲ್ಲಿ ಅಲ್ಲಲ್ಲಿಯೇ ತುಂಡುತುಂಡಾಗಿ ಬರುವ ಕಥೆಗಳನ್ನು ಹೊಂದುಗೊಡುವಂತೆ ಏಕತೆಯನ್ನು ಸಂಪಾದಿಸಿ ಚಿತ್ರಿಸಿದ್ದಾರೆ. ಋಗ್ವೇದಕ್ಕೆ ಸಂಬಂಧಪಟ್ಟಂತೆ ಏಳು ಅನುಕ್ರಮಣಿಕಾ ಗ್ರಂಥಗಳು ಈವರೆಗೆ ದೊರೆತಿವೆ. ಇವೇಳು ಗ್ರಂಥಗಳನ್ನು ಶೌನಕಾಚಾರ್ಯರು ಬರೆದಿರುವರೆಂದು ಪ್ರಸಿದ್ಧಿಯಿದೆ. ಶೌನಕಾಚಾರ್ಯರು ಬರೆದ ಪ್ರಾತಿಶಾಖ್ಯಗ್ರಂಥದಲ್ಲಿರುವ ಶ್ಲೋಕಾಭಿದಾನ, ತ್ರಿಷ್ಟುಪ್ ಎಂಬ ಎರಡು ಪ್ರಕರಣಗಳ ವಿಷಯಗಳನ್ನೇ ಪ್ರತ್ಯೇಕವಾಗಿ, ವಿವರವಾಗಿ ಈ ಅನುಕ್ರಮಣಿಕಾ ಗ್ರಂಥಗಳಲ್ಲಿ ಬರೆದಂತೆ ಕಾಣುತ್ತದೆ. ಅನುಕ್ರಮಣಿಕಾ ಗ್ರಂಥಗಳಲ್ಲಿ ಛಂದೋಬದ್ಧವಾಗಿ ಬರೆದ ಗ್ರಂಥಗಳು ಈವರೆಗೆ ಒಟ್ಟು ಐದು ದೊರೆತಿವೆ.

ಋಗ್ವೇದಕ್ಕೆ ಸಂಬಂಧಪಟ್ಟ ಏಳು ಗ್ರಂಥಗಳಲ್ಲಿ ಮೊದಲನೆಯದು ಆರ್ಷಾನುಕ್ರಮಣಿಕಾ ಗ್ರಂಥವು. ಇದು ಋಗ್ವೇದದ ಮಂತ್ರಗಳನ್ನು ಕಂಡು ಹಿಡಿದ ಋಷಿಗಳನ್ನು ತಿಳಿಸುತ್ತದೆ. ಎರಡನೆಯುದು ಛಂದೋನುಕ್ರಮಣಿಕಾ. ಇದರಲ್ಲಿ ಋಗ್ವೇದದ ಮಂತ್ರಗಳು ಯಾವ ಯಾವ ಛಂದಸ್ಸುಗಳಲ್ಲಿ ( ವೃತ್ತಗಳಲ್ಲಿ ) ಇವೆಯೆಂಬುದನ್ನೂ ಮತ್ತು ಪ್ರತಿಯೊಂದು ಮಂಡಲದೊಳಗಿನ ಪ್ರತ್ಯೇಕವಾದ ಛಂದಸ್ಸುಗಳಲ್ಲಿ ಯಾವ ಯಾವ ಮಂತ್ರಗಳಿವೆಯೆಂಬುದನ್ನೂ ಸಹ ವರ್ಣಿಸಲಾಗಿದೆ. ಮೂರನೆಯುದು ಅನುವಾಕಾನು

ಕ್ರಮಣಿಕಾ ಗ್ರಂಥವು. ಇದರಲ್ಲಿ ೪೦ ಶ್ಲೋಕಗಳು ಮಾತ್ರ ಇವೆ. ಋಗ್ವೇದಸಂಹಿತೆಯೊಳಗಿನ ೮೫ ಅನುವಾಕಗಳ ಮೊದಲನೆಯ ಮಂತ್ರಗಳ ಮೊದಲನೆಯ ಪದಗಳನ್ನೂ ಪ್ರತಿಯೊಂದು ಅನುವಾಕಗಳಲ್ಲಿರುವ ಸೂಕ್ತಗಳ ಸಂಖ್ಯೆಯನ್ನೂ ಸಹ ಇದರಲ್ಲಿ ತಿಳಿಸುವರು. ಋಗ್ವೇದದ ಒಟ್ಟು ಸೂಕ್ತಗಳು ೧೦೧೭ (ಬಾಷ್ಕಲ ಪಾಠಕ್ರಮದಂತೆ ೧೦೨೫ ಸೂಕ್ತಗಳಿವೆ.) ೧೦,೫೮೦ ಮಂತ್ರಗಳೂ, ೧,೫೩,೮೨೬ ಪದ (ಶಬ್ದ) ಗಳೂ, ೪.೩೨,೦೦೦ ಅಕ್ಷರಗಳೂ ಇವೆಯೆಂದು ಹೇಳಿದೆ.

ನಾಲ್ಕನೆಯದು ಪದಾನುಕ್ರಮಣಿಕೆ. ಇದರಲ್ಲಿ ಋಗ್ವೇದ ಮಂತ್ರಗಳ ಒಟ್ಟು ಪಾದಸಂಖ್ಯೆಯು ಎಷ್ಟಿದೆಯೆಂದು ಹೇಳಿದೆ. ಐದನೆಯದು ಸೂಕ್ತಾನುಕ್ರಮಣಿಕಾ ಗ್ರಂಥವು. ಈ ಗ್ರಂಥವು ಈವರೆಗೂ ದೊರೆತಿಲ್ಲ. ಇದರ ಹೆಸರು ಅನೇಕ ಕಡೆಗಳಲ್ಲಿ ಕಾಣಬರುವುದರಿಂದ ಇದು ಪೂರ್ವದಲ್ಲಿ ಇದ್ದು ಈಗ ಕಣ್ಮರೆಯಾಗಿದೆಯೆಂದು ಹೇಳಬೇಕಾಗಿದೆ. ಆರನೆಯದು ದೇವತಾನುಕ್ರಮಣಿಕಾ ಗ್ರಂಥವು. ಇದರಲ್ಲಿ ಋಗ್ವೇದದಲ್ಲಿ ವರ್ಣಿತವಾದ ಉಪಾಸ್ಯ ದೇವತೆಗಳನ್ನು ವಿವರಿಸಲಾಗಿದೆ. ಏಳನೆಯದು ಬೃಹದ್ದೇವತಾ ಎಂಬ ಗ್ರಂಥವು. ಇದರಲ್ಲಿ ೧೨೦೦ ಶ್ಲೋಕಗಳಿವೆ. ಇದರ ಎಂಟು ಅಧ್ಯಾಯಗಳಲ್ಲಿ ಋಗ್ವೇದದ ಎಂಟು ಅಷ್ಟಕಗಳಲ್ಲಿರುವ ದೇವತೆಗಳನ್ನೂ ಆಯಾ ದೇವತೆಗಳ ವಿಷಯಕ್ಕೆ ಸಂಬಂಧಪಟ್ಟ ಕೆಲವು ಕಥೆಗಳನ್ನೂ ಸಹ ವಿವರಿಸಿದ್ದಾರೆ. ಇನ್ನೊಂದು ಋಗ್ವಿಧಾನವೆಂಬ ಅನುಕ್ರಮಣಿಕಾ ಗ್ರಂಥವು. ಇದರಲ್ಲಿ ಋಗ್ವೇದ ಸೂಕ್ತಗಳ ಮತ್ತು ಮಂತ್ರಗಳ ಪಾರಾಯಣ ಕ್ರಮವನ್ನೂ, ಉಪಾಸನೆ ಮಾಡುವ ಪದ್ಧತಿಯನ್ನೂ ಉಪಾಸನೆಯಿಂದ ದೊರೆಯುವ ವಿವಿಧವಾದ ಫಲಗಳನ್ನೂ ಹೇಳಿದೆ. ಇದನ್ನು ಶೌನಕಾಚಾರ್ಯರು ಬರೆದಿರುವರೆಂಬ ಪ್ರತೀತಿ ಇದೆ.

ಕೃಷ್ಣ ಯಜುರ್ವೇದಕ್ಕೆ ಸಂಬಂಧಪಟ್ಟ ಅನುಕ್ರಮಣಿಕಾಗ್ರಂಥಗಳು ಎರಡು ದೊರೆತಿವೆ. ಒಂದು ಆತ್ರೇಯಾನುಕ್ರಮಣಿಕಾಗ್ರಂಥ. ಇದರಲ್ಲಿ ಎರಡು ಖಂಡಗಳಿವೆ. ಇದು ತೈತ್ತಿರೀಯ ಶಾಖೆಗೆ ಸಂಬಂಧಪಟ್ಟಿದೆ. ಇನ್ನೊಂದು ಕಾಠಕ ಶಾಖೆಯನ್ನು ಅನುಸರಿಸಿ ಬರೆದ ಗ್ರಂಥ. ಇದರಲ್ಲಿ

ಯಜುರ್ವೇದದ ಮಂತ್ರಗಳನ್ನು ಕಂಡುಹಿಡಿದ ಋಷಿಗಳ ಹೆಸರುಗಳನ್ನು ತಿಳಿಸಿದ್ದಾರೆ.

ಶುಕ್ಲಯಜುರ್ವೇದಕ್ಕೆ ಸಂಭಂಧಪಟ್ಟ ಅನುಕ್ರಮಣಿಕಾ ಗ್ರಂಥವನ್ನು ಬರೆದವರು ಕಾತ್ಯಾಯನಾಚಾರ್ಯರು. ಇದು ಮಾಧ್ಯಂದಿನ ಶಾಖೆಗೆ ಸಂಬಂಧಪಟ್ಟಿದೆ. ಶುಕ್ಲಯಜುರ್ವೇದಕ್ಕೆ ಸಂಬಂಧಪಟ್ಟಂತೆ ಇನ್ನೂ ಕೆಲವು ಅನುಕ್ರಮಣಿಕಾ ಗ್ರಂಥಗಳು ದೊರೆತಿವೆ. ಅವೆಲ್ಲವನ್ನೂ ಕಾತ್ಯಾಯನಾಚಾರ್ಯರೇ ಬರೆದಿರುವರೆಂದು ಹೇಳಲಾಗುತ್ತದೆ.

ಸಾಮವೇದದ ಅನುಕ್ರಮಣಿಕಾ ಗ್ರಂಥಗಳು ಆರ್ಷ, ದೇವತಾ ಎಂಬ ಎರಡು ಗ್ರಂಥಗಳು ದೊರೆತಿವೆ. ಇವುಗಳಲ್ಲಿ ಆರ್ಷಾನುಕ್ರಮಣಿಕಾ ಗ್ರಂಥದಲ್ಲಿ ಸಾಮವೇದದ ಮಂತ್ರಗಳನ್ನು ಕಂಡುಹಿಡಿದ ಋಷಿಗಳನ್ನೂ, ದೇವತಾನುಕ್ರಮಣಿಕೆಯಲ್ಲಿ ಸಾಮವೇದದಲ್ಲಿರುವ ದೇವತೆಗಳನ್ನೂ ತಿಳಿಸಲಾಗಿದೆ.

ಅಥರ್ವಣವೇದದ್ದೆಂದು ಪ್ರಸಿದ್ಧವಾಗಿರುವ ಸಪ್ತತಿ ಮೊದಲಾದ ಅನೇಕ ಪರಿಶಿಷ್ಟ ಗ್ರಂಥಗಳಿವೆ. ಅವುಗಳಲ್ಲಿ ಚರಣವ್ಯೂಹಸೆಂಬ ಗ್ರಂಥವು ಅತ್ಯಂತ ಗಮನಾರ್ಹವಾಗಿದೆ.

ಕಾತ್ಯಾಯನಾಚಾರ್ಯರು ಬರೆದ ಸರ್ವಾನುಕ್ರಮಣಿಕಾ ಎಂಬ ಗ್ರಂಥವು ಅತ್ಯಂತ ಗಮನಾರ್ಹವಾಗಿದೆ. ಇದು ಎಲ್ಲಾ ವೇದಗಳಿಗೂ ಸಂಬಂಧಪಟ್ಟ ವಿಷಯಗಳನ್ನು ಬೋಧಿಸುತ್ತದೆ. ಇದಕ್ಕೆ ಷಡ್ಗುರುಶಿಷ್ಯನೆಂಬುವನು ಭಾಷ್ಯವನ್ನು ಬರೆದಿದ್ದಾನೆ. ಇದರಲ್ಲಿ ಹಿಂದಿನ ಅನೇಕ ಅನುಕ್ರಮಣಿಕಾ ಗ್ರಂಥಗಳಲ್ಲಿ ಹೇಳಿದ ವಿಷಯಗಳನ್ನು ಸಂಕಲನೆಮಾಡಿ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಇದು ವೃತ್ತಬದ್ಧವಾದ ಶೈಲಿಯಿಂದ ಕೂಡಿದೆ. ವೇದಗಳ ವಿಷಯಗಳನ್ನು ತಿಳಿಯಬೇಕೆಂಬ ಅಭಿಲಾಷಿಗಳಿಗೆ ಇದು ಅತ್ಯಂತ ಸಹಾಯವಾಗುತ್ತದೆ.

## ಪೂರ್ವಮೀಮಾಂಸ

ವೇದಾರ್ಥಗಳನ್ನು ನಿರ್ಣಯಿಸುವುದಕ್ಕೆ ಅದರಲ್ಲಿಯೂ ವೇದಧಕರ್ಮ

ಕಾಂಡದ ವಿಷಯಗಳನ್ನೇ ವಿಶೇಷವಾಗಿ ವಿವರಿಸಲು, ನಿರ್ಣಯಿಸಲು ಹೊರ ಟಿರುವ ಅತ್ಯಂತ ಪ್ರಾಚೀನವೂ, ಪ್ರಧಾನವೂ ಆದ ಮೀಮಾಂಸಾ ಶಾಸ್ತ್ರದ ವಿಷಯವಾಗಿ ನಾಲ್ಕು ಸಾಲುಗಳನ್ನು ಬರೆಯುವುದು ಇಲ್ಲಿ ಅಪ್ರಸಂಗಿಕ ವಾಗಲಾರದು.

ಮೀಮಾಂಸಾ ದರ್ಶನವು ಅತ್ಯಂತ ಪ್ರಾಚೀನವಾದುದು. ವೇದ ಕಾಲದಿಂದಲೇ ಭಾರತೀಯರಲ್ಲಿ ಅದು ಪ್ರಚಾರದಲ್ಲಿದ್ದಿತೆಂಬುದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ. ವೇದಗಳ ಸಂಹಿತೆ ಬ್ರಾಹ್ಮಣಾದಿ ಗ್ರಂಥ ಗಳಲ್ಲೆಲ್ಲಾ ಮೀಮಾಂಸಾ ಶಬ್ದದ ಪ್ರಯೋಗಗಳನ್ನು ಅನೇಕ ಕಡೆಗಳಲ್ಲಿ ಕಾಣಬಹುದು ತೈತ್ತಿರೀಯ ಸಂಹಿತೆ, ತಾಂಡ್ಯಾಯನ ಬ್ರಾಹ್ಮಣ, ಛಾಂ ದೊಗ್ಯ ಬ್ರಾಹ್ಮಣಗಳಲ್ಲಿ ವಿಚಾರ-ವಿಮರ್ಶೆ ಎಂಬ ಅರ್ಥದಲ್ಲಿ ಮೀಮಾಂ ಸಾ ಪದವನ್ನು ಉಪಯೋಗಿಸಿದ್ದು ಕಾಣಬರುತ್ತದೆ. ಕೌಷೀತಕೀ ಬ್ರಾ ಹ್ಮಣದಲ್ಲಿ (೨-೬) ಉದಿತ-ಅನುದಿತ ಹೋಮಗಳ ಬಗ್ಗೆ ವಿಚಾರ ಮಾಡಿ ರುವುದು ಸ್ಪಷ್ಟವಾಗಿಯೇ ಕಾಣುವಂತಿದೆ. ಅದರಲ್ಲಿ "ಉದಿತೇ ಹೋತ ವ್ಯಂ ಅನುದಿತೇ ಹೋತವ್ಯಮಿತಿ ಮೀಮಾಂಸಂತೇ" ಎಂದು ಸ್ಪಷ್ಟವಾ ಗಿಯೇ ಯಜ್ಞಕರ್ಮಗಳ ಬಗ್ಗೆ ಚರ್ಚೆ ಮಾಡುತ್ತಾರೆ ಎಂಬರ್ಥದಲ್ಲಿ ಮೀ ಮಾಂಸಾ ಪದಪ್ರಯೋಗ ಮಾಡಿರುವುದನ್ನು ಕಾಣಬಹುದು. ಆದ್ದರಿಂದ ಮೀಮಾಂಸಾ ದರ್ಶನವು ವೇದಕಾಲದಿಂದಲೇ ಭಾರತೀಯರಲ್ಲಿ ಬಳಕೆಯ ಲ್ಲಿದ್ದು ಬೆಳೆದುಕೊಂಡು ಬಂದಿದೆಯೆಂದು ಧಾರಾಳವಾಗಿ ಹೇಳಬಹುದು.

ಮೀಮಾಂಸಾದರ್ಶನದ ಕುರುಹುಗಳು ವೇದಗಳ ಕಾಲದಿಂದಲೇ ಕಾಣುತ್ತಿದ್ದರೂ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರತ್ಯೇಕವಾದ ಗ್ರಂಥಗಳು ಇಂದಿನವರಾದ ನಮಗೆ ದೊರೆತಿರುವುದು ವೇದಕಾಲಕ್ಕಿಂತ ಈಚೆಯದು ಇಂದು ನಮಗೆ ದೊರೆಯುವ ಅತ್ಯಂತ ಪ್ರಾಚೀನವಾದ ಮೀಮಾಂಸಾ ಶಾಸ್ತ್ರದ ಪ್ರಥಮ ಗ್ರಂಥವೆಂದರೆ ಜೈಮಿನಿ ಮುನಿಯು ಬರೆದ ಸೂತ್ರಗ್ರಂ ಥವು. ಜೈಮಿನಿಯು ಕೃಷ್ಣದ್ವೈಪಾಯನವ್ಯಾಸರ ಶಿಷ್ಯನು. ವ್ಯಾಸರು ವೇದ ವಿಭಾಗ ಮಾಡಿದನಂತರ ಸಾಮವೇದವನ್ನು ಉಪದೇಶಮಾಡಿದ ಪ್ರಪ್ರ ಥಮ ಶಿಷ್ಯಗಣದಲ್ಲಿ ಜೈಮಿನಿಯು ಒಬ್ಬನು. ಈ ಜೈಮಿನಿಯೇ ಧರ್ಮ

ಸೂತ್ರವಾದ ಮೀಮಾಂಸಾ ಸೂತ್ರಗಳನ್ನು ಬರೆದಿರುವನೆಂದು ಸಾಂಪ್ರದಾಯಿಕರ ಅಭಿಪ್ರಾಯವಿದೆ. ಇದೇ ನಿಜವಾದರೆ ಜೈಮಿನಿಯ ಕಾಲವು ಕ್ರಿ. ಪೂ. ಮೂರುಸಾವಿರ ವರ್ಷಗಳಿಗಿಂತ ಪ್ರಾಚೀನವೆಂದೂ, ಅತಏವ ಮೀಮಾಂಸಾ ಸೂತ್ರಗಳ ರಚನಾ ಕಾಲವು ಅಷ್ಟೇ ಪ್ರಾಚೀನವೆಂದೂ ಸ್ವತಃ ಸಿದ್ಧವಾಗುತ್ತದೆ. ಆದರೆ ಇಂದಿನ ವಿಮರ್ಶಕರು ಸೂತ್ರಗ್ರಂಥಗಳ ಕಾಲವನ್ನು ಅಷ್ಟು ಪಾಚೀನವಾದುದೆಂದು ಒಪ್ಪಿಕೊಳ್ಳುವುದಿಲ್ಲ. ಇವರ ಅಭಿಪ್ರಾಯದಂತೆ ಈ ಮೀಮಾಂಸಾ ಸೂತ್ರಗಳ ರಚನಾ ಕಾಲವೂ ಸಹ ಇತರ ಸೂತ್ರಗ್ರಂಥಗಳ ಕಾಲದಂತೆ ಕ್ರಿ. ಪೂ. ನಾಲ್ಕನೆಯ ಶತಮಾನದ ಸ್ವಲ್ಪ(?) ಹಿಂದುಮುಂದಿರುತ್ತದೆ.

ಜೈಮಿನಿಯು ಈ ಸೂತ್ರಗ್ರಂಥವನ್ನು "ಅಥಾತೋ ಧರ್ಮಜಿಜ್ಞಾಸಾ" ಎಂಬ ಸೂತ್ರದಿಂದ ಆರಂಭಿಸಿ "ಅನ್ವಾಹಾರ್ಯೇ ಚ ದರ್ಶನಾತ್" ಎಂಬ ಸೂತ್ರದವರೆಗೆ ೨೭೪೭ ಸೂತ್ರಗಳಲ್ಲಿ ಮೀಮಾಂಸಾ ಶಾಸ್ತ್ರದ ವಿಷಯಗಳನ್ನು ಪ್ರತಿಪಾದಿಸಿದ್ದಾನೆ. ಈ ಸೂತ್ರಗಳನ್ನು ಹನ್ನೆರಡು ಅಧ್ಯಾಯವಾಗಿ ವಿಭಾಗಿಸಿರುವುದರಿಂದ, ಇದಕ್ಕೆ ದ್ವಾದಶಲಕ್ಷಣೀಮೀಮಾಂಸಾಎಂದು ಕರೆಯುತ್ತಾರೆ. ಇದರ ಅಧ್ಯಾಯಗಳು ಇತರ ಶಾಸ್ತ್ರಗಳ ಸೂತ್ರಗ್ರಂಥಗಳ ಅಧ್ಯಾಯಗಳಂತೆ ನಾಲ್ಕು ಪಾದಗಳಿಗೆ ಒಂದು ಅಧ್ಯಾಯವಾಗಿರದೆ ಕೆಲವು ಅಧ್ಯಾಯಗಳಲ್ಲಿ ಹೆಚ್ಚು ಪಾದಗಳಿರುತ್ತವೆ. ಈ ಗ್ರಂಥದ ಮೂರು, ಆರು ಹತ್ತನೆಯ ಅಧ್ಯಾಯಗಳಲ್ಲಿ ಎಂಟೆಂಟು ಪಾದಗಳೂ ಉಳಿದ ಒಂಭತ್ತು ಅಧ್ಯಾಯಗಳಲ್ಲಿ ನಾಲ್ಕು ನಾಲ್ಕು ಪಾದಗಳೂ ಇದ್ದು, ಒಟ್ಟು ಹನ್ನೆರಡು ಅಧ್ಯಾಯಗಳಿಗೆ ಅರವತ್ತು ಪಾದಗಳಿರುತ್ತವೆ. ಇದರಲ್ಲಿರುವ ಸೂತ್ರಗಳ ಸಂಖ್ಯೆಯು ಉಳಿದ ಎಲ್ಲಾ ಶಾಸ್ತ್ರಗಳ ಸೂತ್ರ ಸಂಖೆಗಳಿಗಿಂತಲೂ ಸ್ವಲ್ಪ ಹೆಚ್ಚಾಗಿರುತ್ತದೆ.

ಜೈಮಿನಿಯ ಈ ಸೂತ್ರಗಳಿಗೆ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಶಬರಸ್ವಾಮಿಯು ವಿಸ್ತೃತವಾದ ಭಾಷ್ಯವನ್ನು ಬರೆದಿದ್ದಾನೆ. ವ್ಯಾಕರಣ ಮಹಾಭಾಷ್ಯದಲ್ಲಿ ಕಾಶಕೃತ್ಸ್ನರೆಂಬ ಮೀಮಾಂಸಾಚಾರ್ಯರ ಹೆಸರೂ ಅವರ ಮೀಮಾಂಸದ ಹೆಸರೂ ಕಂಡುಬರುತ್ತದೆ. ಆದರೆ ಅವರ ಗ್ರಂಥ

ವಾಗಲೀ, ಕಾಲ ದೇಶಗಳ ವಿಷಯವಾಗಲೀ ತಿಳಿದು ಬಂದಿಲ್ಲ. ಇವಲ್ಲದೇ ಭಾರದ್ವಾಜಕೃತ ಕರ್ಮ ಮೀಮಾಂಸಾ ಎಂಬ ಮತ್ತೊಂದು ಗ್ರಂಥವು ದೊರಕಿದ್ದು ಇದನ್ನು ಭಾರತ ಮಹಾಮಂಡಲದವರು ಪ್ರಕಟಿಸಿದ್ದಾರೆ. ಇದು ಅತ್ಯಂತ ಪ್ರಾಚೀನವಾಗಿದ್ದು ಅವಶ್ಯ ಅವಲೋಕನಾರ್ಹವಾಗಿದೆ; ಎಂದು ಬಲ್ಲವರು ಹೇಳುತ್ತಾರೆ. ಹೀಗೆ ಮೂರು ನಾಲ್ಕು ವಿಧವಾದ ಮೀಮಾಂಸಾ ಗ್ರಂಥಗಳು ಪರಮಪ್ರಾಚೀನವಾದವುಗಳು ದೊರೆಯುತ್ತಿದ್ದರೂ ಜೈಮಿನೀಯ ಮೀಮಾಂಸ ಒಂದೇ ಮುಂದೆ ಬೆಳೆದುಕೊಂಡು ಬಂದಿದೆ.

ಜೈಮಿನೀಸೂತ್ರಗಳಿಗೆ ಉಪವರ್ಷ, ಭವದಾಸರೆಂಬ ಇಬ್ಬರು ಕ್ರಿ.ಶ. ಮೂರನೆಯ ಶತಮಾನಕ್ಕಿಂತ ಹಿಂದೆಯೇ ಎರಡು ವೃತ್ತಿಗಳನ್ನು ಬರೆದಿದ್ದಾರೆಂದು ತಿಳಿದು ಬಂದಿದೆ. ಮೀಮಾಂಸಾ ಸೂತ್ರಗಳ ಶಬರಸ್ವಾಮಿಯ ಭಾಷ್ಯಕ್ಕೆ ಏಳನೆಯ ಶತಮಾನದಲ್ಲಿ ಕುಮಾರಿಲಭಟ್ಟರೂ, ಪ್ರಭಾಕರಮಿಶ್ರರೂ ಹನ್ನೆರಡನೆಯ ಶತಮಾನದಲ್ಲಿ ಮುರಾರಿಮಿಶ್ರರೂ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇವರು ಮೂವರು ಕೆಲವು ಭಿನ್ನವಾದ ಸಿದ್ಧಾಂತಗಳನ್ನು ಒಪ್ಪಿಕೊಂಡು ವ್ಯಾಖ್ಯಾನ ಬರೆದಿರುವುದರಿಂದ ಮೀಮಾಂಸಾ ಶಾಸ್ತ್ರದಲ್ಲಿ ಮೂರು ಬೇರೆ ಬೇರೆಯ ಸಂಪ್ರದಾಯಗಳು ಪ್ರಚಾರವಾದವು. ಕುಮಾರಿಲಭಟ್ಟರ ಮತಕ್ಕೆ ಭಾಟ್ಟ ಮತವೆಂದೂ, ಪ್ರಭಾಕರಮಿಶ್ರರ ಮತಕ್ಕೆ ಪ್ರಾಭಾಕರ ಅಥವಾ ಗುರುಮತವೆಂದೂ, ಮುರಾರಿಮಿಶ್ರರ ಮತಕ್ಕೆ ಮುರಾರಿಪಂಥವೆಂದೂ ಕರೆಯುತ್ತಾರೆ. ಈ ಮುರಾರಿಮಿಶ್ರನು ಕುಮಾರಿಲ, ಪ್ರಭಾಕರರಿಗಿಂತ ತೀರ ವಿಭಿನ್ನವಾದ ರೀತಿಯಿಂದ ವಿಷಯೋಪನ್ಯಾಸ ಮಾಡಿರುವುದರಿಂದ "ಮುರಾರೇಸ್ತೃತೀಯಃ ಪಂಥಾ" ಎಂಬ ಗಾದೆಯ ಮಾತು ಪಂಡಿತರಲ್ಲಿ ಇವನ ಬಗ್ಗೆ ಮೆಚ್ಚಿಗೆಯ ಮಾತಾಗಿ ಪ್ರಚಾರದಲ್ಲಿ ಬಂದಿದೆ. ಆಮೇಲೆ ಈ ಮೂರು ಸಂಪ್ರದಾಯಗಳಲ್ಲಿಯೂ ಅನೇಕಾನೇಕ ಗ್ರಂಥಗಳು ಬೆಳೆದುಕೊಂಡು ಬಂದಿವೆ.

ಮೀಮಾಂಸಾ ದರ್ಶನವು ಪ್ರಧಾನವಾಗಿ ವೇದವಿಹಿತವಾದ ಕರ್ಮಗಳನ್ನು ಕ್ರಮಬದ್ಧವಾಗಿ, ಸುಗಮವಾಗಿ ತಿಳಿಸುವುದಕ್ಕೂ, ಕರ್ಮಾನುಷ್ಠಾನ ಮಾಡುವ ವಿಷಯದಲ್ಲಿ ಪರಸ್ಪರ ವಿರೋಧಗಳು ಕಂಡುಬಂದರೆ

ಆ ವಿರೋಧಗಳನ್ನು ಪರಿಹರಿಸಿ ಕರ್ಮಗಳಿಗೆ ಏಕವಾಕ್ಯತೆಗಳನ್ನು ಸಂಪಾದಿಸಿ ಕೊಡುವುದಕ್ಕೂ, ಯಾವ ಯಾವ ಕರ್ಮಗಳಿಗೆ ಯಾವ ಯಾವ ಮಂತ್ರ ಗಳನ್ನು ಉಪಯೋಗಿಸಿಕೊಳ್ಳಬೇಕೆಂಬುದನ್ನು ತಿಳಿಸುವುದಕ್ಕೂ, ಯಾವ ಯಾವ ಕರ್ಮಗಳಿಗೆ ಯಾವ ಯಾವ ಫಲಗಳು ದೊರೆಯುತ್ತವೆಂಬುದನ್ನು ನಿರ್ಣಯಿಸುವುದಕ್ಕೂ, ಕರ್ಮಗಳನ್ನು ಮಾಡುವ ರೀತಿಗಳನ್ನು ತಿಳಿಸುವು ದಕ್ಕೂ ಹೊರಟಿದೆಯೆಂದು ಸಾಮಾನ್ಯವಾಗಿ ಹೇಳಬಹುದು. ಪರಸ್ಪರ ವಿರೋಧವಾಗಿ ಕಾಣಬರುವ ಕರ್ಮಗಳಿಗೆ ಏಕವಾಕ್ಯತೆಯನ್ನು ಉಂಟು ಮಾಡುವ ಇವರ ರೀತಿಯು, ಯುಕ್ತಿಗಳು ಅತ್ಯಂತಸೋಪಪತ್ತಿಕವಾಗಿಯೂ ಮೌಲಿಕವಾಗಿಯೂ ಇರುತ್ತವೆ.

"ಅಥಾತೋ ಧರ್ಮಜಿಜ್ಞಾಸಾ" ಎಂಬ ಸೂತ್ರದಿಂದ ಆರಂಭ ವಾದ ಮೀಮಾಂಸವು "ಮಾನವನ ಇಷ್ಟಸಾಧನೆಗೆ ವೇದವಿಹಿತವಾದ ಕರ್ಮಾನುಷ್ಠಾನ ಮಾಡುವುದೇ ಧರ್ಮ" ಎಂದು ಹೇಳುತ್ತದೆ. ಮೀಮಾಂ ಸಾ ಮತದ ಸಿದ್ಧಾಂತದಂತೆ ವೇದಗಳು ನಿತ್ಯವಾದವುಗಳು. ಮಂತ್ರ ಗಳೇ ದೇವತೆಗಳು. ಮಂತ್ರಪುರಸ್ಸರವಾಗಿ ಮಾಡಿದ ವೇದೋಕ್ತ ಕರ್ಮ ಗಳೇ ಸ್ವತಂತ್ರವಾಗಿ ಆಯಾ ಕರ್ಮಗಳ ಫಲಗಳನ್ನು ಕೊಡುತ್ತವೆ. ಕರ್ಮ ಕ್ಕೆ ತಕ್ಕ ಫಲಗಳನ್ನು ಕೊಡುವವನು ಈಶ್ವರನಲ್ಲ. ವೈದಿಕ ಶಬ್ದಗಳಂತೆ ಇತರ ಎಲ್ಲಾ ಶಬ್ದಗಳು ನಿತ್ಯವಾದವುಗಳು. ವೇದ ಮಂತ್ರಗಳನ್ನು ವಿಧಿ, ಅರ್ಥವಾದ, ಮಂತ್ರ, ಸ್ಮೃತಿ, ನಾಮಧೇಯವೆಂಬ ಐದು ದೃಷ್ಟಿಗ ಳಿಂದ ನೋಡಬೇಕಾಗುತ್ತದೆ. ನಿತ್ಯವಾದ ಶಬ್ದಗಳಿಂದ ಇವೈದು ಅಭಿ ವ್ಯಕ್ತವಾಗುತ್ತವೆ. ಯಾವ ವಿಷಯವನ್ನಾದರೂ ನಿರ್ಣಯಿಸುವಾಗ ಉಪ ಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವ, ಫಲ, ಅರ್ಥವಾದ, ಉಪ ಪತ್ತಿ ಇವು ಏಳು ವಿಷಯಗಳಲ್ಲಿಯೂ ಸರಿಯಾದ ದೃಷ್ಟಿಯಿಟ್ಟು ತಾತ್ಪ ರ್ಯವನ್ನು ನಿರ್ಣಯಿಸಬೇಕು. ವಾಕ್ಯಗಳು ಪ್ರತ್ಯೇಕವಾಗಿ ಯಾವುದಾ ದರೊಂದು ಕರ್ಮಗಳನ್ನು ಬೋಧಿಸಬಹುದು. ಮತ್ತು ಆ ಕರ್ಮಾನು ಷ್ಠಾನದಿಂದ ಅದಕ್ಕೆ ತಕ್ಕ ಫಲಗಳನ್ನು ಪಡೆಯಬಹುದು.

ಇದರಲ್ಲಿ ಧರ್ಮವೆಂದರೇನು? ಅದರ ಜಿಜ್ಞಾಸಾಧಿಕಾರಿಗಳಾರು?

ವೇದಗಳು ಪೌರುಷೇಯವೇ? ಅಪೌರುಷೇಯವೇ? ಸ್ವತಃಪ್ರಮಾಣಗಳೇ, ಪರತಃ ಪ್ರಮಾಣಗಳೇ? ಮೊದಲಾದುವುಗಳನ್ನು ವಿಚಾರಿಸಿ, ವೇದಗಳಂತೆಯೇ ಸ್ಮೃತಿ, ಕಲ್ಪಸೂತ್ರಗ್ರಂಥಗಳೂ ವ್ಯಾಕರಣವೂ ಪ್ರಮಾಣಗ್ರಂಥಗಳಾಗಿರುತ್ತವೆಯೆಂದು ಮೀಮಾಂಸಕರು ಹೇಳುತ್ತಾರೆ. ಇದರಂತೆಯೇ ಅಗ್ನಿಹೋತ್ರ, ಶ್ಯೇನ, ವಾಜಪೇಯ ಮೊದಲಾದ ಯಜ್ಞವಾಚಕ ಪದಗಳ ಆಧಾರಗಳಿಂದಲೂ ಧರ್ಮಪ್ರಾಮಾಣ್ಯಗಳನ್ನು ಮೀಮಾಂಸಾ ದರ್ಶನದಲ್ಲಿ ವಿವರಿಸಲಾಗಿದೆ. ಇವಲ್ಲದೇ ಧಾತ್ವರ್ಥದಿಂದ ಬೋಧಿಸುವ ವಿಧಿವಾಕ್ಯಗಳ ವಿಚಾರಗಳನ್ನೂ, ವಿಧಿವಿಹಿತ ಕರ್ಮಾನುಷ್ಠಾನದಿಂದ ಹುಟ್ಟುವ ಅಪೂರ್ವ (ಪುಣ್ಯ), ಈ ಅಪೂರ್ವದಿಂದ ದೊರೆಯುವ ಫಲಗಳನ್ನೂ, ವಿಧಿ ಮತ್ತು ಅಪವಾದಗಳನ್ನೂ ವಿವರಿಸಿ ಇವುಗಳಿಗೆ ಸಾಮರಸ್ಯ ಏಕವಾಕ್ಯತೆಗಳು ಇರುವುದನ್ನು ಸ್ಪಷ್ಟವಾಗಿ, ವಿವರವಾಗಿ ಮೀಮಾಂಸಕರು ವಿಮರ್ಶಿಸಿದ್ದಾರೆ. ಯಜ್ಞಕರ್ಮಗಳಿಗೆ ಬೇಕಾದ ಹೋಮದ್ರವ್ಯಗಳನ್ನು ಯಾವ ಯಾವ ಕಾಮನೆಯಿಂದ, ಯಾವ ಯಾವ ಹೋಮದ್ರವ್ಯಗಳನ್ನು ಉಪಯೋಗಿಸಬೇಕೆಂಬುದನ್ನು ವಿವರಿಸಿ ಪ್ರಧಾನ ಕರ್ಮಗಳಾವುವು? ಅವುಗಳ ಅಂಗೋಪಾಂಗಗಳು ಯಾವುವು? ಅಂಗಕರ್ಮಗಳಲ್ಲಿ ಯಾವುದನ್ನು ಮುಂಚೆ ಮಾಡಬೇಕು? ಯಾವುದನ್ನು ಕಡೆಗೆ ಮಾಡಬೇಕು? ಅಂಗಕರ್ಮಗಳಿಗೂ ಪ್ರತ್ಯೇಕವಾದ ಫಲವಿದೆಯೆ ಅಥವಾ ಇವುಗಳು ಪ್ರಧಾನ ಕರ್ಮದ ಸಹಾಯಮಾತ್ರದಿಂದಲೇ ಫಲ ಕೊಡುತ್ತವೆಯೇ? ಮೊದಲಾದ ಯಜ್ಞಕ್ರಿಯೆಗಳಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ, ಸಂಧ್ಯಾವಂದನೆ, ವೈಶ್ವದೇವಾದಿ ನಿತ್ಯಕರ್ಮಗಳಿಗೆ ಸಂಬಂಧಪಟ್ಟ ವಿಷಯಗಳನ್ನೂ ಸಹ ಇದರಲ್ಲಿ ವಿವೇಚಿಸಿದ್ದಾರೆ.

ಮೀಮಾಂಸಾ ಶಾಸ್ತ್ರದ ಅಭಿಪ್ರಾಯದಂತೆ ನಿತ್ಯವಾದವೇದಗಳು ಬೋಧಿಸುವ ಕರ್ಮಾನುಷ್ಠಾನ ಮಾಡುವುದೇ ಅತ್ಯಂತ ಶ್ರೇಷ್ಠವಾದ ಕರ್ತವ್ಯವು. ಈ ಕರ್ಮಾನುಷ್ಠಾನ ಮಾಡುವುದರಿಂದ ದೊರೆಯುವ ಸ್ವರ್ಗಾದಿ ಉತ್ತಮ ಫಲಗಳನ್ನು ಪಡೆಯುವುದೇ ಕೊನೆಯ ಧ್ಯೇಯವು. ಸ್ವರ್ಗಾದಿ ಸುಖಾನುಭವಕ್ಕೆ ವೇದ ವಿಹಿತವಾದ ಕರ್ಮವೇ ಕಾರಣವು. ಆದರೆ

ಇಂದು ನಾವು ಮಾಡುವ ಕರ್ಮಗಳಿಗೂ, ಕಾಲಾಂತರದಲ್ಲಿ ದೊರೆಯುವ ಸುಖಾನುಭವಗಳಿಗೂ ಮಧ್ಯದಲ್ಲಿ ದೀರ್ಘವಾದ ಕಾಲದ ಅಂತರವು ಇರುವುದರಿಂದ ಇವಕ್ಕೆ ಕಾರ್ಯ ಕಾರಣ ಭಾವವು ಹೊಂದಿಕೊಳ್ಳುವುದಿಲ್ಲ. ಕಾರ್ಯಕಾರಣಗಳಿಗೆ ದೀರ್ಘಕಾಲದ ಅಂತರವು ಇರಕೂಡದು. ಕಾರಣದ ಉತ್ತರಕ್ಷಣದಲ್ಲಿ ಕಾರ್ಯವಾಗಬೇಕಾಗುತ್ತದೆ. ಅಥವಾ ಕಾರ್ಯವಾಗುವ ಕಾಲದ ಪೂರ್ವಕ್ಷಣದಲ್ಲಿ ಕಾರಣವು ಇರಬೇಕಾಗುತ್ತದೆ ಎಂಬ ಸಾಮಾನ್ಯವಾದ ನ್ಯಾಯದಿಂದ ಸುಬದ್ಧಗೊಳಿಸಲು ಅಥವಾ ಆ ಕರ್ಮ ಮತ್ತು ಫಲಗಳಿಗೆ ಸಂಬಂಧವನ್ನು ಸುಸಂಗತಗೊಳಿಸುವುದಕ್ಕಾಗಿ ಮೀಮಾಂಸಕರು ಅಪೂರ್ವ ಅಥವಾ " ಅದೃಷ್ಟ " ಎಂಬ ಒಂದು ಪದಾರ್ಥವನ್ನು ಒಪ್ಪಿಕೊಂಡಿದ್ದಾರೆ. ಈ ಅಪೂರ್ವವು ಕರ್ಮನಾಶವಾದರೂ, ಮುಗಿದಿದ್ದರೂ ಆ ಕರ್ಮದ ಫಲವು ಸಿಗುವವರೆಗೂ ಕರ್ಮಗಳನ್ನು ಮಾಡಿದವನಲ್ಲಿ ಇರುವುದರಿಂದ ಅವನಿಗೆ ತಾನು ಮಾಡಿದ ಕರ್ಮಗಳು ಅಪೂರ್ವದ್ವಾರಾ ಫಲಗಳನ್ನು ಕೊಡುತ್ತವೆ. ಅಂದರೆ ಇಂದು ಒಬ್ಬನು ಸ್ವರ್ಗಕಾಮನೆಯಿಂದ ಒಂದು ಜ್ಯೋತಿಷ್ಟೋಮವನ್ನು ಮಾಡಿದರೆ ಅದು ಮುಗಿದ ಕೂಡಲೇ ಒಂದು ವಿಧವಾದ ಅಪೂರ್ವವು ಹುಟ್ಟುತ್ತದೆ. ಆ ಅಪೂರ್ವವನ್ನು ಪುಣ್ಯವೆಂದು ಕರೆಯುತ್ತಾರೆ. ಆ ಅಪೂರ್ವವು ಅಗ್ನಿಷ್ಟೋಮ ಮಾಡಿದವನಲ್ಲಿರುತ್ತದೆ. ಆ ಮನುಷ್ಯನು ಪಂಚಭೌತಿಕ ಶರೀರವನ್ನು ಬಿಟ್ಟಮೇಲೆ ಅವನು ಹಿಂದೆ ಮಾಡಿದ ಅಗ್ನಿಷ್ಟೋಮವು ಮುಗಿದು ಎಷ್ಟೋ ಕಾಲ ಕಳೆದಿದ್ದರೂ ಅದರಿಂದ ಹುಟ್ಟಿದ ಪುಣ್ಯರೂಪವಾದ ಅದೃಷ್ಟವು ಅಂದಿನವರೆಗೂ ಅವನಲ್ಲಿರುವುದರಿಂದ ಅವನಿಗೆ ಸ್ವರ್ಗವು ದೊರೆಯುತ್ತದೆ. ಇದರಂತೆಯೇ ವೇದನಿಂದಿತವಾದ, ವೇದಗಳಲ್ಲಿ ಹೇಳದ ಕರ್ಮಗಳನ್ನು ಮಾಡುವುದರಿಂದಲೂ ಮತ್ತೊಂದು ವಿಧವಾದ ಅಪೂರ್ವವು ಹುಟ್ಟುತ್ತದೆ. ಹೀಗೆ ಕುಕರ್ಮಗಳನ್ನು ಮಾಡುವುದರಿಂದ ಉಂಟಾಗುವ ಅಪೂರ್ವಕ್ಕೆ ಪಾಪವೆಂದು ಕರೆಯುತ್ತಾರೆ. ಈ ಪಾಪರೂಪವಾದ ಅದೃಷ್ಟವೂ ಸಹ ಆ ಕುಕರ್ಮಿಯಲ್ಲಿ ಶರೀರಪಾತಪರ್ಯಂತವೂ ಇದ್ದು ಶರೀರಪಾತವಾದ ಕೂಡಲೇ ಆ ಕುಕರ್ಮಿಗೆ ನರಕರೂಪವಾದ ಕೆಟ್ಟ ಫಲವು ದೊರೆಯುತ್ತದೆ. ಆದ್ದರಿಂದ ವೇದವಿಹಿತವಾದ ಕರ್ಮಾನುಷ್ಠಾನ ಮಾಡುವುದರಿಂದುಂಟಾಗುವ ಅಪೂರ್ವಕ್ಕೆ ಪುಣ್ಯವೆಂದೂ, ವೇದ

ವಿಹಿತವಲ್ಲದ-ವೇದನಿಂದಿತವಾದ ಕುಕರ್ಮಗಳನ್ನು ಮಾಡುವುದರಿಂದುಂಟಾಗುವ ಅಪೂರ್ವಕ್ಕೆ ಪಾಪವೆಂದೂ ಕರೆಯುತ್ತಾರೆ. ಮತ್ತೂ ವೇದವಿಹಿತವಾದ ಕರ್ಮಾನುಷ್ಠಾನಕ್ಕೂ ಆ ಕರ್ಮಾನುಷ್ಠಾನದಿಂದ ಉಂಟಾಗುವ ಅಪೂರ್ವಕ್ಕೂ ಧರ್ಮವೆಂದೂ, ವೇದನಿಂದಿತ-ವೇದಾನುದಿತ ಕರ್ಮ ಮತ್ತು ಆ ಕುಕರ್ಮದಿಂದುಂಟಾಗುವ ಅಪೂರ್ವಗಳೆರಡಕ್ಕೂ ಅಧರ್ಮವೆಂತಲೂ ಕರೆಯುತ್ತಾರೆ. ಹೀಗೆ ವೇದಧರ್ಮ-ಕರ್ಮಗಳ ಬಗ್ಗೆ ವಿವಿಧರೀತಿಯಿಂದ ಸರ್ವಾಂಗಸುಂದರವಾಗಿ ಸಾಕಲ್ಯವಾಗಿ ವಿಚಾರ ಮಾಡಿರುವುದರಿಂದ ಈ ಮೀಮಾಂಸಾಶಾಸ್ತ್ರಕ್ಕೆ "ನ್ಯಾಯಶಾಸ್ತ್ರ" ವೆಂದು ಕರೆಯುವ ಪದ್ಧತಿಯು ಸಹ ಹಿಂದೆ ಇದ್ದಿತು.

ಮೀಮಾಂಸಾದರ್ಶನವು ಸಾಂಖ್ಯ, ಯೋಗದರ್ಶನಗಳಿಗಿಂತ ಹೆಚ್ಚು ಜನೋಪಯೋಗಿಯಾದ ದರ್ಶನವಾಗಿದೆ. ಸಾಂಖ್ಯ, ಯೋಗ ದರ್ಶನಗಳು ತತ್ವಜ್ಞಾನ ಉಂಟಾಗುವುದಕ್ಕೆ ಪುಣ್ಯಕರ್ಮಗಳು ಅವಶ್ಯವೆಂದು ಹೇಳಿದರೂ ಉತ್ತಮ ಪುಣ್ಯಕರ್ಮಗಳಿಗೆ. ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡಿದವರಿಗೆ-ಸಾಧನಾಭ್ಯಾಸಗಳಿಂದ ತತ್ವಜ್ಞಾನವು ಲಭಿಸುವುದೆಂದು ಹೇಳುವರು. ಆದರೆ ವಿರಕ್ತರಲ್ಲದವರಿಗೆ ಐಹಿಕ ಮತ್ತು ಪಾರಲೌಕಿಕವಾದ ಸ್ವರ್ಗಾದಿ ಸುಖರೂಪವಾದ ಫಲಕಾಮನೆಯಿಂದ ಕರ್ಮಮಾಡುವವರಿಗೆ-ಐಹಿಕ, ಪಾರತ್ರಿಕ ಭೋಗಾಪೇಕ್ಷಿಗಳಿಗೆ ಇವುಗಳನ್ನು ಪೂರ್ತಿಗೊಳಿಸುವ ಪುಣ್ಯಕರ್ಮಗಳನ್ನು ಬೋಧಿಸುವ ಶಾಸ್ತ್ರವೆಂದರೆ ಮೀಮಾಂಸಾಶಾಸ್ತ್ರವನ್ನು ಬಿಟ್ಟರೆ ಬೇರೆ ಶಾಸ್ತ್ರವಿರುವುದಿಲ್ಲ. ಹೀಗೆ ಪ್ರತಿಯೊಂದು ಕರ್ಮಗಳಿಗೂ ಫಲಗಳನ್ನು ಹೇಳಿ ಭೋಗಿಗಳಿಗೆ ಉಪಯುಕ್ತವಾದ ಕರ್ಮಗಳನ್ನು ಬೋಧಿಸುವುದರಿಂದ ಇದಕ್ಕೆ "ಪೂರ್ವಮೀಮಾಂಸಾ" ಎಂದು ಹೆಸರು ಕೊಟ್ಟು ಕರೆದಿದ್ದಾರೆ. ಮೋಕ್ಷಕ್ಕೆ ಸಂಬಂಧಪಟ್ಟ-ಭೋಗಗಳಿಗೆ ಅವಕಾಶವಿಲ್ಲದ ವಿಷಯಗಳನ್ನು ಬೋಧಿಸುವ ವೇದಾಂತದರ್ಶನಕ್ಕೆ "ಉತ್ತರಮೀಮಾಂಸ" ವೆಂದು ಹೆಸರು ಕೊಟ್ಟಿದ್ದಾರೆ.

ಪ್ರಾಚೀನ ಕಾಲದಿಂದ ಅವ್ಯಾಹತವಾಗಿ ನಡೆದುಕೊಂಡು ಬಂದ ವೈದಿಕ ಯಜ್ಞಕ್ರಿಯೆಗಳು ಸನಾತನ ಧರ್ಮವು ಬೌದ್ಧಮತದ ಪ್ರಾಬಲ್ಯದಿಂದ-ತದನುಯಾಯೀಭಿಕ್ಷುಗಳ ಪ್ರಬಲವಾದ ಪ್ರಚಾರಗಳಿಂದ ಅವನತಿ

ಯ ಪಥವನ್ನು ಹಿಡಿದಿದ್ದಿತು. ಬೌದ್ಧಭಿಕ್ಷುಗಳ ಪ್ರಚಂಡವಾದ ವಾದಸರಣಿಯಿಂದ ಸನಾತನಿಗಳೂ ಮೂಕರಾಗಿದ್ದರು. ಇವರ ಸಯುಕ್ತಿಕವಾದ ವಾದಸರಣಿಗಳಿಗೆ ಅನೇಕ ರಾಜರುಗಳು ಮನಸೋತು ಬೌದ್ಧಧರ್ಮ ದೀಕ್ಷಾಬದ್ಧರಾಗಿ ಸನಾತನಿಗಳ ಧರ್ಮನಿಷ್ಠೆಗೆ ಪೋಷಣೆಗೆ ಆಶ್ರಯವೇ ಇಲ್ಲದಂತಾಗುತ್ತಿತ್ತು. ಇಂತಹ ಜಟಿಲ ಸಂಧಿಗ್ಧ ಪರಿಸ್ಥಿತಿಯಲ್ಲಿ ಸನಾತನ ವೇದ ಧರ್ಮವನ್ನು ರಕ್ಷಿಸಿದ ಕೀರ್ತಿಯು ಪ್ರಬಲರಾದ ಬೌದ್ಧರ ವಾದಗಳನ್ನು ಸುಸಂಬದ್ಧವಾಗಿ, ತರ್ಕಶುದ್ಧವಾಗಿ, ಅವರಿಗಿಂತಲೂ ಹೆಚ್ಚಾದ ವಾದಸರಣಿಯನ್ನು ಮಾಡಿ ಕರ್ಮಕಾಂಡವನ್ನು ತಿರುಗಿ ಪುನರುಜ್ಜೀವನಗೊಳಿಸಿದ ಕೀರ್ತಿಯು ಮೊದಲನೆಯದಾಗಿ ಈ ಪೂರ್ವಮೀಮಾಂಸಕರಿಗೆ ಸಲ್ಲುತ್ತದೆ. ಮೀಮಾಂಸಾ ಶಾಸ್ತ್ರದ ಗ್ರಂಥಕರ್ತೃಗಳಲ್ಲಿ ಕೆಲವರು ಪ್ರಚ್ಛನ್ನರಾಗಿ ಬೌದ್ಧ ಭಿಕ್ಷುಗಳ ಶಿಷ್ಯತ್ವವನ್ನು ಹೊಂದಿ ಬೌದ್ಧಧರ್ಮವನ್ನು ಸಾಂಗವಾಗಿ ಅಭ್ಯಾಸ ಮಾಡಿ, ಆಮೇಲೆ ಬೌದ್ಧಮತವನ್ನು ಖಂಡಿಸಿ ಗ್ರಂಥ ರಚನೆ ಮಾಡಿದ್ದಾರೆಂದು ಸಾಂಪ್ರದಾಯಿಕ ಪ್ರತೀತಿಯಿದೆ. ಹೀಗೆ ವೈದಿಕ ಕರ್ಮಕಾಂಡಗಳನ್ನು ವೇದಕಾಲದಿಂದಲೂ ಪೋಷಿಸಿ, ಬೆಳೆಸಿ, ರಕ್ಷಿಸಿ, ಪ್ರಚುರಪಡಿಸುತ್ತಾ ಬಂದಿರುವ ಮೀಮಾಂಸಕರಿಗೆ ಸನಾತನ ಭಾರತೀಯರೆಲ್ಲರೂ ಚಿರ ಋಣಿಗಳಾಗಿರಬೇಕಾಗಿದೆ.

## ಸಾಯಣಾಚಾರ್ಯರು.

ಈ ಸಂದರ್ಭದಲ್ಲಿ ವೇದಭಾಷ್ಯವನ್ನು ಬರೆದು ಇಂದಿನ ಭಾರತೀಯರಿಗೆ ಮಹೋಪಕಾರ ಮಾಡಿದ ಶ್ರೀ ಸಾಯಣಾಚಾರ್ಯರನ್ನು ನೆನಸಿಕೊಳ್ಳದಿದ್ದರೆ, ಅವರ ಬಗ್ಗೆ ನಾಲ್ಕುಸಾಲುಗಳನ್ನು ಬರೆಯದಿದ್ದರೆ ಮಹತ್ತರವಾದ ಒಂದು ಕ್ರಿಯಾಲೋಪವಾಗದೇ ಇರದು. ಆದ್ದರಿಂದ ನಾಲ್ಕು ಸಾಲುಗಳಿಂದ ಶ್ರೀ ಸಾಯಣಾಚಾರ್ಯರ ಪರಿಚಯುವನ್ನು ಮಾಡಿಕೊಳ್ಳುವ.

ಸಾಯಣಾಚಾರ್ಯರು ಕರ್ಣಾಟಕದ ಮಹಾವೈಭವಪೂರ್ಣವಾದ ವಿಜಯನಗರಸಾಮ್ರಾಜ್ಯ ಸ್ಥಾಪನಾಚಾರ್ಯರಾದ ಶ್ರೀ ವಿದ್ಯಾರಣ್ಯ ಯತಿವರ್ಯರ ತಮ್ಮಂದಿರು. ಇವರ ತಂದೆಯವರ ಹೆಸರು ಮಾಯಣ ಎಂದೂ

ತಾಯಿಯ ಹೆಸರು ಶ್ರೀಮತಿ ಎಂದೂ ಪ್ರಸಿದ್ಧವಾಗಿದೆ. ಮಾಯಣರು ಒಳ್ಳೇ ವಿದ್ಯಾವಂತರೂ, ಆಚಾರನಿಷ್ಠರೂ, ಚತುಶ್ಶಾಸ್ತ್ರಪಂಡಿತರೂ ಆಗಿದ್ದರು. ಶ್ರೀಮತಿದೇವಿಯಾದರೂ ಪತಿಗೆ ತಕ್ಕ ಸತಿಯಾಗಿದ್ದಳು. ಇವರಿಗೆ ಬಹಳ ಕಾಲದವರೆಗೆ ಮಕ್ಕಳಾಗದೆ ಹಂಪೆಯ ವಿರೂಪಾಕ್ಷಸ್ವಾಮಿಯನ್ನು ಪೂಜಿಸಿ, ಗಜಗೌರೀವ್ರತವನ್ನು ಮಾಡಿ ದೇವಾನುಗ್ರಹದಿಂದ ಸಂತತಿಯನ್ನು ಪಡೆದರು. ಇವರ ಹಿರಿಯ ಮಕ್ಕಳು ಮಾಧವಾಚಾರ್ಯರು. ಎರಡನೆಯವರು ಸಾಯಣರು. ಮೂರನೆಯವರು ಭೋಗನಾಥರು. ಇವರ ಹಿರಿಯ ಮಗನೇ ವಿದ್ಯಾರಣ್ಯರು. ಇವರ ಮೊದಲನೆಯ ಹೆಸರು ಮಾಧವರೆಂದು. ಇವರು ವೇದವೇದಾಂತ ಪಾರಾವಾರಪಾರಂಗತರಾಗಿ ಮಾಧವಾಚಾರ್ಯರಾಗಿಯೂ, ತಮ್ಮ ದೇಶಪ್ರೇಮ ಸ್ವಾತಂತ್ರ್ಯಪ್ರಿಯತೆಗಳಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನಾಚಾರ್ಯರಾಗಿಯೂ, ರಾಜತಂತ್ರಪ್ರವೀಣತೆ, ನಿಷ್ಪಕ್ಷಪಾತ ಮನೋಧರ್ಮಗಳಿಂದ ವಿಜಯನಗರದ ಹುಕ್ಕ ಬುಕ್ಕರಾದಿಯಾಗಿ ನಾಲ್ಕು ತಲೆಮಾರಿನ ರಾಜರುಗಳಿಗೆ ಪ್ರತ್ಯಕ್ಷ ಅಪ್ರತ್ಯಕ್ಷವಾದ ಸಲಹಾಮಂತ್ರಿಗಳಾಗಿಯೂ, ತಮ್ಮ ಗ್ರಂಥರಚನಾ ನೈಪುಣ್ಯ, ವಿದ್ಯಾಪಕ್ಷಪಾತತೆ, ವಿದ್ವಜ್ಜನಪರಿಪೋಷಣೆಗಳಿಂದ ವೇದವೇದಾಂತ ಶಾಸ್ತ್ರ ಸಾಹಿತ್ಯಾದಿ ವಾಙ್ಮಯ ಪ್ರವರ್ಧನ ನಿಪುಣರೂ, ವಿರಕ್ತಿ, ಪರಿಪೂರ್ಣಜ್ಞಾನಗಳಿಂದ ಸನ್ಯಾಸಗ್ರಹಣ ಮಾಡಿ, ವಿದ್ಯಾರಣ್ಯರೂ. ಷಣ್ಮತ ಪ್ರತಿಷ್ಠಾಪನಾಚಾರ್ಯ ಶ್ರೀ ಶಂಕರಾಚಾರ್ಯರ ಪೀಠವಾದ ಶ್ರೀಶೃಂಗೇರಿ ಮಠದ ಸ್ವಾಮಿಗಳಾಗಿ ಜಗದ್ಗುರುಗಳಾಗಿಯೂ ವಿರಾಜಿಸಿದರು. ಮತ್ತು ಶ್ರೀ ವಿದ್ಯಾರಣ್ಯರು ಅಜರಾಮರವಾದ ಕೀರ್ತಿಯನ್ನು ಗಳಿಸಿ ಕಣ್ಮರೆಯಾದರೂ, ಇವರು ಕಟ್ಟಿದ ಸಾಮ್ರಾಜ್ಯವು ಅಳಿದರೂ ಇವರ ವಾಙ್ಮಯಸಾಮ್ರಾಜ್ಯವು ಬೆಳಗುತ್ತಿದೆ. ಬೆಳಕು ಕೊಡುತ್ತಿದೆ. ಇವರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅವು ಯಾವುವೆಂದರೆ (೧) ಪರಾಶರ ಮಾಧವೀಯ, (೨) ಕಾಲಮಾಧವೀಯ ಅಥವಾ ಕಾಲನಿರ್ಣಯ, (೩) ಜೀವನ್ಮುಕ್ತಿ ವಿವೇಕ, (೪) ಜೈಮಿನೀ ನ್ಯಾಯಮಾಲಾವಿಸ್ತರ, (೫) ವ್ಯವಹಾರ ಮಾಧವ, (೬) ಮಾಧವೀಯ ಧಾತುವೃತ್ತಿ. ಇವಲ್ಲದೆ ಹಲವು ಸ್ತೋತ್ರಗಳನ್ನೂ, ಮತ್ತೆ ಕೆಲವು

ವ್ಯಾಖ್ಯಾನಗ್ರಂಥಗಳನ್ನೂ ಬರೆದಿದ್ದಾರೆ. ಮತ್ತು ಸಾಯಣರು ಬರೆದ ವೇದ ಭಾಷ್ಯಕ್ಕೆ ಇವರು ಸಂಪೂರ್ಣ ಸಹಾಯಕರಾಗಿದ್ದರು.

ಸಾಯಣರ ತಮ್ಮ ಭೋಗನಾಥನೂ ಸಹ ಒಳ್ಳೆಯ ವಿದ್ಯಾವಂತನೂ, ಶಾಸ್ತ್ರಪರಿಣಿತನೂ, ಆಗಿದ್ದನು. ಆದರೂ ಅವನ ಕೈಯಲ್ಲಿ ಶಾಸ್ತ್ರಕ್ಕಿಂತ ಸಾಹಿತ್ಯದಲ್ಲಿ ಮೇಲಿನದು. ಉನ್ನತಮಟ್ಟದ್ದು. ಇವನು ೧) ರಾಮೋಲ್ಲಾಸ, ೨) ತ್ರಿಪುರವಿಜಯ, ೩) ಶೃಂಗಾರಮಂಜರಿ, ೪) ಗೌರೀನಾಥಾಷ್ಟಕ, ೫) ಉದಾಹರಣಮಾಲಾ, ೬) ಮಹಾಗಣಪತಿಸ್ತವ ಇವಾರು ಗ್ರಂಥಗಳನ್ನು ಬರೆದಿದ್ದಾನೆಂದು ತಿಳಿದು ಬಂದಿದೆ.

ಶ್ರೀ ಸಾಯಣಾಚಾರ್ಯರು ಮಾಯಣರ ಮೂರು ಮಂದಿ ಮಕ್ಕಳಲ್ಲಿ ಮಧ್ಯಮರು. ಇವರು ಪಂಪಾಕ್ಷೇತ್ರದ ಹಂಪೆಯ ಸಮೀಪದಲ್ಲಿನ ಒಂದು ಹಳ್ಳಿಯಲ್ಲಿ ಹುಟ್ಟಿಬೆಳೆದರು. ಕ್ರಿ. ಶ. ೧೩ ನೆಯ ಶತಮಾನದ ಕೊನೆಯ ಭಾಗದಿಂದ ಕ್ರಿ. ಶ. ೧೪ ನೆಯ ಶತಮಾನದ ಉತ್ತರಾರ್ಧದ ವರೆಗೂ ಇವರು ಇದ್ದಿರಬೇಕೆಂದು ವಿಮರ್ಶಕಾರರು ಅಭಿಪ್ರಾಯಪಟ್ಟಿದ್ದಾರೆ.

ಅವರ ಬಾಲ್ಯದಲ್ಲಿ ಆರಂಭದ ಸಾಮಾನ್ಯವಿದ್ಯಾಭ್ಯಾಸವು ಊರಿನಲ್ಲಿಯೇ ಆಯಿತು. ಸಾಹಿತ್ಯ, ಅಲಂಕಾರ ಕೆಲವು ಶಾಸ್ತ್ರಾಭ್ಯಾಸವೂ ಊರಿನಲ್ಲಿಯೇ ಆಯಿತು. ಆಮೇಲೆ ಇವರು ಪ್ರೌಢ ವಿದ್ಯಾಭ್ಯಾಸವನ್ನು ಬೇರೆ ಬೇರೆ ಕಡೆಗಳಿಗೆ ಹೋಗಿ ನಾಲ್ಕುಜನ ವಿದ್ವಾಂಸರಲ್ಲಿ ಮಾಡಿದರೆಂದು ವಿಮರ್ಶಕಾರರು ಹೇಳುತ್ತಾರೆ. ಇವರು ಊರು ಬಿಟ್ಟು ಪ್ರೌಢ ವಿದ್ಯಾಭ್ಯಾಸಕ್ಕಾಗಿ ಹೊರಟವರು ಮೊದಲು ಕಂಚಿಯಲ್ಲಿರುವ ವಿಷ್ಣುಭಟ್ಟರೆಂಬುವರಲ್ಲಿ ಓದಿದರು. ಆಮೇಲೆ ಭಾರತೀಕೃಷ್ಣತೀರ್ಥರಲ್ಲಿಯೂ, ಶ್ರೀ ಶಂಕರಾನಂದರಲ್ಲಿಯೂ, ಶ್ರೀಕಂಠನಾಥರೆಂಬುವರಲ್ಲಿಯೂ ಕ್ರಮವಾಗಿ ವಿದ್ಯಾಭ್ಯಾಸ ಮಾಡಿದರು. ಇವರು ವೇದವೇದಾಂಗಗಳನ್ನೂ ಚತುಶ್ಶಾಸ್ತ್ರಗಳನ್ನೂ ಚೆನ್ನಾಗಿ ಓದಿ ಆಳವಾದ ಪಾಂಡಿತ್ಯವನ್ನೂ ಪ್ರತಿಯೊಂದು ಶಾಸ್ತ್ರಗಳ ಮರ್ಮವನ್ನೂ ಪರಿನಿಷ್ಠಿತವಾಗಿ ತಿಳಿದಿದ್ದರು. ಇವರು ಉತ್ತಮೋತ್ತಮ ಪಂಡಿತರಾಗಿದ್ದಂತೆಯೇ ಅಷ್ಟೇ ದೇಶಪ್ರೇಮಿಗಳೂ ಸ್ವಾತಂತ್ರ್ಯಪ್ರಿಯರೂ ಆಗಿದ್ದರು. ಇವರ ಅಗ್ರಜರು ದೇಶದ ಸ್ವಾತಂತ್ರ್ಯಕ್ಕಾಗಿ

ಹೋಗುವಾಗ ಅದಕ್ಕೆ ಪೂರ್ಣ ಸಮ್ಮತಿಯನ್ನು ತೋರಿಸಿ, ಮನೆಯ ಎಲ್ಲಾ ಜವಾಬ್ದಾರಿಯನ್ನೂ ಇವರೇ ನಿರ್ವಹಿಸಿಕೊಂಡು ಬರುತ್ತಿದ್ದರು. ಸಾಹಿತ್ಯ ರಸಿಕನಾದ ಇವರ ತಮ್ಮನು ಗೃಹಕೃತ್ಯದ ವಿಷಯವನ್ನು ಮನಸ್ಸಿಗೆ ತೆಗೆದುಕೊಳ್ಳುತ್ತಲೇ ಇರಲಿಲ್ಲ. ಇವರು ಅಷ್ಟು ಸ್ಥಿತಿವಂತರಾಗಿಲ್ಲದಿದ್ದರೂ, ಇದ್ದುದರಲ್ಲಿಯೇ ಸರಿಮಾಡಿಕೊಂಡಿದ್ದರು. ಇಂತಹ ಸ್ಥಿತಿಯಲ್ಲಿಯೂ ಇವರು ವಾಗ್ದೇವಿಯ ಸೇವೆಯನ್ನು ಸತತವಾಗಿ ನಡೆಸಿಕೊಂಡು ಬರುತ್ತಿದ್ದರು. ಇವರು ಒಟ್ಟು ಒಬ್ಬನಿಂದ ಹೊರಲಾರದಷ್ಟು ಗ್ರಂಥರಾಶಿಯನ್ನು ಬರೆದಿದ್ದಾರೆ. ಸಾಯಣರು ಈ ಗ್ರಂಥಗಳನ್ನು ಬರೆದಿದ್ದಾರೆಂದು ಈವರೆಗೆ ತಿಳಿದು ಬಂದಿದೆ.

೧) ಋಗ್ವೇದದ ಐತರೇಯ ಸಂಹಿತಾ ಭಾಷ್ಯ.
೨) ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತಾ ಭಾಷ್ಯ
೩) ಶುಕ್ಲಯಜುರ್ವೇದದ ಕಣ್ವ ಸಂಹಿತಾ ಭಾಷ್ಯ.
೪) ಸಾಮವೇದದ ಸಂಹಿತಾ ಭಾಷ್ಯ
೫) ಅಥರ್ವಣವೇದದ ಶೌನಕ ಸಂಹಿತಾ ಭಾಷ್ಯ.
(೬-೧೦) ಇವೈದರ ಬ್ರಾಹ್ಮಣಗಳ ಭಾಷ್ಯಗಳು.
( ೧-೧೫) ಇವುಗಳ ಆರಣ್ಯಕಗಳ ಭಾಷ್ಯಗಳು.
೧೬) ಸಾಮವೇದದ ಪ್ರಾತಿಶಾಖ್ಯದ ಭಾಷ್ಯ.

೧೭) ಸುಭಾಷಿತ ಸುಧಾನಿಧಿ
೧೮) ಪುರುಷಾರ್ಥ ಸುಧಾನಿಧಿ
೧೯) ಪ್ರಾಯಶ್ಚಿತ್ತ ಸುಧಾನಿಧಿ
೨೦) ಯಜ್ಞತಂತ್ರ ಸುಧಾನಿಧಿ
೨೧) ಅಲಂಕಾರ ಸುಧಾನಿಧಿ
೨೨) ಆಯುರ್ವೇದ ಸುಧಾನಿಧಿ

ಇವುಗಳಲ್ಲಿ ಮೊದಲಿನ ೧೫ ಗ್ರಂಥಗಳನ್ನು "ವೇದಭಾಷ್ಯ" ವೆಂಬ ಒಂದೇ ಹೆಸರಿನಿಂದ ಕರೆಯುಬಹುದು ಇದನ್ನು "ವೇದಾರ್ಥಪ್ರಕಾಶ" ಎಂದು ಮತ್ತೊಂದು ಹೆಸರಿನಿಂದ ಕರೆಯುತ್ತಾರೆ. ಶ್ರೀ ಸಾಯಣರು ಈ ವೇದಭಾಷ್ಯವನ್ನು ವಿಜಯನಗರದ ರಾಜ್ಯಸ್ಥಾಪನೆಯಾದಮೇಲೆ ಆಗಿನ ಸಂಸ್ಥಾನಾಧಿಪತಿಯಾದ ಬುಕ್ಕರಾಜನ ಆಳ್ವಿಕೆಯ ಕಾಲದಲ್ಲಿ ಅವನ ಆಶ್ರಯದೊಳಗೆ ಬರೆದಿರುವರು. ಇದನ್ನು ಬರೆಯುವುದಕ್ಕೆ ಬುಕ್ಕರಾಯನೇ

ಪ್ರೇರಕನಿರಬೇಕೆಂದು, ಇವರ ವೇದಭಾಷ್ಯದ ಪ್ರಸ್ತಾವನೆಯಿಂದ ತಿಳಿದು ಬರುತ್ತದೆ. ಅದರಲ್ಲಿ "ಬುಕ್ಕಭೂಪತಿಯು ಪೂರ್ವೋತ್ತರ ಮೀಮಾಂಸಾತ್ಮಕವಾದ ವೇದಭಾಷ್ಯಗಳನ್ನು ಬರೆಯುವುದಕ್ಕೆ ಮಾಧವಾಚಾರ್ಯರನ್ನು ಕೇಳಿಕೊಂಡನು." ಎಂದು ಬರೆದಿದೆ. ಇದರಿಂದ, ಬುಕ್ಕರಾಯನ ಪ್ರೇರಣೆಯಿಂದ ಮಾತ್ರವಲ್ಲದೆ, ಮಾಧವಾಚಾರ್ಯರ ಸಹಾಯದಿಂದಲೂ, ಈ ವೇದಭಾಷ್ಯವನ್ನು ಸಾಯಣಾಚಾರ್ಯರು ಬರೆದರೆಂಬುದು ತಿಳಿದುಬರುವಂತಿದೆ. ವೇದಾರ್ಥಗಳನ್ನು, ಸಾಮಾನ್ಯರಿಗೇಕೆ, ಚನ್ನಾಗಿ ಸಂಸ್ಕೃತಭಾಷಾಜ್ಞಾನವಿದ್ದವರಿಂದಲೂ ತಿಳಿಯಲು ಸಾಧ್ಯವಾಗುವುದಿಲ್ಲ. ಇದನ್ನು ಸುಲಭವಾಗಿ ತಿಳಿಯಲು ಅನುಕೂಲವಾಗುವಂತೆ ನಾಲ್ಕು ವೇದ (ಶುಕ್ಲಯಜುರ್ವೇದ ಸಹಿತ) ಗಳಿಗೂ ಭಾಷ್ಯವನ್ನು ಬರೆದಿರುವರು.

೨. **ಪ್ರಾತಿಶಾಖ್ಯಭಾಷ್ಯ:—** ಇದು ಸಾಮವೇದ ಪ್ರಾತಿಶಾಖ್ಯೆಯ ಭಾಷ್ಯ ಪ್ರಾತಿಶಾಖ್ಯದಲ್ಲಿ ಆಯಾ ಶಾಖೆಗೆ ಸಂಬಂಧಪಟ್ಟ ವೇದದ ಅರ್ಥ ತಿಳಿಯುವ ಕ್ರಮವು, ಅದರಲ್ಲಿನ ಕಠಿಣ ಶಬ್ದಗಳ ವಿವರಣೆ ಮೊದಲಾದವುಗಳಿರುತ್ತವೆ. ಇದನ್ನು ಮತ್ತಷ್ಟು ಸುಗಮವಾಗಿ ತಿಳಿಯುವಂತೆ ಒಂದು ವ್ಯಾಖ್ಯಾನವನ್ನು ಬರೆದಿದ್ದಾರೆ. ೩) **ಸುಭಾಷಿತ ಸುಧಾನಿಧಿ:—** ಇದು ಪ್ರಾಚೀನವಾದ ಅನೇಕ ವಿಧವಾದ ನೀತಿಬೋಧಕ, ಸುಭಾಷಿತಪದ್ಯಗಳ ಸಂಗ್ರಹ. ೪) **ಪುರುಷಾರ್ಥ ಸುಧಾನಿಧಿ:—**ಇದೂ ಸಹ ಜೀವನದಲ್ಲಿ ಮಾನವನು ಉತ್ತಮನಾಗಿ ಬಾಳಿ ಮುಂದೆ ಸದ್ಗತಿಯನ್ನು ಪಡೆಯಲು ಉಪಯುಕ್ತನಾದ ವಿಷಯಗಳನ್ನು ತಿಳಿಸುವ ಪ್ರಾಚೀನ ಪದ್ಯಗಳ ಸಂಗ್ರಹವಾಗಿದೆ. ೫) **ಪ್ರಾಯಶ್ಚಿತ್ತ ಸುಧಾನಿಧಿ:—** ಇದು ಮನುಷ್ಯನು ಪ್ರತಿದಿವಸವೂ ತಿಳಿದೋ ತಿಳಿಯದೆಯೋ ಮಾಡುವ ನಾನಾ ವಿಧವಾದ ಪಾಪಗಳನ್ನು ಪರಿಹಾರ ಮಾಡಿಕೊಳ್ಳುವುದಕ್ಕೆ ಪ್ರಾಯಶ್ಚಿತ್ತ ಅಥವಾ ಪರಿಹಾರೋಪಾಯಗಳನ್ನು ಬೋಧಿಸುವ ಪ್ರಾಚೀನಶಾಸ್ತ್ರಜ್ಞರ ಸಿದ್ಧಾಂತಗಳನ್ನು ತಿಳಿಸುವ ಗ್ರಂಥ. ೬) **ಯಜ್ಞ ತಂತ್ರ ಸುಧಾನಿಧಿ:—** ಶ್ರೌತಸ್ಮಾರ್ತಾದಿ ನಿತ್ಯನೈಮಿತ್ತಿಕ ಯಜ್ಞಗಳ ವಿಧಿ ವಿಧಾನಗಳನ್ನು ತಿಳಿಸುವ ಗ್ರಂಥ. ೭) **ಅಲಂಕಾರ ಸುಧಾನಿಧಿ:—** ಕಾವ್ಯಗಳಲ್ಲಿ ಉಪಯೋಗಿಸಲ್ಪಡುವ ನಾನಾ ಪ್ರಕಾರವಾದ ಅಲಂಕಾರಗಳನ್ನು ಇದು

ತಿಳಿಸುತ್ತದೆ. ೮) ಆಯುರ್ವೇದ ಸುಧಾನಿಧಿ:— ವೈದ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥ. ಇದು ರೋಗಗಳು ಬರುವ ರೀತಿ, ಅವುಗಳ ಪರಿಹಾರಕ್ಕೆ ಬೇಕಾದ ಚಿಕಿತ್ಸೆಗಳನ್ನು ಬೋಧಿಸುತ್ತದೆ. ಹೀಗೆ ಅನೇಕಾನೇಕ ಗ್ರಂಥಗಳನ್ನು ಬರೆದಿದ್ದರೂ ಇವರಿಗೆ ಶಾಶ್ವತವಾದ ಕೀರ್ತಿಯನ್ನು ತಂದು ಕೊಟ್ಟಿರುವುದೂ, ಆಚಂದ್ರಾರ್ಕವಾಗಿ ಭಾರತೀಯರೆಲ್ಲಾ ಇವರನ್ನು ಅಹರ್ನಿಶ ಸ್ಮರಿಸಿಕೊಳ್ಳುವಂತೆ ಮಾಡಿದುದೂ ವೇದ ಭಾಷ್ಯವು. ಇಂದಿನವರಾದ ನಾವು ವೇದಗಳ ಅರ್ಥವನ್ನು ತಿಳಿಯಬೇಕಿದ್ದರೆ, ಸಾಯಣರ ಭಾಷ್ಯವನ್ನು ಬಿಟ್ಟರೆ ಬೇರೆ ಯಾವ ಹಾದಿಯೂ, ಸಹಾಯವೂ ಇರುವುದಿಲ್ಲ. ವೇದಗಳಲ್ಲಿರುವ ಅಪೂರ್ವವಾದ ಉಪಮಾರೂಪಕಾದಿಗಳ ವೈಖರಿಯಾಗಲೀ, ಅದರ ಭಾಷೆ-ಶಬ್ದಸರಣಿಗಳಾಗಲೀ, ವೈದಿಕ, ಪಾರಿಭಾಷಿಕ ಪದಗಳಾಗಲೀ ಅತ್ಯಂತ ವಿಚಿತ್ರವಾಗಿವೆ, ಇವೆಲ್ಲವುಗಳನ್ನು ಸರಿಯಾಗಿ ತಿಳಿದು ಅರ್ಥ ಮಾಡುವುದಕ್ಕೆ ಸಾಯಣರ ಭಾಷ್ಯದ ಸಹಾಯವಿಲ್ಲದೇ ಎಂತಹ ಚತುಃಶಾಸ್ತ್ರ ಪಂಡಿತನಾದ ಸಂಸ್ಕೃತಜ್ಞನಿಂದಲೂ ಸಾಧ್ಯವಾಗುವಂತಿಲ್ಲ. ನಮಗೆ ವೇದಗಳ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಸಹಾಯಮಾಡುವ, ಪ್ರಾಚೀನವಾದ ಅನೇಕ ಗ್ರಂಥಗಳಿವೆ. ಸಂಹಿತೆಗಳ ಅರ್ಥವನ್ನು ತಿಳಿಯುವುದಕ್ಕೆ ಆಯಾ ಶಾಖೆಗಳ ಬ್ರಾಹ್ಮಣಗ್ರಂಥಗಳು ಕೆಲಮಟ್ಟಿಗೆ ಸಹಾಯವಾಗುತ್ತವೆಯಾದರೂ ಬ್ರಾಹ್ಮಣಗ್ರಂಥಗಳಲ್ಲಿಯೂ ಸಹ ಅಪೂರ್ವವಾದ ವಿಷಯಗಳಿರುವುದರಿಂದ, ನಮ್ಮಿಂದ ಬ್ರಾಹ್ಮಣಗಳನ್ನೇ ಸರಿಯಾಗಿ, ಸಾಕಲ್ಯವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತಿಲ್ಲ. ಅವುಗಳ ಅರ್ಥ ತಿಳಿಯುವುದಕ್ಕೂ ಸಹ ಬೇರೊಂದರ ಸಹಾಯ ಬೇಕೇ ಬೇಕಾಗುತ್ತದೆ. ಆದ್ದರಿಂದ ಸಂಹಿತೆ ಬ್ರಾಹ್ಮಣಾದಿಗಳೆಲ್ಲವನ್ನೂ ತಿಳಿಯುವುದಕ್ಕೆ ಸಹಾಯಕವಾದ ಪ್ರತಿಯೊಂದು ಶಾಖೆಗಳ ಪ್ರಾತಿಶಾಖ್ಯಗಳು, ನಿರುಕ್ತಗಳು, ಬೃಹದ್ದೇವತಾ, ಸರ್ವಾನುಕ್ರಮಣಿಕಾ, ಕಲ್ಪಸೂತ್ರ, ಜೈಮಿನೀಯ ಮೀಮಾಂಸ ಗ್ರಂಥಗಳನ್ನು ಅವಶ್ಯವಾಗಿ ನೋಡಿ ಅಭ್ಯಾಸಮಾಡಿ, ವೇದಾರ್ಥ ಮಾಡುವುದಕ್ಕೆ ಪ್ರಯತ್ನಿಸಬೇಕಾಗುತ್ತದೆ. ಇವೆಲ್ಲ ಗ್ರಂಥಗಳೂ ಸಹ ಒಂದೊಂದು ದೃಷ್ಟಿಯಿಂದ ವೇದಾರ್ಥಗಳನ್ನು ತಿಳಿಯುವ ಕ್ರಮವನ್ನು ಬೋಧಿಸುತ್ತವೆ. ಆದರೆ

ಇಂದಿನ ನಮಗೆ ಇವುಗಳ ಅರ್ಥವನ್ನು ತಿಳಿಯುವುದಕ್ಕೆ ಮತ್ತೊಂದರ ಸಹಾಯವು ಅತ್ಯಂತ ಅವಶ್ಯಕವಾಗಿ ಬೇಕಾಗುವ ಪರಿಸ್ಥಿತಿಯು ಬಂದೊದಗಿದೆ.

ಶ್ರೀ ಸಾಯಣಾಚಾರ್ಯರು ತಾವು ವೇದಾರ್ಥಗಳನ್ನು ಬರೆಯುವಾಗ ಈ ಗ್ರಂಥಗಳನ್ನೆಲ್ಲಾ ನೋಡಿದ್ದರಲ್ಲದೇ ತಮಗಿಂತ ಪ್ರಾಚೀನವಾದ ವೇದಾರ್ಥ ಬಿಡಿಸುವುದಕ್ಕೆ ಸಹಾಯವಾಗುವ ಎಲ್ಲಾ ಗ್ರಂಥಗಳನ್ನೂ ಚೆನ್ನಾಗಿ ಓದಿ ಅರಗಿಸಿಕೊಂಡು, ವೇದಭಾಷ್ಯವನ್ನು ಬರೆದಿದ್ದಾರೆ. ಪ್ರಾಚೀನರು ವೇದಾರ್ಥಗಳನ್ನು ಬರೆಯುವಾಗ ಅನೇಕ ಸಂಪ್ರದಾಯಗಳೇರ್ಪಟ್ಟವೆ ಅವರೆಲ್ಲರೂ ಒಂದೊಂದು ದೃಷ್ಟಿಕೋನಗಳಿಂದ ವೇದಗಳಗೆ ಅರ್ಥವಿವರಣೆ ಮಾಡಿದ್ದಾರೆ. ಅವುಗಳಲ್ಲಿ ಯಾಸ್ಕ, ನೈದನ, ಐತಿಹಾಸಿಕಬ್ರಹ್ಮವಾದಿ ಯಾಜ್ಞಿಕ, ಪಾರಿವ್ರಾಜಕ, ಸ್ವರಮುಕ್ತಿವಾದಗಳೆಂದು ಆರೇಳು ಸಂಪ್ರದಾಯಗಳು ಏರ್ಪಟ್ಟಿದ್ದುವು. ಹೀಗೆ ಸಾಯಣರಿಗಿಂತ ಪ್ರಾಚೀನರು, ಅನೇಕರು ಅನೇಕ ವಿಧವಾಗಿ ವೇದಾರ್ಥ ಪ್ರಕಾಶನೆಗೆ ಪ್ರಯತ್ನಪಟ್ಟಿದ್ದರೂ, ಅವೆಲ್ಲವೂ ಅಸಂಪೂರ್ಣವಾಗಿವೆ. ಅವರೆಲ್ಲರೂ ವೇದಗಳ ಕೆಲಕೆಲವು ಭಾಗಗಳಿಗೆ ಮಾತ್ರ ಅರ್ಥ ಬರೆದಿದ್ದಾರೆ. ಆದರೆ ಸಾಯಣರು ಮಾತ್ರ ನಾಲ್ಕು ವೇದಗಳ ಐದು ಶಾಖೆಗಳಿಗೂ ಸಂಪೂರ್ಣವಾಗಿ ಭಾಷ್ಯ ಬರೆದಿದ್ದಾರೆ. ಇಂದಿನ ನಮಗೆ ಯಾವ ವೇದದ ಯಾವ ಭಾಗವು ಬೇಕಿದ್ದರೂ ಅದಕ್ಕೆ ಅರ್ಥವನ್ನು ತಿಳಿಯುವುದಕ್ಕೆ ಸಾಯಣರ ಭಾಷ್ಯವೇ ಶ್ರೇಷ್ಠವಾದ ಕೈದೀವಿಗೆಯಾಗಿದೆ.

ಹೀಗೆ ಸಾಕಲ್ಯವಾದ ವೇದಗಳಿಗೆ ಅರ್ಥವನ್ನು ಬರೆಯುವಾಗ ಸಾಯಣರು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ತಾಪತ್ರಯಗಳ ಪರಿಹಾರಕ್ಕೆ ಸಂಬಂಧಪಟ್ಟ ಮಂತ್ರಗಳಿಗೆ ಆಯಾ ಸಂದರ್ಭಗಳಿಗೆ, ವಿಷಯಗಳಿಗೆ ಹೊಂದಿಕೆಯಾಗುವಂತಹ ಸಮಯೋಚಿತವಾದ ಭಾಷ್ಯವನ್ನು ಬರೆದಿದ್ದಾರೆ. ವೇದಭಾಷೆಯನ್ನು ಸಮಾಧಿಭಾಷೆ, ಲೌಕಿಕಭಾಷೆ, ಪರಕೀಯಭಾಷೆಗಳೆಂದು ಆಯಾ ಪದಗಳಿಗೆ ಸಮಯೋಚಿತವಾದ ಅರ್ಥಗಳನ್ನು ವಿವರಿಸಿದ್ದಾರೆ. ಇಂದ್ರಶಬ್ದಕ್ಕೆ ಈಶ್ವರ, ದೇವ, ಜ್ಞಾನ, ಮತ್ತು ವಿದ್ಯುತ್ ಎಂಬ ಅರ್ಥಗಳನ್ನೂ ವೃತ್ರ ಶಬ್ದಕ್ಕೆ ಅಸುರ, ಅಸುರರಾಜ, ಅಜ್ಞಾನ,

ಮತ್ತು ಮೋಡಗಳೆಂಬ ಅರ್ಥಗಳನ್ನೂ ಬರೆದಿದ್ದಾರೆ. ಇದೇ ರೀತಿಯಾದ ವೇದದೊಳಗಿನ ಇನ್ನೂ ಅನೇಕ ಶಬ್ದಗಳಿಗೆ ಆಯಾ ಸಂದರ್ಭಕ್ಕೆ ಹೊಂದಿಕೆಯಾಗುವಂತೆ ಅರ್ಥ ಬರೆದಿದ್ದಾರೆ ಆದ್ದರಿಂದಲೇ ಇಂದು ವೇದಮಂತ್ರಗಳಿಗೆ ಅರ್ಥ ಬಿಡಿಸುವವರೂ ವೇದದ ಬಗ್ಗೆ ಸಂಶೋಧನೆ ನಡೆಸುವವರೂ, ವಿಮರ್ಶೆಮಾಡುವವರೂ ದೇಶೀಯರೇ ಆಗಲೀ, ವಿದೇಶೀಯರೇ ಆಗಲೀ ಅವರೆಲ್ಲರೂ ಸಾಯಣರ ಭಾಷ್ಯದ ಸಹಾಯದಿಂದಲೇ ಮಾಡಿದ್ದಾರೆ, ಮಾಡುತ್ತಿದ್ದಾರೆ, ಮಾಡಬೇಕಾಗುತ್ತದೆ.

ಹೀಗಿದ್ದರೂ ಸಹ ಇಂದಿನ ವಿಮರ್ಶಕರಾದ ದೇಶ ವಿದೇಶೀಯರನೇಕರು ವೇದಗಳ ಬಗ್ಗೆ ಸಂಶೋಧನೆ ನಡೆಸುವಾಗ, ಸಾಯಣರ ವಿಷಯವಾಗಿ ಕುತ್ಸಿತ ಮಾತನಾಡುವದೂ, ಬರೆಯುವುದೂ ತುಂಬಾ ಶೋಚನೀಯವಾಗಿದೆ. ಕೇವಲ ಸಾಮಾನ್ಯವಾದ ಸಂಸ್ಕೃತ, ಇಂಗ್ಲೀಷು, ಫ್ರೆಂಚ್ ಜರ್ಮನ್ ಭಾಷೆಗಳ ಪರಿಚಯದಿಂದಲೇ ವೇದಾರ್ಥಗಳನ್ನು ನಿರ್ಣಯಿಸುವುದು ವ್ಯರ್ಥವಾಗದೆ ಇರದು. ಇವುಗಳ ಜೊತೆಗೆ ಭಾರತದ ಸಂಸ್ಕೃತಿಯ ಕಲ್ಪನೆಯೂ ಪರಂಪರಾಗತವಾಗಿ ಬಂದ ವೇದಾರ್ಥ ನಿರ್ಣಯಮಾಡುವ ಕ್ರಮದ ಪರಿಚಯವೂ ಇದ್ದು, ಸಾಯಣರ ಭಾಷ್ಯದ ಸಹಾಯವನ್ನು ಪಡೆದು ವೇದಾರ್ಥವನ್ನು ನಿರ್ಣಯಿಸುವುದಕ್ಕೆ ಯತ್ನಿಸಿದರೆ ಪ್ರಯೋಜನವಾದೀತು.

ವೇದಾರ್ಥವನ್ನು ತಿಳಿಯಲು ಸಾಯಣರ ಭಾಷ್ಯವನ್ನು ನೋಡುವವರು ಕೆಳಗಿನ ಸಂಗತಿಗಳನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಂಡಿರಬೇಕಾಗುತ್ತದೆ. ೧) ಸಾಯಣರು ವೇದಭಾಷ್ಯ ಬರೆಯುವಾಗ ಭಾರತೀಯ ಸಂಸ್ಕೃತಿ, ಭಾರತೀಯವಾದ ಪ್ರಾಚೀನ ಮರ್ಯಾದೆ, ವೇದಾರ್ಥ ನಿರ್ಣಯ ಮಾಡುವ ಕ್ರಮವನ್ನನುಸರಿಸಿ ಭಾಷ್ಯ ಬರೆದಿದ್ದಾರೆ. ೨) ಯಾಸ್ಕ, ಸ್ಕಂದಸ್ವಾಮಿ, ವೆಂಕಟಮಾಧವ, ಉದ್ಗೀತ, ಕಾತ್ಸ ಮೊದಲಾದವರು ಬರೆದ ಪ್ರಾಚೀನ ವೇದಭಾಷ್ಯಗಳನ್ನೂ ಅವಲೋಕನೆಮಾಡಿ ಇವರು ಭಾಷ್ಯವನ್ನು ಬರೆದಿದ್ದಾರೆ. ೩) ಇವರ ಭಾಷ್ಯವು ವೈದಿಕ ಸಾಹಿತ್ಯ, ಪ್ರಾಚೀನ ಇತಿಹಾಸ ಭಾರತೀಯರ ಆಚಾರ, ವಿಚಾರಗಳನ್ನು ಅನುಸರಿಸಿ ಬರೆಯಲ್ಪಟ್ಟಿವೆ. ೪) ಇಂದು ಪ್ರಪಂಚದಲ್ಲಿ ವೇದಗಳ ಬಗ್ಗೆ ಬರೆಯುವವರೆಲ್ಲರೂ ಸಾಯಣರ ಭಾಷ್ಯದ ಸಹಾಯದಿಂದಲೇ ತಮ್ಮ ತಮ್ಮ ವಿಚಾರಸರಣಿಗಳನ್ನು ಹಣಿ

ಯುತ್ತಿದ್ದಾರೆ. ೫) ಸನಾತನ ಹಿಂದೂಧರ್ಮಶಾಸ್ತ್ರಕಾರರೆಲ್ಲರೂ ಸಾಮಾನ್ಯವಾಗಿ ಇವರ ಭಾಷ್ಯವು ಪ್ರಾಮಾಣಿಕವೆಂದು ಒಪ್ಪಿಕೊಂಡಿದ್ದಾರೆ. ೬) ಇಂದು ವೇದಾರ್ಥಗಳನ್ನು ತಿಳಿಯಬೇಕಿದ್ದರೆ ಇವರ ಭಾಷ್ಯವನ್ನು ಬಿಟ್ಟರೆ ಪ್ರಾಚೀನವಾದ ಬೇರೆಯ ಎಲ್ಲಾ ಭಾಷ್ಯಗಳೂ ಅಸಂಪೂರ್ಣವಾಗಿವೆ. ಆದ್ದರಿಂದ ವೇದಾರ್ಥ ತಿಳಿಯಲು ಸಾಯಣರಭಾಷ್ಯವೇ ಏಕಮಾತ್ರ ಸಹಾಯಕ ಗ್ರಂಥವಾಗಿದೆ. ಈ ಎಲ್ಲಾ ದೃಷ್ಟಿಗಳನ್ನೂ ಇಟ್ಟುಕೊಂಡು ವೇದಾರ್ಥವನ್ನು ತಿಳಿಯಲು ಪ್ರಯತ್ನಪಡುವವರು ಸಾಯಣರ ಭಾಷ್ಯದ ಸಹಾಯವನ್ನು ಪಡೆದರೆ, ಪ್ರಯತ್ನವು ಸಫಲವಾದೀತು.

ಹೀಗೆ ವೇದಾರ್ಥಗಳನ್ನು ತಿಳಿಸಲೂ, ತಿಳಿಯಲೂ ಪ್ರಾಚೀನ ಕಾಲದಿಂದಲೂ ಈವರೆಗೆ, ಇಂದೂ ಸಹ ಅನೇಕರು ಅನೇಕ ವಿಧವಾದ ಪ್ರಯತ್ನಗಳನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ದ್ವೈತ ಮತಪ್ರತಿಷ್ಠಾಪನಾಚಾರ್ಯರಾದ ಶ್ರೀ ಮಧ್ವಾಚಾರ್ಯರು ಋಗ್ವೇದದ ಸಂಹಿತೆಯ ಕೆಲವು ಭಾಗಕ್ಕೆ ಭಾಷ್ಯವನ್ನು ಬರೆದಿದ್ದಾರೆ. ಮತ್ತು ದಶೋಪನಿಷತ್ತುಗಳಿಗೆ ಭಾಷ್ಯಬರೆದಿದ್ದಾರೆ. ಇವರಂತೆಯೇ ಶ್ರೀ ಶಂಕರಾಚಾರ್ಯ ಶ್ರೀ ರಾಮಾನುಜಾಚಾರ್ಯರೂ ಸಹ ಉಪನಿಷತ್ತುಗಳಿಗೂ ಮತ್ತು ಅಲ್ಲಲ್ಲಿಯೇ ಕೆಲವು ಸಂಹಿತಾ ಬ್ರಾಹ್ಮಣಗಳ ಮಂತ್ರಗಳಿಗೂ ಭಾಷ್ಯ ಬರೆದಿದ್ದಾರೆ. ಇದೀಗ ದಿವಂಗತ ಕಾವ್ಯಕಂಠ ಶ್ರೀ ವಾಸಿಷ್ಠ ಗಣಪತೀಶಾಸ್ತ್ರಿಗಳ ಶಿಷ್ಯರಾದ ಶ್ರೀ ಕಾಪಾಲಿಗಳು ಋಗ್ವೇದಕ್ಕೆ ಸಂಸ್ಕೃತದಲ್ಲಿ ಒಂದು ನೂತನವಾದ ಭಾಷ್ಯ ಬರೆಯುತ್ತಿದ್ದಾರೆ. ಈಗಾಗಲೇ ಅದರ ಎರಡು ಮಂಡಲಗಳಷ್ಟು ಉತ್ತರಕನ್ನಡ ಜಿಲ್ಲೆಯ ಶಿರ್ಶಿಯಲ್ಲಿ ಮುದ್ರಣವೂ ಆಗಿದೆ. ಹೀಗೆ ವೇದಗಳ ಅರ್ಥವನ್ನು ಬಿಡಿಸಲು ಪ್ರಯತ್ನಿಸಿದವರ ಹೆಸರುಗಳನ್ನು ಕೆಳಗಿನಂತೆ ಸಾಮಾನ್ಯವಾಗಿ ಹೆಸರಿಸಬಹುದು.

೧) ಜಾತಮನ್ಯವ ೨) ಕೌತ್ಸ ೩) ಯಾಸ್ಕ
೪) ಉದ್ಗೀಥ ೫) ಸ್ಕಂದಸ್ವಾಮಿ ೬) ಭರತಸ್ವಾಮಿ
೭) ರಾವಣ ೮) ಭಟ್ಟಭಾಸ್ಕರ ೯) ವೆಂಕಟಮಾಧವ
೧೦) ಉವ್ವಟ ೧೧) ಮಹೀಧರ ೧೨) ಸತ್ಯವ್ರತಸಾಮಶ್ರಮೀ
೧೩) ಶ್ರೀ ಶಂಕರಾಚಾರ್ಯರು ೧೪) ಶ್ರೀ ರಾಮಾನುಜಾಚಾರ್ಯರು

೧೫) ಶ್ರೀ ಮಧ್ವಾಚಾರ್ಯರು ೧೬) ಸಾಯಣರು ೧೭) ಕಪಾಲಿ
೧೮) ದಯಾನಂದಸರಸ್ವತಿ ೧೯) ತಿಲಕ ೨೦) ಅವಿನಾಶಚಂದ್ರದಾಸ್
೨೧) ದಾರಾಕಿಶೋರ್ ೨೨) ರಾಥ್ ೨೩) ಗ್ರಿಫಿಥ್ ೨೪) ವೈಕ್ಡನಲ್
೨೫) ಮೋಕ್ಷಮುಲ್ಲರ್ ೨೬) ಲುಡ್ವಿಗ್
೨೭) ಲಾಂಗಲೋ ೨೮) ಗ್ರಾಸ್‌ಮನ್‌ರೋಟ್

ಮೊದಲಾದವರು ವೇದಾರ್ಥಗಳನ್ನು ತಿಳಿಯುವುದಕ್ಕೆ ಪ್ರಯತ್ನಪಟ್ಟಿದ್ದಾರೆ. ಇವರಲ್ಲಿ ಮೊದಲಿನ ೨೧ ಜನರು ಭಾರತೀಯರು. ಉಳಿದವರು ಪಾಶ್ಚಿಮಾತ್ಯರು. ಭಾರತೀಯರು ಬರೆದವುಗಳಲ್ಲಿ ಮೊದಲಿನ ೧೭ ಸಂಸ್ಕೃತದಲ್ಲಿಯೂ ದಯಾನಂದರು ಹಿಂದೀ ಭಾಷೆಯಲ್ಲಿಯೂ, ಉಳಿದವು ಇಂಗ್ಲೀಷಿನಲ್ಲಿಯೂ ಇವೆ. ಪಾಶ್ಚಿಮಾತ್ಯರದೆಲ್ಲವೂ ಇಂಗ್ಲೀಷ್ ಭಾಷೆಯಲ್ಲೇ ಬರೆಯಲ್ಪಟ್ಟಿವೆ.

ಹೀಗೆ ಪ್ರಾಚೀನ ಕಾಲದಿಂದ ಇಂದಿನವರೆಗೂ ವೇದಾರ್ಥವನ್ನು ಪ್ರಕಾಶಪಡಿಸುವುದಕ್ಕೆ ಆಗಾಗ ಕೆಲವು ಪ್ರಯತ್ನಗಳು ನಡೆಯುತ್ತಲೇ ಇದ್ದರೂ, ವೇದಾರ್ಥವು ಮಾತ್ರ ಗೂಢಾಪ್ಲೂಥತರವಾಗಿಯೇ ಉಳಿದಿದೆ. ಯಾವ ಭಾಷ್ಯ, ವ್ಯಾಖ್ಯಾನ, ಟೀಕೆ ಟಿಪ್ಪಣಿಗಳನ್ನು ನೋಡಿದರೂ ಕೆಲವು ಕಡೆಗಳಲ್ಲಿ ಸಂದೇಹವು ಹಾಗೆಯೇ ಉಳಿಯುತ್ತದೆ. ಸುಸಂಗತವಾದ ಸಮನ್ವಯವಾದ ಏಕಾರ್ಥವು ದೊರೆಯುವುದಿಲ್ಲ, ಹೊರಡುವುದಿಲ್ಲ. ಇದು ನಮ್ಮ ಅಲ್ಪಜ್ಞತೆ, ಅಸಮರ್ಥತೆಗಳಿಗೆ ನಿದರ್ಶನವಾಗುವುದಲ್ಲದೆ ಪರಮಾತ್ಮನ ನಿತ್ಯಜ್ಞಾನಸ್ವರೂಪವಾದ ವೇದದ ಅಪಕ್ಷತೆ ಎಂದು ಮಾತ್ರ ಹೇಳಲು ಬರುವಂತಿಲ್ಲ. ವೇದಾರ್ಥಗಳನ್ನು ಸರಿಯಾಗಿ ಸುಬೋಧವಾಗಿ ಹೇಗೆ ತಿಳಿಯಬೇಕೋ? ಯಾರು ತಿಳಿಸಬೇಕೋ? ಅಂತಹ ಗುರುವಿನ ಅವತಾರವೆಂದಾಗುವುದೋ ?

"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥"



# ೧೦. ನಾಲ್ಕು ಪರಿಶಿಷ್ಟಗಳು.

## ೧. ಉಪನಿಷನ್ನಾಮ ಪರಿಶಿಷ್ಟ.

ಅಕ್ಷಮಾಲಾ
ಅಕ್ಷಿ
ಅಥರ್ವಶಿರ
ಅಥರ್ವಶೀರ್ಷ
ಅದ್ವಯತಾರಕ
ಅದ್ವೈತ
ಅದ್ವೈತಭಾವ
ಅಧ್ಯಾತ್ಮ
ಅನುಭವಸಾರ
ಅನ್ನಪೂರ್ಣಾ
ಅಮನಸ್ಕ
ಅಮೃತನಾದ
ಅಮೃತಬಿಂದು
(ಬ್ರಹ್ಮಬಿಂದು)
ಅರುಣ
ಅಲ್ಲ
ಅವಧೂತಾ(ಗದ್ಯ)
,, (ಪದ್ಯ)
ಅವ್ಯಕ್ತ
ಆಚಮನ
ಆತ್ಮಾ (ಪದ್ಯ)
,, (ಗದ್ಯ)
ಆತ್ಮಪೂಜಾ
ಆತ್ಮಪ್ರಬೋಧ

ಆಥರ್ವಣದ್ವಿತೀಯ
ಆಯುರ್ವೇದ
ಆರುಣಿಕ
ಆರುಣೇಯ
ಆಶ್ರಮ
ಆರ್ಷೇಯ
ಇತಿಹಾಸ
ಈಶಾವಾಸ್ಯ
ಊರ್ಧ್ವಪುಂಡ್ರ
ಏಕಾಕ್ಷರ
ಐತರೇಯ(ಕಾಂಡಾತ್ಮಕ)
,, (ಅಧ್ಯಾಯಾತ್ಮಕ)
(ಅಧ್ಯಾಯಾತ್ಮಕ)
ಕಠ
ಕಠರುದ್ರ
(ಕಾಂಡ)-
ಕಠಶ್ರುತಿ
ಕಲಿಸಂತರಣ
ಹರಿನಾಮ
ಕಾತ್ಯಾಯನ
ಕಾಮರಾಜಕೀಲಿ-
-ತೋದ್ಧರಣ
ಕಾಲಾಗ್ನಿರುದ್ರ
ಕಾಲಿಕಾ

ಕಾಲಿಮೇಧಾದೀಕ್ಷಿತ
ಕುಂಠಿತ.
ಕೃಷ್ಣ
ಕೇನ
ಕೈವಲ್ಯ
ಕೌಲಾ
ಕೌಷೀತಕೀ
ಕ್ಷುರಿತ
ಗಣಪತ್ಯಥರ್ವಶೀರ್ಷ
ಗಣೇಶಪೂರ್ವತಾಪಿನೀ
(ವರದಪೂರ್ವತಾಪಿನೀ)
ಗಣೇಶೋತ್ತರೂಪಿನೀ
(ವರದೋತ್ತರತಾಪಿನೀ)
ಗರ್ಭ
ಗಾಂಧರ್ವ
ಗಾಯತ್ರೀ
ಗಾಯತ್ರೀರಹಸ್ಯ
ಗಾರುಡ
ಗುಹ್ಯಕಾಲಿನೀ
ಗುಹ್ಯಷೋಢನ್ಯಾಸ
ಗೋಪಾಲಪೂರ್ವ
-ತಾಪಿನೀ
ಗೋಪಾಲೋತ್ತರತಾಪಿನೀ

ಗೋಪೀಚಂದನ
ಚತುರ್ವೇದ
ಚಾಕ್ಷುಷ
(ಚಾಕ್ಷು)
(ಚಕ್ಷುರೋಗ)
(ನೇತ್ರರೋಗ)
ಚಿತ್ತಿ
ಛಾಗತೀಯ
ಛಾಂದೋಗ್ಯ
ಜಾಬಾಲ
ಜಾಬಾಲದರ್ಶನ
ತಾರಾ
ತಾರಾಸಾರ
ತುರೀಯ
ತುರಿಯಾತೀತ
ತುಲಸೀ
ತೇಜೋಬಿಂದು
ತೈತ್ತಿರೀಯ
ತ್ರಿಪಾದ್ವಿಭೂತಿಮಹಾ
-ನಾರಾಯಣ
ತ್ರಿಪುರ
ತ್ರಿಪುರಾತಾಪಿನೀ
ತ್ರಿಪುರಾಮಹಾ
ತ್ರಿಶಿಖಿಬ್ರಾಹ್ಮಣ
ತ್ರಿಸುಪರ್ಣ
ದಕ್ಷಿಣಾಮೂರ್ತಿ

ದತ್ತ
ದತ್ತಾತ್ರೇಯ
ದೂರ್ವಾಸ
ದೇವೀ
ದ್ವಯ
ಧ್ಯಾನಬಿಂದು
ನಾದಬಿಂದು
ನಾರದ
ನಾರದಪರಿವ್ರಾಜಕ
ನಾರಾಯಣ
ನಾರಾಯಣಪೂರ್ವ-
-ತಾಪಿನೀ
ನಾರಾಯಣೋತ್ತರ-
-ತಾಪಿನೀ
ನಿರಾಲಂಬ
ನಿರುಕ್ತ
ನಿರ್ವಾಣ
ನೀಲರುದ್ರ
ನೃಸಿಂಹಪೂರ್ವತಾಪಿನೀ
ನೃಸಿಂಹಷಟ್ಚಕ್ರ
ನೃಸಿಂಹೋತ್ತರತಾಪಿನೀ
ಪರಬ್ರಹ್ಮ
ಪರಮಹಂಸ
ಪರಮಹಂಸ-
-ಪರಿವ್ರಾಜಕ
ಪಾಂಚರಾತ್ರಿಕ

ಪಾರಾಯಣ
ಪಾಶುಪತಬ್ರಹ್ಮ
ಪಿಂಡ
ಪೀತಾಂಬರ
ಪುರುಷಸೂಕ್ತ
ಪೈಂಗಲ
ಪ್ರಣವ (ಪದ್ಯ)
,, (ಗದ್ಯ)
ಪ್ರಶ್ನ
ಪ್ರಾಣಾಗ್ನಿಹೋತ್ರ
ಬಟುಕ
ಬಹ್ವೃಚ
ಬಾಷ್ಕಲಮಂತ್ರ
ಬಿಲ್ವ (ಪದ್ಯ)
,, (ಗದ್ಯ)
ಬೃಹಜ್ಜಾಬಾಲ
ಬೃಹದಾರಣ್ಯಕ
ಬ್ರಹ್ಮ
ಬ್ರಹ್ಮವಿದ್ಯಾ
ಭಗವದ್ಗೀತಾ
ಭವಸಂತರಣ
ಭಸ್ಮಜಾಬಾಲ
ಭಾವನಾ
(ಕೌಪೀನ)
ಭಿಕ್ಷುಕ
ಮಠಾಮ್ನಾಯ

| | | |
|---|---|---|
| ಮಂಡಲಬ್ರಾಹ್ಮಣ | ಯೋಗಶಿಖಾ | ಶಿವಸಂಕಲ್ಪ |
| ಮಾಂತ್ರಿಕ | ರಾಜಶ್ಯಾಮಲಾ | ಶಿವಸಂಕಲ್ಪ |
| (ಚೂಲಿಕಾ) | —ರಹಸ್ಯ | ಶುಕರಹಸ್ಯ |
| ಮಲ್ಲೈ | ರಾಧಾ | ಶೌನಕಾ |
| ಮಹಾನಾರಾಯಣ | ರಾಧಿಕಾ | ಶ್ಯಾಮ |
| (ಬೃಹನ್ನಾರಾಯಣ) | ರಾಮಪೂರ್ವತಾಪಿನೀ | ಶ್ರೀಕೃಷ್ಣ ಪುರುಷೋ- |
| ಉತ್ತರನಾರಾಯಣ | ರಾಮರಹಸ್ಯ | -ತ್ತಮ (ಸಿದ್ಧಾಂತ) |
| ಮಹಾ | ರಾಮೋತ್ತರತಾಪಿನೀ | ಶ್ರೀಚಕ್ರ |
| ಮಹಾವಾಕ್ಯ | ರುದ್ರ | ಶ್ರೀವಿದ್ಯಾತಾರಕ |
| ಮಾಂಡೂಕ್ಯ | ರುದ್ರಹೃದಯ | ಶ್ರೀಸೂಕ್ತ |
| ಮಾಂಡೂಕ್ಯೋಪ- | ರುದ್ರಾಕ್ಷಜಾಬಾಲ | ಶ್ವೇತಾಶ್ವತರ |
| -ನಿಷತ್ಕಾರಿಕಾ | ಲಕ್ಷ್ಮೀ | ಷೋಢ |
| ಮುಕ್ತಿಕಾ | ಲಾಂಗೂಲ | ಸಂಕರ್ಷಣ |
| ಮುಂಡಕ | ಲಿಂಗ | ಸದಾನಂದ |
| ಮುದ್ಗಲ | ವಜ್ರಪಂಜರ | ಸಂಧ್ಯಾ |
| ಮೃತ್ಯುಲಾಂಗೂಲ | ವಜ್ರಸೂಚಿಕಾ | ಸಂನ್ಯಾಸ(ಪದ್ಯ) |
| ಮೈತ್ರಾಯಣೀ | ವನದುರ್ಗ | ,, (ಗದ್ಯ) |
| ಮೈತ್ರೇಯೀ | ವರಾಹ | ಸರಸ್ವತೀರಹಸ್ಯ |
| ಯಜ್ಞೋಪವೀತ | ವಾಸುದೇವ | ಸರ್ವಸಾರ |
| ಯಾಜ್ಞವಲ್ಕ್ಯ | ವಿಶ್ರಾಮ | ಸಹವೈ |
| ಯೋಗ | ವಿಷ್ಣುಹೃದಯ | ಸಂಹಿತಾ |
| ಯೋಗಕುಂಡಲಿ | ಶರಭ | ಸಾಮರಹಸ್ಯ |
| ಯೋಗಚೂಡಾಮಣಿ | ಶಾಟ್ಯಾಯನೀಯ | ಸಾವಿತ್ರೀ |
| ಯೋಗತತ್ವ | ಶಾಂಡಿಲ್ಯ | ಸಿದ್ಧಾಂತವಿಠಲ |
| ಯೋಗತತ್ವ | ಶಾರೀರಕ | ಸಿದ್ಧಾಂತಶಿಖಾ |
| ಯೋಗರಾಜ | ಶಿವ | ಸಿದ್ಧಾಂತಸಾರ |

| | | |
|---|---|---|
| ಸೀತಾ | ಸೂರ್ಯತಾಪಿನೀ | ಹಯಗ್ರೀವ |
| ಸುದರ್ಶನ | ಸೌಭಾಗ್ಯಲಕ್ಷ್ಮೀ | ಹಂಸ |
| ಸುಭಾವ | ಸ್ಕಂದ | ಹಂಸಷೋಢ |
| ಸುಮುಖಿ | ಸ್ವಸಂವೇದ್ಯ | ಹೇರಂಭೋಪನಿಷತ್ |
| ಸೂರ್ಯ | | |

## ೨. ಋಷಿನಾಮ ಪರಿಶಿಷ್ಟ

| | | |
|---|---|---|
| ಅಕೃಷ್ಟಃ | ಅಭೀವರ್ತಃ | ಇಧ್ಮವಾಹಃ |
| ಅಗಸ್ತ್ಯಃ | ಅಮಹೀಯುಃ | ಇರಿಂಬಿಡಿಃ |
| ಅಗ್ನಿಃ (ಚಾಕ್ಷುಷ) | ಅಯಾಪ್ಯಃ | ಇಷುಃ |
| ಅಗ್ನಿಃ (ಪಾವಕ) | ಅರ್ಚನ | ಇಂದ್ರಃ |
| ಅಗ್ನಿಃ (ತಾಪಸ) | ಅರ್ಚನಾನಾ | ಇಂದ್ರಃ(ವೈಕುಂಠ |
| ಅಗ್ನಿಯುತಃ | ಅಬುರ್ಧಃ | ಇಂದ್ರಪ್ರಮಿತಿಃ |
| ಅಗಸ್ತ್ಯಸ್ವಸಾ | ಅರಿಷ್ಟನೇಮಿಃ | ಇಂದ್ರಮಾತರಃ |
| ಅಘಮರ್ಷಣಃ | ಅರುಣಃ | ಇಂದ್ರಸ್ವಸಾ |
| ಅಜಾಃ | ಅವತ್ಸಃ | ಇಂದ್ರಾಣೀ |
| ಅಜಾಮಿಳ್ಹಃ | ಅವತ್ಸರಃ | ಇಂಟಃ |
| ಅಣಕಃ | ಅವತ್ಸಾರಃ | ಉಖಾ |
| ಅತಿಥಿಃ | ಅಶ್ವಸೂಕ್ತಿಃ | ಉಖ್ಯಾ |
| ಅತಿಲಃ | ಅಶ್ವಜಃ | ಉದಮೇಘಃ |
| ಅತ್ರಿಃ | ಅಷ್ಟಕಃ | ಉಚಥ್ಯಃ |
| ಅತ್ರಿಃ (ಸಾಂಖ್ಯಃ) | ಅಷ್ಟಾದಂಷ್ಟ್ರಃ | ಉಪಮನ್ಯುಃ |
| ಅಥರ್ವಾಃ | ಅಸಿತಃ | ಉಪಸ್ತುತಃ |
| ಅಪಲಾ | ಅಂಗಃ | ಉರುಚಕ್ರಿಃ |
| ಅಪ್ರತಿರಥಃ | ಅಂಗೀರಸಃ | ಉರುಕ್ಷಯಃ |
| ಅಭಿತಸಾ | ಅಂಧೀಗುಃ | ಉರ್ವಶೀ |

ಉಶನಾ
ಊರ್ಧ್ವಗಾವ
ಊರ್ಧ್ವಸದ್ಮ
ಋಜಶ್ವ
ಋಜುಶ್ವಾ
ಋಣ
ಋಣಂಚಯ
ಋಷಭ
ಋಷಭ
ಋಷ್ಯಶೃಂಗ
ಐತಶ
ಐಕಪಾವರುತ್
ಐಲೂಷ
ಓಧನ
ಕಣ್ವ
ಕಕ್ಷೀವಾ
ಕತ
ಕಲಿ
ಕವಿ
ಕಶ್ಯಪ
ಕಕ್ಷೀವಂತ
ಕರ್ಣಶ್ರುತ್
ಕವಷ
ಕರಿಕ್ರ
ಕತ್ರೃ
ಕಾನ್ಯೋಶ್ಕೀಲ
ಕುತ್ಸ
ಕುಮಾರ
ಕುರ
ಕುರುಸುತಿ
ಕುಡ್ಮಲಬರ್ಹಿಷ
ಕುಶಿಕ
ಕುಸೀದೀ
ಕೂರ್ಮ
ಕೃಪಂಜಯ
ಕೃತ್ಸ್ನ
ಕೃಷ್ಣ (ಆಂಗೀರಸ)
ಕ್ಷೇತು
ಕೌಂಡಿಣ್ಯ
ಕಂಪ್ರೋತ
ಗಯ
ಗಯ
ಗರ್ಗ
ಗವಿಷ್ಠಿರ
ಗಾತು
ಗಾಧೀ
ಗಾಧೀ
ಗೃತ್ಸ್ನಮದ
ಗೋತಮ
ಗೋಪವನ
ಗೊಧಾ
ಗೋಷೂಕ್ತಿ
ಗೌರವೀತಿ
ಘೋಷಾ
ಚಕ್ಷು
ಚಷು
ಚಿತ್ರಮಹಾ
ಚ್ಯವನ
ಜಮದಗ್ನಿ
ಜಯ
ಜರತ್ಕರ್ಣ
ಜರತ್ಕಾರು
ಜರಿತ
ಜರಿತೃ
ಜಾತಂಕರ್ಣ್ಯ
ಜುಹೂ
ಜ್ಯೋತಿರ್ವೃಷ
ಜ್ಯೋತಿಪ್ರಪ
ಜ್ಯೋತಿವಾಶ
ತನ್ವ
ತರುಕ್ಷ
ತಿತ್ತಿರಿ
ತಿರಶ್ಚಿ
ತೃಚಮುಲ
ತೃಣಬಂಧು
ತೃಣಂಜಯ
ತ್ರಿಧಾವತು
ತ್ರಿವರ್ಷ
ತ್ರಸದಸ್ಯು
ತ್ರಸದಸ್ಯು
ತ್ರ್ಯರುಣ

ತ್ರಸನಮೂರ್ಧಾ
ತ್ರಶೋಕ
ತ್ರಿತಾ
ತ್ರಿತ
ತ್ರಿಶಿರ
ತ್ರೈವೃಷ್ಣ
ತ್ವಷ್ಟ
ದಮ
ದ್ಯುಮನ
ದಶಾಯು
ದಿವ್ಯ
ದೀರ್ಘತಮ
ದುರ್ಮಿತ್ರ
ದೇವಶ್ರವ
ದೇವವಾತ
ದೇವಾತಿಥಿ
ದೇವಾ
ದೇವಾಪಿ
ದೇವಮುನಿ
ದೇವಗಂಧರ್ವ
ದೌರ
ದೃಳ್ಹಚ್ಯುಕ
ದ್ವಿತ
ದ್ಯುಮ್ನ
ದ್ಯುಗ್ನೀಕ
ದ್ರೋಣ (ಶಾಂಕ)

ಧನುಷ
ಧರ್ಮ
ಧಾತೃ
ಧನಂಜಯ
ಧೃವ
ನಭಃಪ್ರಭೇದನ
ನಹುಷ
ನಾರಾಯಣ
ನಾಭಾನೇದಿಷ್ಟ
ನಾರದ (ಕಣ್ವ)
ನಾರದ (ಕಶ್ಯಪ)
ನಾಭಾಕ
ನಿಧ್ರುವಿ
ನೈಮೇಧ
ನೇಮ
ನೋಧ
ನೋಧ
ಪರಾಶರ
ಪವಿತ್ರ
ಪರ್ವತ
ಪಣಯೋಸುರ
ಪತಂಗ
ಪಾಯು
ಪುರುಚ್ಛೇಪ
ಪುರೂಮೀಳ್ಹಾ
ಪುನರ್ವತ್ಸ

ಪುಷ್ಟಿಗು
ಪುರೋರುಹನ್ಮ
ಪುರುಮೇಧ
ಪುರೂರವ
ಪುರುಕುತ್ಸ
ಪೂರಣ
ಪೂರು
ಪೃಥು
ಪ್ರಜಾವಾನ್
ಪ್ರಸವಿ
ಪ್ರತರ್ದನ
ಪ್ರಜಾಪತಿ
ಪ್ರಯೋಗ
ಪ್ರಷದ್ರ
ಪ್ರಗಾಥ
ಪೌರ
ಪ್ರತಿಪ್ರಭ
ಪ್ರತಿಭಾನು
ಪ್ರತಿರಥ
ಪ್ರತಿಕ್ಷತ್ರ
ಪ್ರಭಾವಸು
ಪ್ರಯಸ್ವಂತ
ಪ್ರಸ್ಕಣ್ವ
ಪ್ರಗಾಥ
ಫಂಗುಲ
ಬಭ್ರು

ಬಂಧು
ಬರು
ಬಭ್ರುಹ
ಬಾಹುವೃತ್ನ
ಬಿಭಾಟ್
ಬಿಂದು
ಬುಧ
ಬೃಹನ್ಮತಿ
ಬೃಹದುತ್ತಾ
ಬೃಹದ್ದಿವ
ಬೃಹಸ್ಪತಿ
ಬ್ರಹ್ಮಾತಿಥಿ
ಭರದ್ವಾಜ
ಭರ್ಗ
ಭೂಲಿಂದನ
ಭಾರತ
ಭಿಷಕ್
ಭಿಕ್ಷು
ಭುವನ
ಭೂತಾಂಕ
ಭೃಗು
ಭಾರ್ಗವ
ಮತಿಥಾ
ಮತ್ಸ್ಯ
ಮನು
ಮನು
ಮನ್ಯು
ಮರ್ಮಿನ್
ಮಧುಚ್ಛಂದ
ಮಾಂಧಾತೃ
ಮಾತರಿಶ್ವಾ
ಮುದ್ಗ
ಮೂರ್ಧನ್ವಾನ್
ಮೃತ್ನವಾಹ
ಮೃಳೀಕ
ಮೃತ್ಯು
ಮೇಧಾತಿಥಿ
ಮೇಧ್ಯ
ಮೇಧ್ಯಾತಿಥಿ
ಯಜತ
ಯಮ
ಯಮೀ
ಯಯಾತಿ
ಯಕ್ಷ್ಮನಾಶನ
ಯಜ್ಞ
ಯುಜಗ್ನಿ
ರಕ್ಷೋಹ
ರಾತಹವ್ಯ
ರಾತ್ರಿ
ರಾಮ (ಜಾಮದಗ್ನಿ)
ರುರು
ರುದ್ರ
ರೇಣು
ರೇಭ
ರೋಮಶ
ಲವ
ಲುಶ
ಲೃಹದುಥ್ಥಾ
ಲೋಪಾಮುದ್ರಾ
ವತ್ಸ
ವತ್ಸಪ್ರಿಯ
ವದಸ್ಯು
ವಧ್ರಿ
ವಂದ
ವರ್ಮಿನ್
ವರುಣ
ವರೂಥ
ವರ್ವ
ವರ್ಷಾಗಿರ
ವಸಿಷ್ಠ
ವಸು
ವಸುಕರ್ಣ
ವಸುಕರ್ಣ
ವಸುಕ್ರತು
ವಸುಶ್ರುತ
ವಸೂಯುವ
ವಾಕ್
ವಾಜಶ್ರವ
ವಾಜಿರತ್ನ
ವಾಜೀ
ವಾಮದೇವ

| | | |
|---|---|---|
| ವಸುಕ್ರ | ಶ್ರುತಬಂಧು | ಸಾರ್ಪರಾಜ್ಞೀ |
| ವಾಸುಕ್ರ | ಶ್ರುತಿವಿತ್ | ಸಿಂಧುಕ್ಷಿತ್ |
| ವಿಧಾತೃ | ಶ್ರುಷ್ಟಿಗು | ಸಿಂಧುದ್ವೀಪ |
| ವಿಪ್ರಬಂಧು | ಶ್ರುತಶ್ರವಸ್ | ಸುಕರ್ತ್ರ್ |
| ವಿಮದ | ಶಶೀಯಸೀ | ಸುಧಾತ್ರು |
| ವಿವಸ್ವಾನ್ | ಶೌನಕ | ಸುಶ್ರವಾಃ |
| ವಿಶ್ವಮನ | ಶಂಯು | ಸುಹಸ್ತ್ಯ |
| ವಿಶ್ವವಾರಾ | ಶಂಖ | ಸುಹಾಸ್ತ್ಯ |
| ವಿಶ್ವಸಾಮ | ಶಂಬರ | ಸುವೇದ |
| ವಿಶ್ವಾಮಿತ್ರ | ಶವಶ್ವ | ಸುಪರ್ಣ |
| ವೃಷಾಕಪಿ | ಶಃವಶ್ವ | ಸುಧಾ |
| ವೇನ | ಶ್ರದ್ಧಾ | ಸುಕೀರ್ತಿ |
| ವೈಖಾನಸ | ಶ್ವಾಸ | ಸುಮಿತ್ರ |
| ವೈವಸ್ವತ | ಶ್ಯೇನ | ಸುಧಾವು |
| ವಿಹವ್ಯ | ಸರ್ವ | ಸುತಕ್ಷ |
| ವ್ಯಾಘ್ರಪಾತ್ | ಸದಾಪೃಣ | ಸುದೀತಿ |
| ಶಕ್ತಿ | ಸತ್ಯಶ್ರವ | ಸುಪರ್ಣ (ಕಾಣ್ವ) |
| ಶಕಪೂತ | ಸದಸ್ಯು | ಸುಬಂಧು |
| ಶಚೀ | ಸಪ್ತಂಸ | ಸುತಬಂಧು |
| ಶತಪ್ರಭೇಧನ | ಸಪ್ತ | ಸೂನು |
| ಶರ್ಯಾತಿ | ಸರಮಾ | ಸೂರ್ಯ |
| ಶಬರ | ಸಧ್ರೀ | ಸೋಮ |
| ಶಿಖಂಡಿಸ್ಯಾ | ಸಸು | ಸೋಮಶುಷ್ಮ್ |
| ಶಿಬಿ | ಸಪ್ರಥಾ | ಸೋಮಃಶುಷ್ಮಾಯಣ |
| ಶಿಶು | ಸತ್ಯಧೃತಿ | ಸೌರಭಿ |
| ಶಿರಂಭಿಷ್ಠಾ | ಸನತ್ಕುಮಾರ | ಸಂವರಣ |
| ಶುನಃಶೇಫ | ಸಾರಿಸೃಕ್ವ | ಸಂಕುಸುತ |

ಸಂವರ್ತ
ಸಂಪವನ
ಸ್ವಸ್ತಿ
ಸ್ತಂಭಮಿತ್ರ
ಸೂರ್ಯರಶ್ಮಿ
ಸಿಕತಾ
ಹರಿಯತ್
ಹವಿರ್ಧಾನ
ಹರಿಯಶ್ವ
ಹರಿಮಂತ
ಹಿರಣ್ಯಸ್ತೂಪ
ಹಿರಣ್ಯಗರ್ಭ

## ೩. ದೇವತಾನಾಮ ಪರಿಶಿಷ್ಟ.

ಅಜಃ
ಅಗ್ನಿಃ
ಅದಿತಿಃ
ಅಶ್ವಿನೌ
ಅತೋದೇವಃ
ಅಧಿಶ್ರೈಣಃ
ಅಶ್ವಃ
ಅನ್ನಂ
ಅಪಾನ್ನಪಾಃ
ಅಶ್ವಿನಃ
ಅತ್ರಿಃ
ಅಹಿರ್ಬುರ್ಧ್ನ್ಯಃ
ಅಸುನೀತಿಃ
ಅಸಮಾತಿರಾಜ್ಯಂ
ಅಹಿಃ
ಅರಣ್ಯಾನಿ
ಅರ್ಯಮಾಃ
ಅಚ್ಯುತಕ್ಷಿತಿಃ
ಅಂಬಿಕಾ
ಅಥರ್ವಾಃ
ಅವಸಾನಃ
ಅವಸಾನಪತಿಃ
ಅಂತರಿಕ್ಷಃ
ಅಚಲಃ
ಆಗ್ನಾಯೀ
ಆದಿತ್ಯಾಃ
ಆಪಃ
ಆಪ್ರೀ
ಆಪ್ರಿಯಃ
ಆತ್ಮಾ
ಆಸೀದ
ಇಳಾ
ಇಷುಃ
ಇಷುಧಿಃ
ಇಧ್ಮ
ಇಂದ್ರಃ
ಇಂದ್ರಾಣೀ
ಉಪಲಃ
ಉಲೂಖಲಃ
ಉಷಾ
ಋತುಃ
ಋತ್ವಿಜಃ
ಋಭವಃ
ಋಣಸಂಚಯಃ
ಐರಾವತಃ
ಔದುಂಬರಃ
ಔಷಧಃ
ಕದ್ರುಃ
ಕವಚಃ
ಕಶ್ಯಪಃ
ಕಾಮಃ
ಕಾಲಃ
ಕುಜಃ
ಕೇತುಃ
ಗಾವಃ
ಗುರುಃ
ಗೃಹಂ
ಗ್ರಾವಾಣಃ
ಘೃತಂ
ಚಿತ್ರಃ
ಚಿತ್ರಗುಪ್ತಃ
ಚಂದ್ರಃ
ಜ್ಯಾತಃ

ತನೂನಪಾ
ತ್ವಷ್ಟಾ
ದಕ್ಷಿಣಾ
ದಧಿಕ್ರಾ
ದಾನಂ
ದಾಕ್ಷಾಯಿಣೀ
ದುಂದುಭಿಃ
ದೇವಾಃ
ದೇವಪತ್ನ್ಯಃ
ದಿಶಃ
ದ್ಯಾವಾ
ದ್ರವಿಣೋದಾ
ಧನ್ವಂತರೀ
ಧನ್ವಂತರೀಪಾರ್ಶದಃ
ಧರ್ಮಃ
ಧರ್ಮರಾಜಃ
ಧನಂ
ಧನುಃ
ಧರ್ಮಋಚಃ
ಧ್ರುವಃ
ಧ್ರುವಭೂಮಃ
ಧ್ರುವಕ್ಷಿತಿಃ
ನಕ್ತಂ
ನದ್ಯಃ
ನಾರಾಯಣಃ
ನಾರಾಶಂಸಃ
ನಿರ್ಋತಿಃ

ನೀಲಃ
ಪರಮೇಷ್ಠಿಃ
ಪಣಯಃ
ಪವಮಾನಃ
ಪರ್ಜನ್ಯಃ
ಪರ್ವತಃ
ಪಶವಃ
ಪಿತರಃ
ಪಿತೃಮೇಧಾ
ಪುಷ್ಟಿಃ
ಪೂಷಾ
ಪೃಥ್ವೀ
ಪ್ರಚೇತಸಃ
ಪ್ರಜಾಪತಿಃ
ಪ್ರತೋದಃ
ಪ್ರಭೂತಿಃ
ಬರ್ಹಿಃ
ಬೃಹಸ್ಪತಿಃ
ಬ್ರಹ್ಮಾ
ಬ್ರಹ್ಮಣಸ್ಪತಿಃ
ಭಗಃ
ಭಾಗಃ
ಭಾರತೀ
ಭೂತಿಃ
ಮಾರುತಃ
ಮಹಾಪಿತರಃ
ಮತ್ಸ್ಯಾಃ

ಮುಸಲಃ
ಮೃತ್ಯುಃ
ಮಂಡೂಕಃ
ಯಮಃ
ಯಮೀ
ಯುದ್ಧಭೂಮಿಃ
ಯೂಪಃ
ರಥಃ
ರಥಾಂಗಾನಿ
ರಥಗತಿಃ
ರಥವೀಥಿಃ
ರಶ್ಮಯಃ
ರಕ್ಷಾಂಸಿ
ರಕ್ಷೋಹಾಗ್ನಿಃ
ರಾತ್ರಿಃ
ರುದ್ರಃ
ರುದ್ರಪಾರ್ಷದಾಃ
ರುದ್ರಪಾರ್ಷದ್ಯಃ
ರುದ್ರಾಣೀ
ರೋದಸೀ
ವನಸ್ಪತಿಃ
ವರ್ಮ
ವರುಣಃ
ವರ್ಮಣಾ
ವಸವಃ
ವಸಿಷ್ಠಃ
ವಸುರೋಚಿಷ್

ಸೀಲಃ
ವಾಜೀ
ವಾಸ್ತುಪಾಲೀ
ವಾಸ್ತೋಷ್ಪತಿಃ
ವಾಯುಃ
ವಿಷ್ಣುಃ
ವಿಷ್ಣುಪಾರ್ಷದಾಃ
ವಿಷ್ಣುಪಾರ್ಷದ್ಯಃ
ವಿಪ್ಯಾಃ
ವಿಘ್ನಃ
ವಿಘ್ನಪಾರ್ಷದಾಃ
ವಿಘ್ನಪಾರ್ಷದ್ಯಃ
ವಿಶ್ವೇದೇವಃ
ವೈದಶ್ವಿಃ
ವೈಶ್ವಾನರೋಽಗ್ನಿಃ
ವೈಶ್ರವಣಃ
ಶತಧೂಮಃ

ಮಿತ್ರಃ
ಶನಿಃ
ಶಶೀಯಶೀ
ಶುಕ್ರಃ
ಶುನಃ
ಶ್ರೀಃ
ಸರ್ವಃ
ಸರಮಃ
ಸರಣ್ಯುಃ
ಸರಸ್ವಾನ್
ಸರಸ್ವತಿಃ
ಸವಿತೃ
ಸಮೂಹಾನಿ
ಸಾರಥಿಃ
ಸಾಧ್ಯಾಃ
ಸಿನೀವಾಲೀ
ಸೀತಾ

ವಾಕ್
ಸೂರ್ಯಃ
ಸೂರ್ಯಪ್ರಭಾ
ಸೋಮಃ
ಸೋಮಕಃ
ಸ್ಕಂದಃ
ಸ್ಕಂದಪಾರ್ಷದಾಃ
ಸ್ಕಂದಪಾರ್ಷದ್ಯಃ
ಸ್ವಧಾ
ಸ್ವಾಹಾ
ಸ್ಥಾಣುಃ
ಹರಿಃ
ಹಸ್ತಃ
ಹಸ್ತಜ್ಞಃ
ಹೋತಾ
ಕ್ಷೇತ್ರಪತಿಃ
ಜ್ಞಾನಂ

## ೪. ಛಂದೋನಾಮ ಪರಿಶಿಷ್ಟ

ಅನುಷ್ಟುಪ್
ಅಷ್ಟಿಃ
ಅತ್ಯಷ್ಟಿಃ
ಅಭಿಸಾರಿಣಿ
ಅತಿನಿಚೃಚ್
ಅತಿಜಗತೀ
ಅತಿಶಕ್ವರೀ
ಅತಿಧೃತಿಃ
ಅಕ್ಷರಪಂಕ್ತಿಃ

ಆಸಾರಪಂಕ್ತಿಃ
ಉಷ್ಣಿಕ್
ಊರ್ಧ್ವಬೃಹತೀ
ಏಕಪದಾ
ಕಕುಭೆ
ಕಕುಭಿಃ
ಗಾಯತ್ರೀ
ಜಗತೀ
ಜ್ಯೋತಿಃ

ಜ್ಯೋತಿಷ್ಮತೀ
ತಾರಾಪಂಕ್ತಿಃ
ತ್ರಿಷ್ಟುಪ್
ದ್ವಿಪದಾ
ಧೃತಿಃ
ನ್ಯಂಕುಸಾರಿಣೀ
ಪಂಕ್ತಿಃ
ಪಾದನಿಚೃಚ್
ಪಿಪೀಲಿಕಾಮಧ್ಯಾ

| | | |
|---|---|---|
| ಪುರಉಷ್ಣಿಕ್ | ಬೃಹತೀ | ವಿರಾಟ್‌ಪೂರ್ವ |
| ಪ್ರಗಾಥಾ | ಮಹಾಪಂಙ್ಕ್ತಿಃ | ವಿಪರೀತಾ |
| ಪ್ರಗಾಥಂ | ಮಹಾಬೃಹತೀ | ವಿಷಮಪದಾ |
| ಪ್ರತಿಷ್ಠಾ | ಯವಮಧ್ಯಾ | ಶಕ್ವರೀ |
| ಪ್ರಸ್ತಾರಪಂಙ್ಕ್ತಿಃ | ವೃಷಃ | ಶಕ್ತಿಃ |
| ಪಂಙ್ಕ್ತ್ಯುತ್ತರಾ | ವರ್ಧಮಾನ | ಸತೋಬೃಹತೀ |
| ಪಙ್ಕ್ತಿಃ | ವಿರಾಟ್ | ಹ್ರಸೀಯಸೀ |
| ಬಭಸ್ನುಷಾ | | |



## ಈ ಲೇಖಕರ ಇತರ ಗ್ರಂಥಗಳು.

| | | | |
|---|---|---|---|
| ೧. | ಯಕ್ಷನಾಟಕಗಳು. | (ಅಚ್ಚಾಗಿದೆ) | ೨—೦—೦ |
| ೨. | ವಾಲ್ಮೀಕಿಯ ರಾಮ-ವ್ಯಾಸನ ಕೃಷ್ಣ | (ಅಚ್ಚಿನಲ್ಲಿ) | ೧—೦—೦ |
| ೩. | ಕನ್ನಡ-ಸಂಸ್ಕೃತ ಲಘುಕ್ರಿಯಾಕೋಶ | ( ,, ) | ೦—೮—೦ |
| ೪. | ವೇದಕಾಲದ ವಿದ್ಯಾವತಿಯರು | (ಅಚ್ಚಿಗೆ ಸಿದ್ಧವಾಗಿದೆ) | |
| ೫. | ಯಜ್ಞಫಲ (ನಾಟಕ.) | ( ,, ) | |
| ೬. | ಪ್ರಾಚೀನಭಾರತದ ಭೌತಿಕ ವಿಜ್ಞಾನ | ( ,, ) | |
| ೭. | ಸುರಭಾರತೀ ದಿವ್ಯದರ್ಶನ | ( ,, ) | |
| ೮. | ವೇದದ ಕಥೆಗಳು | ( ,, ) | |
| ೯. | ಕನ್ನಡ-ಸಂಸ್ಕೃತ ಶಬ್ದಕೋಶ | ( ,, ) | |
| ೧೦ | ರಾಮಾಯಣ ಕಾಲದ ಗುರುತುಗಳು. | ( ,, ) | |

—:ಮುದ್ರಕರು:—
...ಮುದ್ರಣಾಲಯ, ಚಳ್ಳಕೆರೆ.



## ಕರ್ಣಾಟಕದ ಪ್ರಾಚೀನಕಲೆಯಾದ ಬಯಲಾಟಗಳ ಬಗ್ಗೆ ಬರೆದ

ರಾ. ಭ. ಹಾಸಣಗಿಯವರ

# ಯಕ್ಷನಾಟಕಗಳು.

ಪ್ರಕಾಶಕರು:— **ಪರ್ಣಕುಟೀ ಗ್ರಂಥಮಾಲೆ, ಧಾರವಾಡ.**

ಈವರೆಗೆ ಈ ಕುರಿತು ಪ್ರಕಟವಾದ ಪುಸ್ತಕಗಳಲ್ಲಿ ಇದು ಸರ್ವೋತ್ತಮವಾದುದು. ಆಳವಾದ ಅಭ್ಯಾಸ ಮಾಡಿದವರಾದ ಇವರ ಗ್ರಂಥಕರ್ತೃಗಳು ಯಕ್ಷನಾಟಕಗಳ ಹುಟ್ಟು-ಹಬ್ಬುಗಳ ಕುರಿತಾಗಿಯೂ, ಅದರ ವಿಶಿಷ್ಟತೆಯ ಕುರಿತಾಗಿಯೂ ಅಮೂಲ್ಯವಾದ ಆಧಾರಗಳನ್ನಿಲ್ಲಿ ವಿವರಿಸಿದ್ದಾರೆ. ಈ ಕಲೆಯ ಕುರಿತು ಅಭ್ಯಾಸಮಾಡುವವರಿಗೂ, ಪರಿಚಯ ಮಾಡಿಕೊಳ್ಳುವವರಿಗೂ ಇದು ತುಂಬಾ ಉಪಯುಕ್ತವಾಗಿದೆ. ಇದಕ್ಕೆ ಧಾರವಾಡದ ವಿದ್ಯಾವರ್ಧಕ ಸಂಘದ ಬಹುಮಾನ ದೊರೆತಿರುವುದೆಂಬುದು ಸ್ತುತ್ಯವಾಗಿದೆ.

**ಜಯಕರ್ಣಾಟಕ ವಾರಪತ್ರಿಕೆ.**

ಎಲ್ಲಿಯೂ ಇವರು ತಮ್ಮ ಮತವನ್ನು ಓದುಗರ ಮೇಲೆ ಹೊರಿಸ ಹೋಗುವುದಿಲ್ಲ. ಸಂಶೋಧನೆಗೆ ದೊರೆತ ವಿಷಯವನ್ನು ಓದುಗರ ಮುಂದೆ ಇಟ್ಟಿರುವರು. ಪಾತ್ರಗಳ ಯೋಗ್ಯತೆಯ ವಿಷಯಕ್ಕೆ ಒಳ್ಳೇ ರೀತಿಯಿಂದ ಪ್ರತಿಪಾದಿಸಿರುವರು. ಪರಿಶಿಷ್ಟದಲ್ಲಿ ಕೊಟ್ಟ ದ್ರೌಪದೀ ಪ್ರತಾಪದ ವಿಮರ್ಶೆಯನ್ನು ಓದಿದರೆ ನಾಟಕವನ್ನು ನೋಡಿದಂತಾಗುವುದು. ಈ ಗ್ರಂಥಕರ್ತರಂತೆ ಆಳವಾಗಿ ಅಭ್ಯಾಸ ಮಾಡಿದವರು ವಿರಳ. ಕರ್ನಾಟಕಕ್ಕೆ ಈ ಗ್ರಂಥದಿಂದ ಉಪಕಾರಮಾಡಿರುವರು.

**ವಿಶಾಲಕರ್ಣಾಟಕ**

ಪ್ರಕೃತಗ್ರಂಥದಲ್ಲಿ ಯಕ್ಷನಾಟಕಕ್ಕೆ ಬೇರೆ ಬೇರೆ ಹೆಸರುಗಳಿರುವ ವಿಷಯ, ಅವುಗಳಮೇಲೆ ಸಂಸ್ಕೃತನಾಟಕಗಳು ಬೀರಿರುವ ಪ್ರಭಾವ, ಯಕ್ಷನಾಟಕಗಳ ವೈಶಿಷ್ಟ್ಯ ಇವುಗಳನ್ನು ವಿವರಿಸಿ, ದ್ರೌಪದೀಪ್ರತಾಪ, ರುಕ್ಮಾಂಗದ ಎರಡು ನಾಟಕಗಳ ವಿಮರ್ಶೆಯನ್ನು ಕೊಟ್ಟಿದ್ದಾರೆ. ಇದರ ಉದ್ದೇಶವು ಯಕ್ಷನಾಟಕಗಳ ಕುರಿತು ವಿವರಿಸಬೇಕಾದುದನ್ನೆಲ್ಲ ಪರಿವಿಡಿಹಿಡಿದು ಒಕ್ಕಡೆ ಕೂಡಿಸಿಕೊಡುವುದೇ ಆಗಿದೆ.

**ಪುಸ್ತಕಪ್ರಪಂಚ**

---

—ಮುದ್ರಕರು—
ಶ್ರೀ ಸತ್ಯನಾರಾಯಣ ಮುದ್ರಣಾಲಯ, ಚಳ್ಳಕೆರೆ.